# ಕ್ರಿಯಾ-ನವಕರ್ನಾಟಕ ಜಂಟಿ ಪ್ರಕಟಣೆ

# ಮಾರ್ಕ್ಸ್ 200 – ಕ್ಯಾಪಿಟಲ್ 150









**ಪ್ರಕಟಣಪೂರ್ವ ಕೂಪನ್ ಖರೀದಿಸಿ**

ಈ ಮಾಲಿಕೆಯ ಏಳು ಪುಸ್ತಕಗಳಲ್ಲಿ ನಾಲ್ಕು ಈಗಾಗಲೇ ಪ್ರಕಟವಾಗಿದ್ದು ಉಳಿದವನ್ನು ಇದೇ ಸೆಪ್ಟೆಂಬರ್ ತಿಂಗಳೊಳಗಾಗಿ ಹೊರತರಲು ಉದ್ದೇಶಿಸಲಾಗಿದೆ

- ಬಂಡವಾಳ – ಸಂಪುಟ 1
- ಆರ್ಥಿಕ ಮತ್ತು ತತ್ವಶಾಸ್ತ್ರೀಯ ಕೈಬರಹಗಳು–1844
- ಲೂಯಿ ಬೊನಪಾರ್ಟೆಯ 18ನೇ ಬ್ರೂಮೇರ್

**ಈ ಏಳು ಪುಸ್ತಕಗಳ ಒಟ್ಟು ಮುಖಬೆಲೆ ರೂ. 2100/–**
**ಪ್ರಕಟಣಪೂರ್ವ ರಿಯಾಯಿತಿ ಬೆಲೆ ರೂ. 1400/–**

**ರೂ.700/- ರಿಯಾಯಿತಿ**













ಇಂದೇ ರೂ. 1400 ಪಾವತಿಸಿ ಪ್ರಕಟಣಪೂರ್ವ ಕೂಪನ್ ಖರೀದಿಸಿ, ನಿಮ್ಮ ಪ್ರತಿಗಳನ್ನು ಕಾಯ್ದಿರಿಸಿಕೊಳ್ಳಿ. ಪುಸ್ತಕಗಳನ್ನು ಅಂಚೆ/ಕೊರಿಯರ್ ಮೂಲಕ ನಿಮ್ಮ ಮನೆಬಾಗಿಲಿಗೆ ತಲುಪಿಸಲಾಗುವುದು. ರವಾನೆ ಉಚಿತ. ನಿಮ್ಮ ಗೆಳೆಯರಿಗೆ, ನೀವು ಓದಿದ ಶಾಲೆ-ಕಾಲೇಜುಗಳಿಗೆ, ಇತರ ಸಂಘ-ಸಂಸ್ಥೆ- ಗ್ರಂಥಾಲಯಗಳಿಗೆ ಈ ಪುಸ್ತಕಗಳನ್ನು ಉಡುಗೊರೆಯಾಗಿ ನೀಡಿ ಈ ಯೋಜನೆಯನ್ನು ಯಶಸ್ವಿಗೊಳಿಸಲು ಸಹಕರಿಸಿ.

ಪ್ರಕಟಣಪೂರ್ವ ಕೂಪನ್ ಖರೀದಿಸಲು ಒಂದು ಸೆಟ್‌ಗೆ ರೂ. 1400ರಂತೆ ಹಣವನ್ನು ನಮ್ಮ ಮಳಿಗೆಗಳಲ್ಲಿ ನಗದು ಪಾವತಿಸಿ, ಇಲ್ಲವೇ ನಮ್ಮ ಬ್ಯಾಂಕ್ ಖಾತೆಗೆ ವರ್ಗಾಯಿಸಿ ಅಥವಾ ಆನ್‌ಲೈನ್ ಮೂಲಕ ಸಂದಾಯ ಮಾಡಿ. ಬ್ಯಾಂಕ್ ಖಾತೆಯ ವಿವರಗಳು : Current A/c No. 0788201010612. IFSC Code CNRB0000788 ಕೆನರಾ ಬ್ಯಾಂಕ್, ಮಾಧವನಗರ, ಬೆಂಗಳೂರು (ಬ್ಯಾಂಕ್ ಖಾತೆಗೆ ನೇರವಾಗಿ ಹಣ ವರ್ಗಾಯಿಸಿದವರು navakarnataka@gmail.comಗೆ ವಿವರಗಳನ್ನು, ಹಾಗೂ ದಾಖಲೆಗಳನ್ನು ಒದಗಿಸುವುದು.)

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

ಪ್ರಧಾನ ಕಛೇರಿ : ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-560 001. ಫೋನ್ : 080-22161900/01
ಮೊಬೈಲ್ : 9972590106 e-mail : navakarnataka@gmail.com

Shop Online www.navakarnataka.com

ಶಾಖೆಗಳು

* ಕೆಂಪೇಗೌಡ ರಸ್ತೆ, ಬೆಂಗಳೂರು-560 009. ಮೊ : 9480686859
* ಗಾಂಧಿನಗರ, ಬೆಂಗಳೂರು-560 009. ಮೊ : 9480686862
* ಕೆ. ಎಸ್. ರಾವ್ ರಸ್ತೆ, ಮಂಗಳೂರು-575 001. ಮೊ : 9480686864
* ಬಲ್ಮಠ, ಮಂಗಳೂರು-575 001. ಮೊ : 9480686866
* ರಾಮಸ್ವಾಮಿ ವೃತ್ತ, ಮೈಸೂರು-570 024. ಮೊ : 9480686863
* ಸ್ಟೇಷನ್ ರಸ್ತೆ, ಕಲಬುರಗಿ-585 102. ಮೊ : 9480686865

# ಹೊಸತು

ಒಳಗೇನಿದೆ?

## ನೆಮ್ಮದಿಯ ನಾಳೆ ನಮ್ಮದು


ದೆಹಲಿಯ ಕೆಂಪುಕೋಟೆಯ ಖಾಸಗೀಕರಣ
ಮುರಳಿಧರ ಚಿಕ್ಕಮಗಳೂರು ... ೧೫

ಪತ್ರಿಕೆ ನಡೆಸುವ ಹಾದಿ ಸುಗಮವಲ್ಲ – ಒಂದು ಅನುಭವ
ಸಿ. ಆರ್. ಕೃಷ್ಣರಾವ್ ... ೫೯

ಉಳುವಾ ಯೋಗಿಯ ನೋಡಲ್ಲಿ... ಡಾ॥ ಸಿದ್ದನಗೌಡ ಪಾಟೀಲ ... ೧೭

ಉಡುಗೊರೆ ಪರಿಮಳ ಜಿ. ಕಮಟಾರ್ ... ೪೩

ಸ್ವಾತಂತ್ರ್ಯೋಧನ ಮದುವೆ ಶ್ರೀಸುಮಿತ್ರಾಸುತ ಅಗಸಬಾಳ ... ೨೩

ವಿನಾಶಕಾಲೇ ವಿಪರೀತ ಬುದ್ಧಿ ಮರಾಠಿ ಮೂಲ : ಲಕ್ಷ್ಮಿಬಾಯಿ ಟಿಳಕ
ಕನ್ನಡಕ್ಕೆ : ಚಂದ್ರಕಾಂತ ಪೋಕಳೆ ... ೫೧

ಕಾವ್ಯಲೋಕ ೨೦, ೩೦, ೩೨, ೪೨, ೪೪, ೬೦, ೬೨

ಆಧುನಿಕ ಭಾರತದ ರಾಜಕೀಯ ಚಿಂತನೆಯಲ್ಲಿ ಸ್ವಾತಂತ್ರ್ಯದ
ಕುರಿತಿರುವ ಕೆಲವು ನಿಲುವುಗಳು ಡಾ॥ ಪ್ರಕಾಶ ದೇಸಾಯಿ ... ೯

ಅಂಬೇಡ್ಕರ್ ಪುಸ್ತಕ ಪ್ರೀತಿ ಡಾ॥ ಎಚ್. ಟಿ. ಪೋತೆ ... ೩೧

ಕಡಲ ಕಿನಾರೆಯ ಕಾಯಕಜೀವಿ ಪರಶುರಾಮ ಜ್ಯೋತಿ ಎ. ... ೩೭

ವಿಜಯಪುರ ಜಿಲ್ಲೆಯ ಹಣ್ಣು ಮತ್ತು ತರಕಾರಿ ಮಾರಾಟ ಮಾಡುತ್ತಿರುವ
ಮುಸ್ಲಿಂ ಮಹಿಳೆಯರ ಸ್ಥಿತಿಗತಿ ಹಮೀದಾಬಾನೂ ಅ. ಅಥಣಿ ... ೩೩

ದಮನಿತ ಅಸ್ಪೃಶ್ಯ ತಳ ಸಮುದಾಯಗಳು ಮತ್ತು ಸಾಮಾಜಿಕ
ಬಹಿಷ್ಕೃತತೆ – ಸಮಾಜಶಾಸ್ತ್ರೀಯ ವಿಶ್ಲೇಷಣೆ ಸದಾಶಿವ ಮರ್ಜಿ ... ೪೭

ಮಹಾಶ್ವೇತಾದೇವಿ ಅವರ ಕಥೆಗಳಲ್ಲಿ ಜೈವಿಕ ಅನನ್ಯತೆಯ ನೆಲೆಗಳು
ಡಾ॥ ಸುಧಾ ಬಿ. ಎಸ್. ... ೫೭

ಸಾಮಾಜಿಕ ಸೌಹಾರ್ದತೆಯ ಸವಾಲುಗಳು
ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ ... ೫೩

ನಾಗರಹೊಳೆ ರಾಷ್ಟ್ರೀಯ ಉದ್ಯಾನವನ ಮತ್ತು ಆದಿವಾಸಿಗಳ ಅತಂತ್ರ ಬದುಕು
ಮೇಜರ್ ರಾಘವ ಬಿ. ... ೨೭

ಸಿಟ್ಟಾದರು ರಾಯರು! ಪರಂಜ್ಯೋತಿ ... ೨೬

ನಾನು ಓದಿದ ಪುಸ್ತಕ : 'ಪ್ರತ್ಯೇಕ ಬುದ್ಧ ಅಲ್ಲಮ ಪ್ರಭು' – ಕೃತಿಯ ಅವಲೋಕನ
ಡಾ॥ ಎನ್. ಜಗದೀಶ ಕೊಪ್ಪ ... ೪೧

ವಿಶ್ವವೀಕ್ಷಣೆ : ಅಧ್ಯಕ್ಷ ಟ್ರಂಪ್ ಪ್ರಾರಂಭಿಸಿರುವ ವಾಣಿಜ್ಯ ಸಮರ
ಸೀಯಾರ್ಕೆ ... ೧೪

ನಭಾವಲೋಕನ : ನಾಲ್ಕು ಗ್ರಹಗಳೂ ಸಂಜೆಯ ಆಕಾಶದಲ್ಲಿ
ಡಾ॥ ಬಿ. ಎಸ್. ಶೈಲಜಾ ... ೩೬

ಹೊಸ ಓದು ಡಾ॥ ರಂಗಾರೆಡ್ಡಿ ಕೋಡಿರಾಂಪುರ ... ೫೬

ತಿಳಿವು : ಸವಾಲೆಂದರೆ ಯಾವುದು? ಜಿ. ರಾಮಕೃಷ್ಣ ... ೬೧



**ಚಿತ್ರಗಳು :** ಕಮಲಂ ಅರಸು, ನಾಮದೇವ ಕಾಗದಗಾರ, ಸೃಜನ್, ಆದರ್ಶ ಪೈ, ಗೋಪಿ ಹಿರೇಬೆಟ್ಟು

**ಮುಖಪುಟ :** ಶ್ರೀ ಶಶಿಧರಸ್ವಾಮಿ ಹಿರೇಮಠ ಅವರು ತೆಗೆದ ಛಾಯಾಚಿತ್ರ

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ


## ಈ ತಿಂಗಳು



ಕಾನೂನು ಕೈಗೆತ್ತಿಕೊಂಡು ಸುಳ್ಳು ವದಂತಿಗಳ ಆಧಾರದ ಮೇಲೆ ಜಜ್ಜಿ ಸಾಯಿಸುವ ಪ್ರಕರಣಗಳು ಈಚೆಗೆ ಹೆಚ್ಚಾಗುತ್ತಿವೆ. ಅದಕ್ಕೆ ಇಂಗ್ಲಿಷಿನಲ್ಲಿ 'ಲಿಂಚಿಂಗ್' ಎಂದು ಕರೆಯುತ್ತಾರೆ. ಹಿಂದೆ ಒಂದಾನೊಂದು ಕಾಲದಲ್ಲಿ ಧರ್ಮ ವಿರೋಧಿಗಳನ್ನು, ಕಳ್ಳಕಾಕರನ್ನು, ವೇಶ್ಯೆಯರನ್ನು, ಮಾಟ ಮದ್ದು ಮಾಡುವವರನ್ನು ಸಾರ್ವಜನಿಕವಾಗಿ ಥಳಿಸಿ, ನೇಣು ಹಾಕುತ್ತಿದ್ದರು. ಈಗ ಭಾಜಪ ಸರಕಾರದ ಆಡಳಿತದಲ್ಲಿ 'ಹಿಂದುತ್ವ'ವಾದಿಗಳು ಅಂಥದೇ ಕೃತ್ಯಗಳಲ್ಲಿ ತೊಡಗುತ್ತಿದ್ದಾರೆ. ಮಕ್ಕಳ ಕಳ್ಳರು ಎಂದು ಬಡಿದು ಕೊಲ್ಲುವುದು, ಕಸಾಯಿಖಾನೆಗೆ ದನ ಸಾಗಿಸುತ್ತಿದ್ದರು, ದನದ ಮಾಂಸ ಇರಿಸಿಕೊಂಡಿದ್ದರು, ಇತ್ಯಾದಿಯಾಗಿ ಆರೋಪಿಸಿ ಕಾನೂನು ಪಾಲಕರಾದ ಪೊಲೀಸರ ಎದುರೇ ವ್ಯಕ್ತಿಗಳನ್ನು ಜಜ್ಜಿ ಸಾವಿಗೀಡುಮಾಡುತ್ತಿದ್ದಾರೆ. ಆರೋಪಿಗಳಲ್ಲಿ ಮುಸಲ್ಮಾನರೇ ಹೆಚ್ಚು. ದನದ ಮಾಂಸ ಇರಿಸಿಕೊಂಡಿದ್ದನೆಂದು ಮನೆಯ ಮೇಲೆ ದಾಳಿ ನಡೆಸಿ ಮುಸ್ಲಿಮ್ ಒಬ್ಬನನ್ನು ಸಂಘಪರಿವಾರದ ಜನ ಕೊಂದುಹಾಕಿದರು ದೆಹಲಿ ಸಮೀಪದ ಫರಿದಾಬಾದ್ ಎಂಬಲ್ಲಿ. ಇದು ಹಿಂದೂ ಧರ್ಮ ರಕ್ಷಣೆಯ ಹೆಸರಿನಲ್ಲಿ ನಡೆದ ಮೊದಲ ಕಗ್ಗೊಲೆ ಎಂದು ನೆನಪು. ಆನಂತರ ಸಾಲುಸಾಲಾಗಿ ಇಂಥ ಪ್ರಕರಣಗಳು ಜರುಗಿವೆ. ಭಾಜಪ ಪ್ರಬಲವಾಗಿರುವ ಕಡೆಗಳಲ್ಲಿಯೇ ಇಂಥ ಪ್ರಕರಣಗಳು ಜಾಸ್ತಿ. ಉದಾಹರಣೆಗೆ ಉತ್ತರಪ್ರದೇಶ, ಕರ್ನಾಟಕದಲ್ಲಿ ದಕ್ಷಿಣ ಕನ್ನಡ. ನಾವು ಭಯೋತ್ಪಾದಕರಲ್ಲ ಎಂದು ಕರೆದುಕೊಳ್ಳುವ ಭಜರಂಗದಳ, ಶ್ರೀರಾಮಸೇನೆ, ಹನುಮಾನ್ ಸೇನೆ, ಹಿಂದೂ ಜಾಗರಣ ಸಮಿತಿ ಸಿಪಾಯಿಗಳೇ ಇಂಥ ಕೃತ್ಯಗಳಲ್ಲಿ ತೊಡಗಿ ಕೊಂಡಿರುವವರು. ಇವರು 'ಇಸ್ಲಾಮಿಕ್ ರಾಜ್ಯ' ಸ್ಥಾಪಿಸಲು ಹೊರಟಿರುವ ಉಗ್ರರಿಗೇನೂ ಕಡಿಮೆ ಇಲ್ಲ. ಆರೋಪಿಗಳನ್ನು ಪೊಲೀಸರ ವಶಕ್ಕೆ ಒಪ್ಪಿಸದೆ ಬಡಿದು ಜೀವ ತೆಗೆಯುವವರೆಲ್ಲ ಉಗ್ರರೇ. ಪೊಲೀಸರೇ ಆರೋಪಿಯನ್ನು ಗುಂಡುಹಾರಿಸಿ ಕೊಂದಾಗ ಅದು 'ಎನ್‌ಕೌಂಟರ್' ಆಗುತ್ತದೆ. ಯಾವುದಾದರೂ ಕೊಲೆಯೋ, ಪ್ರಾಣಹಾನಿಯೋ, ಅಪರಾಧವೋ, ಖಂಡನೀಯವೆ. ಸುಪ್ರೀಮ್ ಕೋರ್ಟ್ ಈ ಲಿಂಚಿಂಗ್ ಕುರಿತು ಆಕ್ಷೇಪಿಸಿರುವುದೂ ಹೊಸ ಕಾನೂನನ್ನು ತರಲು ಕೇಂದ್ರ ಸರಕಾರವನ್ನು ಒತ್ತಾಯಿಸಿರುವುದು ಸ್ವಾಗತಾರ್ಹ.

ಬಿಹಾರ, ಉತ್ತರಪ್ರದೇಶ ಮುಂತಾದ ರಾಜ್ಯಗಳಲ್ಲಿ ಜಮೀನುದಾರರು ರೈತಾಪಿ ಜನರನ್ನು ಬಗ್ಗುಬಡಿಯಲು ಖಾಸಗಿ ಸೇನೆಯನ್ನು ಕಟ್ಟಿಕೊಳ್ಳುವ ಕ್ರಮ ಇತ್ತು. ಉತ್ತರಪ್ರದೇಶದ ಪಶ್ಚಿಮ ಭಾಗದಲ್ಲಿ ೨೦೧೬ರಲ್ಲಿ, ಮೋದಿ ಸರಕಾರದ ಆಡಳಿತದ ಎರಡು ವರ್ಷಗಳ ನಂತರ 'ಹಿಂದು ಸ್ವಾಭಿಮಾನ ಸೇನೆ' ಎಂಬ ಖಾಸಗಿ ಸೇನೆ ಸ್ಥಾಪನೆಗೊಂಡಿತು. ಇದು ೧೫,೦೦೦ ಬಲವುಳ್ಳ ಸೇನೆ. ದಾಸ್ನಾ, ಮೀರತ್, ಮುಜಫರ್ ನಗರ ಮುಂತಾದ ಕಡೆಗಳಲ್ಲಿ ತರಬೇತಿ ಕೇಂದ್ರಗಳನ್ನು ಹೊಂದಿತ್ತು. ಯುವಜನರಿಗೆ, ಬಾಲಕ ಬಾಲಕಿಯರಿಗೆ ಲಾಠಿ, ಪಿಸ್ತೂಲು ಮತ್ತಿತರ ಅಸ್ತ್ರಗಳ ಬಳಕೆಯ ತರಬೇತಿ ನೀಡಲಾಗುತ್ತಿದೆ. ಆರೆಸ್ಸೆಸ್‌ನಲ್ಲಿ ಮೊದಲಿನಿಂದಲೂ ಲಾಠಿ ಬಳಕೆಯ ತರಬೇತಿ ನೀಡುತ್ತಿದ್ದುದು, ಕವಾಯಿತುಗಳಲ್ಲಿ ಶಿಸ್ತಿನಿಂದ ಲಾಠಿ ಭುಜಕ್ಕೆ ಏರಿಸಿ ಹೆಜ್ಜೆಹಾಕುವುದು ಪರಿಚಿತ. ಇದಕ್ಕೆ ಕಾನೂನಿನ ಅಡ್ಡಿ ಇಲ್ಲ ಎನ್ನುವುದು ಒಂದು ನೆಪ ಅಷ್ಟೆ. ಪರಿವಾರದ ಅಂಚು ಎನಿಸಿಕೊಳ್ಳುತ್ತಿರುವ ಈ ಉಗ್ರರ ಉಪಟಳವನ್ನು ಮೋದಿಯವರು ಚಕಾರವೆತ್ತದೆ ನುಂಗಿಕೊಳ್ಳುತ್ತಿರುವುದು ಸೋಜಿಗದ ಸಂಗತಿ.

✴ ✴ ✴

'ತಾಜ್‌ಮಹಲ್' ಪ್ರಪಂಚದ ಅದ್ಭುತಗಳಲ್ಲಿ ಒಂದು. ಪ್ರವಾಸಿಗಳನ್ನು ಆಕರ್ಷಿಸುವ ಕೇಂದ್ರ. ದೇಶವಿದೇಶಗಳಿಂದ ಅಮೃತಶಿಲೆಯಲ್ಲಿ ನಿರ್ಮಿಸಲಾಗಿರುವ ಈ ಇತಿಹಾಸ ಪ್ರಸಿದ್ಧ ಸ್ಮಾರಕವನ್ನು ನೋಡಲು ಬರುತ್ತಾರೆ. ಭಾರತದಲ್ಲಿ ಮುಸಲ್ಮಾನರ ಆಡಳಿತದ ಕಾಲದಲ್ಲಿ ಸಂಗೀತಕ್ಕೆ, ವಾಸ್ತುಶಿಲ್ಪಕ್ಕೆ, ಉದ್ಯಾನಗಳಿಗೆ ನೀಡಿದ ಕಾಣಿಕೆ ಅಪಾರ. ಆದರೆ ಉಗ್ರ ಹಿಂದುತ್ವವಾದಿಗಳಿಗೆ ಅದು ಅಪಥ್ಯ. ಭಾರತದಲ್ಲಿ ಮುಸಲ್ಮಾನರ ಆಳ್ವಿಕೆಯ ಕಾಲದ ನೆನಪನ್ನು ಅಳಿಸಿಹಾಕುವ ದೊಡ್ಡ ಪ್ರಯತ್ನವನ್ನೇ ಹಿಂದೂ ಸನಾತನಿಗಳು ಮಾಡುತ್ತಿದ್ದಾರೆ. ಅದಕ್ಕಾಗಿ ಚರಿತ್ರೆಯನ್ನು

(೬ನೇ ಪುಟಕ್ಕೆ )




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ–೨೦ ಸಂಚಿಕೆ–೧ ಆಗಸ್ಟ್ ೨೦೧೮



■ *ಗೌರವ ಸಂಪಾದಕ*

ಜಿ. ರಾಮಕೃಷ್ಣ

■ *ಸಂಪಾದಕ-ಮುದ್ರಕ-ಪ್ರಕಾಶಕ*

ಸಿದ್ದನಗೌಡ ಪಾಟೀಲ

■ *ಸಹಸಂಪಾದಕರು*

ಎಂ. ಅಬ್ದುಲ್ ರೆಹಮಾನ್ ಪಾಷ

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

■ *ವ್ಯವಸ್ಥಾಪಕ*

ಎ. ರಮೇಶ ಉಡುಪ



■ *ಮುದ್ರಣ*

ಶ್ರೀ ವಿನಾಯಕ ಪ್ರಿಂಟರ್ಸ್

೭೩೮/೧೦, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು – ೫೬೦ ೦೧೦

■ *ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೫೯

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – ೫೬೦ ೦೦೧

ದೂರವಾಣಿ : ೨೨೧೬೧೯೧೧, ೨೨೧೬೧೯೧೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**




# ಸಂಪಾದಕೀಯ

**‘ಹೊ**ಸತು’ ಮಾಸಪತ್ರಿಕೆಯ ಮೊದಲ ಸಂಚಿಕೆ ಪ್ರಕಟವಾದ್ದು ಆಗಸ್ಟ್ ೧೯೯೯ರಲ್ಲಿ. ಸ್ವಾತಂತ್ರ್ಯೋತ್ಸವದ ತಿಂಗಳಲ್ಲಿ ಅದನ್ನು ಆರಂಭಿಸಬೇಕೆಂದು ಯೋಜಿಸಲಾಗಿತ್ತು. ಅದರಂತೆ ಪ್ರಕಟಣೆಯು ಆಗಸ್ಟ್‌ನಲ್ಲಿ ಹೊರಬಂದಿತು. ‘ಸುಧಾ’ ವಾರಪತ್ರಿಕೆಯ ಮಾಜಿ ಸಂಪಾದಕ ಶ್ರೀ. ಇ. ಆರ್. ಸೇತುರಾಂ ಅವರು ಪತ್ರಿಕೆಯ ಮೊದಲ ಸಂಚಿಕೆಯನ್ನು ಬೆಂಗಳೂರಿನ ಮಿಥಿಕ್ ಸೊಸೈಟಿಯ ಸಭಾಂಗಣದಲ್ಲಿ ಲೋಕಾರ್ಪಣೆ ಮಾಡಿದರು. ಸ್ವಾತಂತ್ರ್ಯ ಹೋರಾಟಗಾರ ಮತ್ತು ಜನಪರ ಚಳುವಳಿಗಳ ನೇತಾರ ಶ್ರೀ. ಎಚ್. ಎಸ್. ದೊರೆಸ್ವಾಮಿಯವರು ಅಧ್ಯಕ್ಷತೆ ವಹಿಸಿದ್ದರು. ಅಂದಿನಿಂದ ತಪ್ಪದೆ ‘ಹೊಸತು’ ಮಾಸಪತ್ರಿಕೆಯು ನಿಗದಿತವಾಗಿ ಪ್ರಕಟವಾಗುತ್ತಾ ಬಂದಿದೆ. ಓದುಗರು ಮತ್ತು ಲೇಖಕರು ಅದನ್ನು ಆಗುಮಾಡಿದ್ದಾರೆ ಮತ್ತು ಬೆನ್ನೆಲುಬಾಗಿ ನಿಂತಿದ್ದಾರೆ. ಅವರ ಸಹಕಾರ ಹೀಗೆಯೇ ಮುಂದುವರಿಯುತ್ತದೆಂಬ ಆಶಯ ನಮ್ಮದು. ಮೊದಲ ಸಂಚಿಕೆಯ ಸಂಪಾದಕೀಯದಲ್ಲಿ ತನ್ನ ಆಕಾಂಕ್ಷೆಯನ್ನು ವ್ಯಕ್ತಪಡಿಸಿದ್ದು ಹೀಗೆ:

“ಪುಸ್ತಕ ಪ್ರಕಾಶನದಲ್ಲಿ ಅಪೂರ್ವವಾದ ಖ್ಯಾತಿ ಗಳಿಸಿರುವ ನವಕರ್ನಾಟಕ ಪ್ರಕಾಶನ ಸಂಸ್ಥೆ ಕರ್ನಾಟಕದ ಜನತೆಗೆ ಸಾಕಷ್ಟು ಪರಿಚಯವಿರುವ ಸಂಸ್ಥೆ. ಸಂಖ್ಯೆ ಮತ್ತು ಗುಣಗಳೆರಡರಿಂದಲೂ ಜನಮನದಲ್ಲಿ ನೆಲೆಸಿರುವ ಇವರು ಪತ್ರಿಕಾರಂಗವನ್ನು ‘ಹೊಸತು’ ತಿಂಗಳ ಪತ್ರಿಕೆಯ ಮೂಲಕ ಪ್ರವೇಶಿಸುತ್ತಿದ್ದಾರೆ. ಪುಸ್ತಕಗಳ ಪ್ರಕಟಣೆಯಲ್ಲಿ ಯಾವ ಶಿಸ್ತು ಮತ್ತು ಮೌಲ್ಯಗಳನ್ನು ಸಂಸ್ಥೆ ತನ್ನದಾಗಿಸಿಕೊಂಡಿದೆಯೋ ಅವನ್ನೇ ಪತ್ರಿಕೆಯ ಪ್ರಕಾಶನದಲ್ಲೂ ಇರಿಸಿಕೊಳ್ಳುವ ಆಶಯ ಹೊಂದಿದೆ. ಕನ್ನಡದ ಜನತೆಯ ಸಹಕಾರ, ಸಲಹೆ, ಸೂಚನೆಗಳನ್ನು ಸ್ವಾಗತಿಸುತ್ತಾ ‘ಹೊಸತು’ ತನ್ನ ಪ್ರಥಮ ಸಂಚಿಕೆಯನ್ನು ಅವರ ಕೈಯ್ಯಲ್ಲಿಡುತ್ತಿದೆ. ಅವರ ಸಹಾನುಭೂತಿ ಮತ್ತು ಬೆಂಬಲ ಎಂದಿನಂತೆ ದೊರೆಯುತ್ತದೆಂಬ ಭರವಸೆ ನಮಗಿದೆ.

“ಸಮಕಾಲೀನ ಪರಿಸ್ಥಿತಿ, ಆಶಯ ಮತ್ತು ಪ್ರತೀಕ್ಷೆಗಳನ್ನು ಗಮನದಲ್ಲಿರಿಸಿಕೊಂಡು ನಮ್ಮ ಹಾದಿಯನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲು ‘ಹೊಸತು’ ಉದ್ದೇಶಿಸಿದೆ. ರೋಚಕ–ಮಾದಕ ಸಾಮಗ್ರಿಯನ್ನು ಓದುಗರಿಗೆ ತಲುಪಿಸುವುದು ಈ ಪತ್ರಿಕೆಯ ವ್ಯಾಪ್ತಿಗೆ ಸೇರುವುದಿಲ್ಲ. ವರ್ತಮಾನದ ತುಮುಲಗಳನ್ನು ಅರ್ಥ ಮಾಡಿಕೊಂಡು ಹಸನಾದ ನಾಳೆಯ ಸೃಷ್ಟಿಗೆ ಪರಿಕರವನ್ನು ಸಮಗ್ರವಾಗಿ ರೂಪಿಸುವ ತಿಳುವಳಿಕೆ, ಕೌಶಲ್ಯ ಈ ಪತ್ರಿಕೆಗೆ ಸಿದ್ಧಿಸಿದೆಯೆಂಬ ಅಹಮಿಕೆಯೂ ಇಲ್ಲ. ಸಾಮೂಹಿಕ ಕಾರ್ಯಾಚರಣೆಗಳಿಗೆ, ಕ್ರಿಯಾಶೀಲ ಮಧ್ಯಪ್ರವೇಶಕ್ಕೆ ಅಗತ್ಯವಾದ ಚಿಂತನೆ ಮತ್ತು ಚರ್ಚೆಯನ್ನು ತನ್ನ ಮಿತಿಯಲ್ಲೇ ಎಲ್ಲ ಜನವಿಭಾಗಗಳೊಂದಿಗೆ ಹಂಚಿಕೊಳ್ಳುವುದು ‘ಹೊಸತು’ ಹಮ್ಮಿಕೊಳ್ಳುವ ಅಪೇಕ್ಷೆ. ಸಾಮುದಾಯಿಕ ಮುನ್ನಡೆಗೆ ಆದ್ಯತೆ ನೀಡುತ್ತಾ ನಮ್ಮ ವಿದ್ಯಮಾನಗಳನ್ನು ಪರೀಕ್ಷಿಸುವುದು ಮತ್ತು ಆ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳಲು ಕರ್ನಾಟಕದ ಜನತೆಗೆ ಒಂದು ವಿಷಯ ವಿನಿಮಯ ರಂಗವನ್ನು ಒದಗಿಸುವುದು ಸಾಧ್ಯವಾದೀತೆಂಬ ಭಾವನೆ ‘ಹೊಸತು’ ಪತ್ರಿಕೆಗೆ ಇದೆ. ನಮ್ಮ ಸಾಂಸ್ಕೃತಿಕ ಜೀವನದ ವಿಭಿನ್ನ ಆಯಾಮಗಳನ್ನು ಗುರುತಿಸಿಕೊಳ್ಳುತ್ತಾ ಮುಂದಿನ ಹಾದಿಯನ್ನು ಸುಗಮಗೊಳಿಸಿಕೊಳ್ಳಲು ಇದರಿಂದ ಸಾಧ್ಯವಾಗಬಹುದೆಂಬ ಆಸೆ ನಮ್ಮದು.

“ಇದಕ್ಕೆ ಪೂರಕವಾಗಿ ಸಹಜವಾಗಿಯೇ ನಮ್ಮ ಆರ್ಥಿಕ–ರಾಜಕೀಯ ಸನ್ನಿವೇಶಗಳನ್ನು ಪಕ್ವವಾದ ವಿಶ್ಲೇಷಣೆಗೆ ಗುರಿಮಾಡಬೇಕಾದ ಅಗತ್ಯವಿದೆ. ವಸಾಹತು ಆಡಳಿತದಲ್ಲಿ ಪರತಂತ್ರದ ಬವಣೆಯನ್ನು ಅನುಭವಿಸಿದ್ದ ಭಾರತ ಮುಂದೇನಾಗಬೇಕು ಎಂಬುದು ಸಾರ್ವತ್ರಿಕವಾಗಿ ಜಿಜ್ಞಾಸೆಗೆ ವಿಷಯವಾಗಿದೆ. ಸ್ವಾತಂತ್ರ್ಯ ಪಡೆದುಕೊಂಡ ಐವತ್ತು ವರ್ಷಗಳಲ್ಲಿ ಇದಿನ್ನೂ ಇತ್ಯರ್ಥವಾಗಿಲ್ಲ. ಸದ್ಯದಲ್ಲಿ ‘ಕಟ್ಟಕಡೆಯ ವ್ಯಕ್ತಿ’ ಎಂಬ ಶಿರೋನಾಮೆಯನ್ನು ಮೆತ್ತಿಸಿಕೊಂಡಿರುವ ನಾಗರಿಕ ಸಹ ಇದಕ್ಕೆ ತನ್ನದೇ ಆದ ಉತ್ತರ ಕೊಡಬೇಕಾಗಿದೆ, ಆಕಾಂಕ್ಷೆ ಪ್ರಕಟಿಸಬೇಕಾಗಿದೆ, ಸಕ್ರಿಯವಾಗಿ ಪಾಲ್ಗೊಳ್ಳಬೇಕಾಗಿದೆ.

“ ‘ಹೊಸತು’ ಸೀಮಿತವಾಗಿಯಾದರೂ ಇದಕ್ಕೆಲ್ಲಾ ಒಂದು ಮಾಧ್ಯಮವಾಗಲೆಂಬ ಇಚ್ಛೆ ನಮ್ಮದು.”

**ಇಪ್ಪತ್ತನೆಯ ವರ್ಷಕ್ಕೆ ಪದಾರ್ಪಣೆ ಮಾಡುತ್ತಿರುವಾಗ ತಾನು ಅಂತರವಲೋಕನ ಮಾಡಿಕೊಳ್ಳಲು ಪತ್ರಿಕೆಯು ಬಯಸುತ್ತದೆ.** ತನ್ನ ಆಶಯಗಳನ್ನು ಪತ್ರಿಕೆಯು ಸಮರ್ಥವಾಗಿ ಮತ್ತು ಸಮರ್ಪಕವಾಗಿ ಈಡೇರಿಸಿಕೊಂಡಿಲ್ಲ ಎಂಬ ವಿವೇಕವು ‘ಹೊಸತು’ಗೆ ಇದೆ ಮತ್ತು ಆ ಆಶಯಗಳ ಪೂರೈಕೆಗಾಗಿ ಕ್ರಿಯಾಶೀಲವಾಗಿ ಉಳಿಯಲು ಬದ್ಧವಾಗಿದೆ. ನಮ್ಮ ರಾಜ್ಯದ ಮತ್ತು ದೇಶದ ಆರ್ಥಿಕ ಸನ್ನಿವೇಶ ಮತ್ತು ಸವಾಲುಗಳನ್ನು ಪ್ರತಿ ಹಂತದಲ್ಲೂ ವಿಶ್ಲೇಷಿಸಿಕೊಂಡು ಅಂದಂದಿನ ಆರ್ಥಿಕ ನೀತಿಗಳನ್ನು ಮಾಪನ ಮಾಡಬೇಕಾದ ಅಗತ್ಯವು ಬಹಳವಾಗಿತ್ತು. ಅದನ್ನು ನೆರವೇರಿಸಿಕೊಳ್ಳಲು ಸಾಧ್ಯವಾಗಿಲ್ಲದಿರುವುದು ಒಂದು ಪ್ರಮುಖ ಲೋಪವಾಗಿದೆ. ಈಚಿನ ವರ್ಷಗಳಲ್ಲಿ – ವಿಶೇಷತಃ ‘ಭಾರತದಲ್ಲಿ ಮಾಡಿ’ (ಮೇಕ್ ಇನ್ ಇಂಡಿಯ) ಎಂಬ ಅನರ್ಥಕ ಘೋಷಣೆಯು ಬಂದನಂತರ – ನಮ್ಮ ದೇಶವು ಆರ್ಥಿಕ ಮುಗ್ಗಟ್ಟುಗಳ ಆಗರವಾಗಿದೆ. ಹರ್ಷದಿಂದ ಹೇಳಿಕೊಳ್ಳಬಹುದಾದ ಆರ್ಥಿಕ ಸಾಧನೆಗಳು ನಿಜಕ್ಕೂ ಸೊನ್ನೆ. ನೋಟುಗಳ ಅಮಾನ್ಯೀಕರಣವಾಯಿತು, ಜಿಎಸ್‌ಟಿ ಬಂದಿತು, ವಿದೇಶಿ ಬಂಡವಾಳವು ಹರಿದುಬರುತ್ತದೆ ಎಂಬ ಅಬ್ಬರದ ದಿನಗಳು ಬಂದುಹೋದವು, ಆದರೆ ನಾವು ನಿಂತಲ್ಲೇ ನಿಂತಿದ್ದೇವೆ, ಇಲ್ಲವೆ ಒಂದೆರಡು ಹೆಜ್ಜೆ ಹಿಂದಕ್ಕೆ ಸರಿದಿದ್ದೇವೆ. ಯೋಜನಾ ಆಯೋಗವನ್ನು ಹೊಂದಿರುವುದು ಕಳಂಕವೆಂದು ಭಾವಿಸಿದ ಕೇಂದ್ರ ಸರ್ಕಾರವು ಪ್ರಧಾನಿ ಮೋದಿಯವರ ನೇತೃತ್ವದಲ್ಲಿ ಆ ಆಯೋಗವನ್ನು ರದ್ದುಗೊಳಿಸಿತು. ಅದರ ಸ್ಥಾನದಲ್ಲಿ ನೀತಿ ಆಯೋಗವನ್ನು ಕುಳ್ಳಿರಿಸಿತು. ಅದು ಅನೀತಿಗಳ ಸರಮಾಲೆಯನ್ನು ದೇಶಕ್ಕೆ ಹೊರಿಸಿದ್ದು ಬಿಟ್ಟರೆ ಬೇರೇನನ್ನೂ ಸಾಧಿಸಿದಂತೆ ತೋರುತ್ತಿಲ್ಲ. “ಅಮರ್ತ್ಯ ಸೇನ್ ಭಾರತಕ್ಕೆ ಬಂದು ಆರು ತಿಂಗಳುಗಳನ್ನು ಕಳೆಯಲಿ, ದೇಶದ ಅಭಿವೃದ್ಧಿ ಹೇಗೆ ದಾಪುಗಾಲುಗಳನ್ನು ಹಾಕಿದೆಯೆಂಬುದನ್ನು ಆಗ ತಿಳಿಯಲು ಸಾಧ್ಯ” ಎಂದು ನೀತಿ ಆಯೋಗದ ಪ್ರಮುಖರು ಹೇಳಿದ್ದಾರೆ. ಅದು ಬಿಳಿಮೋಡದ ಗುಡುಗಿಗಷ್ಟೇ ಸಮ; ಅದರಿಂದ ಮಳೆಯನ್ನೇನೂ ನಿರೀಕ್ಷಿಸುವಂತಿಲ್ಲ. ವಿದೇಶಿ ಬ್ಯಾಂಕುಗಳಲ್ಲಿರುವ ಭಾರತದ “ಮಹಾನ್ ಪ್ರಜೆಗಳ”

ಕಪ್ಪುಹಣ ಅಲ್ಲೇ ಇದೆ, ಹೆಚ್ಚೆಂದರೆ ಅಕ್ಕಪಕ್ಕದ ಊರುಗಳಿಗೆ, ದೇಶಗಳಿಗೆ ವರ್ಗಾಯಿಸಲ್ಪಟ್ಟಿದೆ. ಒಂದು ಬಿಡಿಗಾಸನ್ನೂ ನಾವು ಹಿಂದಕ್ಕೆ ಪಡೆದಿಲ್ಲ. ಪ್ರತಿಯೊಬ್ಬರ ಬ್ಯಾಂಕ್ ಖಾತೆಗೂ ೧೫ ಲಕ್ಷ ರೂಪಾಯಿಗಳು ತುಂಬಲಾಗುತ್ತದೆಂಬ ಆಶ್ವಾಸನೆಯನ್ನು ಗಂಭೀರವಾಗಿ ತೆಗೆದುಕೊಳ್ಳಬಾರದು, ಅದು ಚುನಾವಣಾ ಪ್ರಚಾರದ ಸಮಯದ ಮಾತು ಅಷ್ಟೆ ಎಂದು ಕೇಂದ್ರ ಸಚಿವರೊಬ್ಬರು ಇತ್ತೀಚೆಗೆ ಅಪ್ಪಣೆ ಕೊಡಿಸಿದ್ದಾರೆ. ನಮ್ಮ ದೇಶದಲ್ಲಿ ಸಚಿವರು, ಮಾಧ್ಯಮಗಳ ವಿದ್ವಾಂಸರು, ದೊಡ್ಡ ಮತ್ತು ಚಿಕ್ಕ ರಾಜಕೀಯ ನಾಯಕರು ಪ್ರಗತಿಯ ಬಗ್ಗೆ ನಾಲಿಗೆ ಮುಂದುಮಾಡುತ್ತಾರೆ, ಆದರೆ ಪ್ರಗತಿಯ ರುಚಿಯನ್ನು ಸವಿದವರನ್ನು ಗುರುತಿಸಲು ಕಣ್ಣು ಬಿಡುವುದಿಲ್ಲ. ಅವರಲ್ಲಿ ಕೆಲವರು ವಿದೇಶಗಳಿಗೆ ಹಾರಿಹೋಗುತ್ತಾರೆ, ರತನ್ ಟಾಟಾನಂಥವರು ನಾಗಪುರದಲ್ಲಿ ಮೋಹನ ಭಾಗವತರ ಸನ್ನಿಧಿಗೆ ತೆರಳಿ ನಜ಼ರು ಒಪ್ಪಿಸುತ್ತಾರೆ. ಮಾಜಿ ರಾಷ್ಟ್ರಾಧ್ಯಕ್ಷ ಪ್ರಣವ ಮುಖರ್ಜಿಯವರ ಮಹತ್ಸಾಧನೆಯೂ ಅದೇ.

ನಮ್ಮಲ್ಲಿ ನೂರಾರು ವಿಷಯಗಳ ಪ್ರಸ್ತಾಪ ಬರುತ್ತದೆ, ಆದರೆ ಅವುಗಳ ವಸ್ತುನಿಷ್ಠ ಚರ್ಚೆ ನಡೆಯುವುದಿಲ್ಲ. ನಮ್ಮ ರಾಜ್ಯದ ಇತ್ತೀಚಿನ ಚುನಾವಣೆಯ ಸಂದರ್ಭದಲ್ಲಿ ಪರಸ್ಪರ ನಿಂದನೆ ಬಿಟ್ಟು ಯಾವ ಚರ್ಚೆಯೂ ನಡೆಯಲಿಲ್ಲ, ಯಾವ ಹೊಸ ನೀತಿಗಳ ನಿರೂಪಣೆಯೂ ನಡೆಯಲಿಲ್ಲ. ಇದು ತೀರಾ ಅಸಹ್ಯಕರ, ಏಕೆಂದರೆ ನಮ್ಮೆಲ್ಲ ಸಮಸ್ಯೆಗಳಿಗೂ ಒಂದು ಆರ್ಥಿಕ ಹಿನ್ನೆಲೆ ಇರುತ್ತದೆ; ಆರ್ಥಿಕ ಕ್ಷೇತ್ರದ ಅನಾಹುತಗಳನ್ನು ಗುರುತಿಸದೆ ಮತ್ತು ಅವಕ್ಕೆ ಸೂಕ್ತ ಪರಿಹಾರ ಕಂಡುಕೊಳ್ಳದೆ ನಮ್ಮ ಸಾಮಾಜಿಕ ಜೀವನವನ್ನು ಸುಧಾರಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ನಿರುದ್ಯೋಗ, ರೈತರ ಮತ್ತು ಕೂಲಿಕಾರ್ಮಿಕರ ಆತ್ಮಹತ್ಯೆ ಪ್ರಕರಣಗಳು, ಹೆಚ್ಚುತ್ತಿರುವ ಅಪರಾಧಗಳ ಅನಿಯಂತ್ರಣ, ದೊಡ್ಡ ಬಂಡವಳಿಗರು ಬ್ಯಾಂಕುಗಳನ್ನು ವಂಚಿಸುತ್ತಿರುವ ಜಾಲ, ಮಹಿಳೆಯರ ಮೇಲಿನ ಹಲ್ಲೆ, ಶಿಕ್ಷಣ ಕ್ಷೇತ್ರದ ತೊಡಕುಗಳು, ಮುಚ್ಚಿಹೋಗುತ್ತಿರುವ ಕಾರ್ಖಾನೆಗಳು, ಇವಕ್ಕೆಲ್ಲಾ ಆರ್ಥಿಕ ಹಿನ್ನೆಲೆಯುಂಟು. ಆದ್ದರಿಂದ ಕೇಂದ್ರದ ಹಾಗೂ ರಾಜ್ಯದ ಆರ್ಥಿಕ ನೀತಿಗಳನ್ನು ಪ್ರತಿಕ್ಷಣವೂ ಗಮನಿಸುತ್ತಿರಬೇಕು ಮತ್ತು ಅವುಗಳ ಪರಿಣಾಮಗಳನ್ನು ನಿಭಾಯಿಸಲು ಯೋಜನಾಬದ್ಧ ತೀರ್ಮಾನಗಳನ್ನು ಅನುಷ್ಠಾನಕ್ಕೆ ತರಬೇಕು.

ಈ ನಿಟ್ಟಿನಲ್ಲಿ 'ಹೊಸತು' ನಿಷ್ಕ್ರಿಯವಾಗಿಲ್ಲ, ಆದರೆ ಅದಕ್ಕೆ ಪ್ರಾಧಾನ್ಯವನ್ನು ಅಗತ್ಯವಾದ ಮಟ್ಟದಲ್ಲಿ ನೀಡಲು ಸಾಧ್ಯವಾಗಿಲ್ಲ. ಆದ್ದರಿಂದ ನಮ್ಮ ಪರಿಣತರು ಹಾಗೂ ಅನುಭವಜನ್ಯ ಹೊಳಹುಗಳಿರುವವರು ಪತ್ರಿಕೆಗೆ ಪುಷ್ಟಿ ನೀಡುವುದರಲ್ಲಿ ಹೆಚ್ಚಿನ ಮಟ್ಟದ ಪಾಲುದಾರರಾಗಬೇಕು. ಇನ್ನು ಮುಂದೆ ಈ ಕೊರತೆಯನ್ನು ನೀಗಿಸುವ ಸಲುವಾಗಿ ಅವರೆಲ್ಲರ ಹಾಗೂ ಓದುಗರ ಸಹಕಾರವನ್ನು ಪತ್ರಿಕೆಯು ಸ್ವಾಗತಿಸುತ್ತದೆ. ಆರಂಭದಿಂದಲೂ ಪತ್ರಿಕೆಯ ಧೋರಣೆ ಇದೇ ಆಗಿದೆ; ಓದುಗರು ಸ್ವತಃ ಬರಹಗಾರರೂ ಆಗಬೇಕು, ಅವರ ಅನುಭವವನ್ನು ಇತರರೊಂದಿಗೆ ಹಂಚಿಕೊಳ್ಳಬೇಕು, ಎಂದು. ಆಂಟೋನಿಯೋ ಗ್ರಾಮ್ಶಿಯು ಪ್ರತಿಪಾದಿಸಿರುವ "ಸಾವಯವೀ ಬುದ್ಧಿಜೀವಿಗಳು" ಎಂದರೆ ನಮ್ಮ ದುಡಿಯುವ ಜನರೂ ಓದುಗರೂ ಅದರಲ್ಲಿ ಸೇರುತ್ತಾರೆ.

ನಮ್ಮ ರಾಜ್ಯದ ಸಾಂಸ್ಕೃತಿಕ ವಾತಾವರಣವು ಬಹುಕಾಲ ದೇಶದ ವಾತಾವರಣಕ್ಕಿಂತಲೂ ಸ್ವಲ್ಪವಾದರೂ ಉನ್ನತ ಮಟ್ಟದಲ್ಲಿರುತ್ತಿದ್ದುದು ತಿಳಿದ ಸಂಗತಿ. ಪತ್ರಿಕೆಯು ಆರಂಭಗೊಂಡ ಸಮಯದಲ್ಲಿ ಇದು ಖಂಡಿತ ಹಾಗಿತ್ತೆನಿಸುತ್ತದೆ. ಎಲ್ಲವೂ ಸುಸೂತ್ರ ಮತ್ತು ಸ್ವಾಗತಾರ್ಹ ಆಗಿರಲಿಲ್ಲ, ಆದರೆ ಆಘಾತ ನೀಡುವಷ್ಟು ಕೆಟ್ಟಿರಲೂ ಇಲ್ಲ. ಆ ಮಾತನ್ನು ಇಂದು ಪುನರುಚ್ಚರಿಸಲು ಸಾಧ್ಯವಾಗದಷ್ಟು ಬಿಸುಪಿನ ಪರಿಸ್ಥಿತಿಯಲ್ಲಿ ನಾವಿದ್ದೇವೆ. ದೆಹಲಿ ಮತ್ತು ನಾಗಪುರ ಪ್ರೇರಣೆ ಮತ್ತು ಪ್ರೋತ್ಸಾಹ ನಮ್ಮ ರಾಜ್ಯದಲ್ಲಿ ವಿಷಪೂರಿತ ಗಾಳಿಯನ್ನು ಹೆಚ್ಚಿಸಿದೆ, ರಾಜಕೀಯ ಸಂಭಾಷಣೆಗಳ ಸ್ವರೂಪವನ್ನು ಹದಗೆಡಿಸಿದೆ. ದಿನಪತ್ರಿಕೆಗಳಲ್ಲಿ ಇದಕ್ಕೆ ಪ್ರತಿನಿತ್ಯ ದೃಷ್ಟಾಂತಗಳು ಅಸಹ್ಯವೆನಿಸುವಷ್ಟು ಕಣ್ಣಿಗೆ ರಾಚುತ್ತಿವೆ. ವಿದ್ಯುನ್ಮಾಧ್ಯಮಗಳಂತೂ ಕೊಳಚೆಯ ದುರ್ಗಂಧವನ್ನು ಸರ್ವತ್ರ ಪಸರಿಸುವುದರಲ್ಲಿ ನಿರತವಾಗಿವೆ. ಇದಕ್ಕೂ ದೆಹಲಿಯ ಕೊಡುಗೆ ವಿಪರೀತವೆನಿಸುವಷ್ಟಿದೆ. ಸುಳ್ಳು ಸುದ್ದಿಗಳನ್ನು ಸೃಷ್ಟಿಸಿ ಅವನ್ನು ಎಡೆಬಿಡದೆ ಪ್ರಚುರಪಡಿಸುವಲ್ಲಿ 'ಸಾಮಾಜಿಕ ಮಾಧ್ಯಮಗಳು' ಎಂಬ ಅನನ್ವರ್ಥ ನಾಮಧೇಯವನ್ನು ಹೊತ್ತಿರುವ ಪ್ರಕಾರಗಳು ಅನಿಷ್ಟ ದುರಂತಗಳಿಗೆ ಕಾರಣವಾಗುತ್ತಿವೆ. ಇಂತಹ ಪ್ರಕಾರಗಳಲ್ಲಿ ಕೆಲವನ್ನು ದೇಶದ ಪ್ರಧಾನಿಯವರು ನೇರವಾಗಿ ಸದಾ ಗಮನಿಸುತ್ತಾರೆಂದು 'ಪ್ರಜಾವಾಣಿ'ಯ ಸಂಪಾದಕೀಯ ಪುಟದಲ್ಲಿ ಪ್ರಕಟವಾದ ಒಂದು ಲೇಖನವು (ದಿ.೧೬.೦೭.೨೦೧೮) ದಾಖಲಿಸಿದೆ. ಅಂದರೆ, ಮಾಧ್ಯಮಗಳ ಮೂಲಕ ವಿಷದ ಗಾಳಿಯನ್ನು ಹರಡಲಾಗುತ್ತಿರುವ ವಿಷಯ ಅವರಿಗೆ ತಿಳಿದಿದೆ. ಬಹುಶಃ ಆ ಮೂಲಗಳು ಯಾವುವು, ಅವನ್ನು ಯಾವ ಉದ್ದೇಶದಿಂದ ದುರ್ಬಳಕೆ ಮಾಡಿಕೊಳ್ಳಲಾಗುತ್ತಿದೆ, ಎಂಬುವೆಲ್ಲಾ ಅವರ ಪರಿವೆಗೆ ಬಂದಿವೆಯೆಂಬುದು ಇದರರ್ಥ. ಹಾಗಿದ್ದರೆ ಅವನ್ನು ನಿಗ್ರಹಿಸಲು ಕ್ರಮಗಳನ್ನೇಕೆ ತೆಗೆದುಕೊಳ್ಳಲಾಗುತ್ತಿಲ್ಲ? ಇದೊಂದು ವಿಪತ್ಕಾರಿ ಸನ್ನಿವೇಶವೆಂದು 'ಹೊಸತು' ಭಾವಿಸುತ್ತದೆ. ನಮ್ಮ ಓದುಗರು ಮತ್ತು ಲೇಖಕರು ಇಂತಹ ಅನಾಗರಿಕ ಮತ್ತು ಅಸಂಸ್ಕೃತ ವಿಧಾನಗಳನ್ನು ತಿರಸ್ಕರಿಸುತ್ತಾರೆ, ಅವುಗಳ ವಿರುದ್ಧ ದನಿಯೆತ್ತುತ್ತಾರೆ. ಪತ್ರಿಕೆಯು ಅವರ ಭಾವನೆಗಳ ಅಭಿವ್ಯಕ್ತಿಗೆ ನೆರವಾಗಲು ಸದಾ ಸಿದ್ಧವಿರುತ್ತದೆ. ಮಾಧ್ಯಮಗಳ ವಲಯದಲ್ಲಿ ಕೊಳಚೆಯ ಪಿಡುಗನ್ನು ಇಲ್ಲವಾಗಿಸಲು ಹಸನಾದ ಸಾರ್ವಜನಿಕ ಪ್ರಜ್ಞೆಯ ಆವಿಷ್ಕಾರಕ್ಕಾಗಿ ಕೈಜೋಡಿಸೋಣ.

ನಮ್ಮ ದೇಶವು ಹಲವು ಶತಮಾನಗಳ ಕಾಲ ತಾರ್ಕಿಕತೆ, ವೈಚಾರಿಕತೆ ಮತ್ತು ಸಮಬಾಳಿನ ಆಕಾಂಕ್ಷೆಗಳನ್ನು ಆದರದಿಂದ ಕಾಣುತ್ತಾ ಬಂದಿದೆ. ಕಳೆದ ಒಂದು ಶತಮಾನದಲ್ಲಿ ನಮ್ಮ ರಾಜ್ಯದ ಬೌದ್ಧಿಕ ಪ್ರಕ್ರಿಯೆಗಳು ಬಹುಮಟ್ಟಿಗೆ ಇವಕ್ಕೆ ಊರುಗೋಲುಗಳಾಗಿ ಕೆಲಸ ಮಾಡಿವೆ. ಸಾಹಿತ್ಯ ಮತ್ತು ಸಂಸ್ಕೃತಿಯ ಕ್ಷೇತ್ರಗಳಲ್ಲಿ ಪ್ರಧಾನವಾಗಿ ಪ್ರಾತಿನಿಧ್ಯ ಪಡೆದಿರುವುದು ಇಂತಹ ಸಾಮಾಜಿಕ ಮತ್ತು ಸಾಮುದಾಯಿಕ ಪ್ರಜ್ಞೆ. ಬೆರಳೆಣಿಕೆಯಷ್ಟು ಮಂದಿ ಈ ದಿಕ್ಕಿಗೆ ವಿರೋಧವಾಗಿ ನಿಂತಿರುವುದುಂಟು. ಆದರೆ ಅವರ ಪ್ರಭಾವದ ವಲಯವು ಸೀಮಿತವಾಗಿರುತ್ತಿದ್ದುದು ಉಲ್ಲಾಸ ನೀಡುವ ಸಂಗತಿಯಾಗಿತ್ತು. ಇಂದು ಅದೇ ಮಾತನ್ನು ಹೇಳಲು ಸಾಧ್ಯವಾಗದ ಮುಗ್ಗಟ್ಟು ರಚಿತವಾಗುತ್ತಿದೆ. 'ಹೊಸತು' ತನ್ನ ಆರಂಭದ ದಿನಗಳಿಂದಲೂ



ತಿಂಗಳ ಪತ್ರಿಕೆ
ಹೊಸತು
ನವಕರ್ನಾಟಕ ಪ್ರಕಾಶನ



■ ಸಮಾಲೋಚಕ ಮಂಡಲಿ

ಟಿ. ಆರ್. ಅನಂತರಾಮು
ಎಚ್. ಎಸ್. ಗೋಪಾಲ ರಾವ್
ಸಿ. ಆರ್. ಚಂದ್ರಶೇಖರ್
ವಿ. ಚಂದ್ರಶೇಖರ ನಂಗಲಿ
ಜಿ. ನಾಗಕುಮಾರ್
ನೇಮಿಚಂದ್ರ
ಪ್ರಕಾಶ್ ಸಿ. ರಾವ್
ಬರಗೂರು ರಾಮಚಂದ್ರಪ್ಪ
ಕೆ. ಮರುಳಸಿದ್ದಪ್ಪ
ಮುರಳೀಧರ್
ವಿಜಯಾ
ಎಲ್. ಹನುಮಂತಯ್ಯ
ಬಿ. ಶ್ರೀನಿವಾಸ ಕಕ್ಕಿಲ್ಲಾಯ
ಎಂ. ಡಿ. ವಕ್ಕುಂದ
ಅನಸೂಯ ಕಾಂಬಳೆ
ಎಸ್. ಮಂಜುನಾಥ
ಶಿವಗಂಗಮ್ಮ ರುಮ್ಮ
ಎಸ್. ಎಸ್. ರೇಣುಕಾರಾಧ್ಯ
ಬಿ. ಪೀರಬಾಷಾ



■ ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

■ ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ವೈಚಾರಿಕತೆಯ ಸೂತ್ರವನ್ನು ಹಿಡಿದೇ ಮುಂದುವರಿದಿದೆ ಎಂಬುದು ನಮ್ಮ ಓದುಗರಿಗೆ ತಿಳಿದಿದೆ, ಅವರು ಅದನ್ನು ಬೆಂಬಲಿಸಿದ್ದಾರೆ. ೧೯೮೦ರ ದಶಕಕ್ಕೂ, ಬರಲಿರುವ ೨೦೨೦ರ ದಶಕಕ್ಕೂ ವಿಪರೀತವಾದ ಕಂದರವಿದೆ. ಅದರಿಂದ ನಮ್ಮ ಲೇಖಕರು ಮತ್ತು ಓದುಗರು ವಿಚಲಿತರಾಗುವುದಿಲ್ಲವೆಂಬ ಭರವಸೆಯನ್ನು 'ಹೊಸತು' ಹೊಂದಿದೆ. ಶ್ರೇಷ್ಠ ವೈಚಾರಿಕತೆಗೆ ನಮ್ಮ ಚರಿತ್ರೆಯಲ್ಲಿ ಆಗಾಗ್ಗೆ ಹಿನ್ನಡೆಗಳು ಉಂಟಾಗಿರುವುದು ನಿಜ, ಆದರೆ ಅದನ್ನು ಹಿಮ್ಮೆಟ್ಟಿಸಲು ಅಥವಾ ಉಡುಗಿಸಲು ಸಾಧ್ಯವಾಗಿಲ್ಲ. ಈ ಪರಂಪರೆಯನ್ನು ಅತಿಶಯವಾಗಿ ಗಟ್ಟಿಗೊಳಿಸುವುದು ಪತ್ರಿಕೆಯ ಜವಾಬ್ದಾರಿಯಾಗಿದೆ. ಆ ಕಾರ್ಯದಲ್ಲಿ ನಮ್ಮ ಓದುಗರು ಮತ್ತು ಲೇಖಕರು ಸಮಭಾಗಿಗಳು.

ಇರಾನ್ ಮತ್ತು ವೆನಿಜೂಲಾಗಳ ಮೇಲೆ ಅಮೆರಿಕಾ ಅಧ್ಯಕ್ಷನ ವಕ್ರಕಣ್ಣು ಬಿದ್ದಿರುವುದು ವರದಿಯಾಗಿದೆ. ಯುದ್ಧವಿಲ್ಲದೆ ಮತ್ತು ರಕ್ತಪಾತವಿಲ್ಲದೆ ಅಮೆರಿಕಾಕ್ಕೆ ನೆಮ್ಮದಿ ಇಲ್ಲವಂತೆ. ಇತ್ತೀಚೆಗೆ ಅಧ್ಯಕ್ಷ ಟ್ರಂಪ್ ತನ್ನ ಆಡಳಿತಾಧಿಕಾರಿಗಳೊಡನೆ ಸಮಾಲೋಚನೆ ನಡೆಸುತ್ತಾ ಕೇಳಿದ್ದನಂತೆ: "ವೆನಿಜೂಲಾ ಸರ್ಕಾರವನ್ನು ಉರುಳಿಸುವುದು ಸಾಧುವಲ್ಲವೆ, ಏತಕ್ಕಾಗಿ ತಡಮಾಡುತ್ತಿದ್ದೀರಿ?" ಎಂದು. ಇರಾನ್ ಇನ್ನೊಂದು ಇರಾಕ್ ಆಗಬೇಕೆನ್ನುವುದು ಟ್ರಂಪ್‌ನ ಮಹದಾಶೆ. ನಮ್ಮ ದೇಶವು ಇರಾನ್ ಜೊತೆ ತೈಲ ವ್ಯಾಪಾರದ ವ್ಯವಹಾರದಲ್ಲಿ ಉಳಿಯಕೂಡದೆಂದು ಆತ 'ಆಜ್ಞೆ' ಹೊರಡಿಸಿದ್ದಾನೆ. ನಮ್ಮ ಪ್ರಧಾನಿಯ ಸ್ವರ ಅಡಗಿ ಹೋಗಿದೆ. ನಮ್ಮ ದೇಶದಲ್ಲಿ ಅಮೆಜಾನ್, ವಾಲ್‌ಮಾರ್ಟ್, ಇಕಿಯಾ, ಎಲ್ಲಾ ತಳವೂರಿವೆ. ಅಮೆಜಾನ್ ಎಂತಹ ಕಂಪನಿಯೆಂದರೆ ಅದರ ಉದ್ಯೋಗಿಗಳು ಅಮೆರಿಕಾದಲ್ಲಿ ಜೀತದಾಳುಗಳಿದ್ದಂತೆಯೇ ಇದ್ದಾರೆ. ಕೆಲಸದ ವೇಳೆ ಅವರು ಮೂತ್ರ ವಿಸರ್ಜನೆಗೆ ಮೂತ್ರಾಲಯಗಳಿಗೆ ಹೋಗುವಂತಿಲ್ಲ, ಬಾಟಲ್‌ಗಳನ್ನು ಇಟ್ಟುಕೊಂಡು ಅದರಲ್ಲಿ ಉಚ್ಚೆ ಹುಯ್ದುಕೊಳ್ಳುತ್ತಾರಂತೆ! ಇದು ಅತಿಶಯೋಕ್ತಿ ಇರಬಹುದು, ಆದರೆ ಕಂಪನಿಯ ಮೂಲ ಲಕ್ಷಣದ ಕುರುಹಂತೂ ಹೌದು. ಅಂತಹ ಕಂಪನಿಗಳು ನಮ್ಮ ದೇಶದ ಉದ್ಧಾರ ಮಾಡಲು ಬಂದಿವೆ. ಅಂದರೆ, ಆಂತರಿಕ ಆರ್ಥಿಕ ವ್ಯವಸ್ಥೆ ಯಾರ ಲಾಭಕ್ಕಾಗಿ ಇದೆ ಎಂಬುದರ ಸೂಚನೆಯನ್ನದು ನೀಡುತ್ತದೆ. ಅಂತಹ ತಳಪಾಯದ ಮೇಲೆ ನಮ್ಮ ಆರ್ಥಿಕತೆ, ರಾಜಕೀಯ, ಸಂಸ್ಕೃತಿ, ಎಲ್ಲಾ ಅವಲಂಬನೆ ಪಡೆಯುತ್ತಿವೆ. ಅದಕ್ಕಿಂತಲೂ ದೊಡ್ಡ ಆಘಾತ ಬೇರೇನಿದ್ದೀತು?

ಬರಲಿರುವ ದಿನಗಳು ಕ್ರೌರ್ಯದಿಂದ, ಹಿಂಸೆಯಿಂದ, ಪಾತಕಗಳಿಂದ ನಮ್ಮ ದೇಶದ ಜನತೆಯನ್ನು ಕಂಗಾಲಾಗಿಸಬಹುದೆಂಬ ಎಚ್ಚರ ನಮಗೆ ಅಗತ್ಯ. ಆದರೆ ಕಂಗಾಲಾಗುವುದು ಬೇಡ. 'ಹೊಸತು'ವಿನಂತಹ ಪತ್ರಿಕೆಗಳು ದೇಶದುದ್ದಕ್ಕೂ ಇವೆ, ಅವುಗಳನ್ನು ಉಳಿಸಿ – ಬೆಳೆಸುವ ನಾಗರಿಕ ಸಮಾಜ ಇದೆ, ಓದುಗರಿದ್ದಾರೆ, ಲೇಖಕರಿದ್ದಾರೆ, ಕ್ರಿಯಾಶೀಲ ಸಂಸ್ಥೆಗಳಿವೆ, ಕಾರ್ಯಕರ್ತರಿದ್ದಾರೆ. 'ಹೊಸತು' ಅಂಥವರ ಜೊತೆಯಲ್ಲಿ ಹೆಜ್ಜೆ ಹಾಕಲು ಸಾಧ್ಯವಾಗಲಿ. ನಾವೆಲ್ಲಾ ಅದರಲ್ಲಿ ಸಕ್ರಿಯ ಭಾಗಿಗಳಾಗೋಣ.

✶ ✶ ✶

ಮಾತು ಸಾಲದು, ಸಾಮುದಾಯಿಕ ಮಧ್ಯಪ್ರವೇಶ ಬೇಕು. ಅದಕ್ಕೆ ಸಜ್ಜಾಗಲು 'ಹೊಸತು'ವನ್ನು ಸಾಧನವಾಗಿಸೋಣ.

*(ಈ ತಿಂಗಳು ೩ನೇ ಪುಟದಿಂದ)*

ತಿರುಚಿ ತಿದ್ದಲು ಹೊರಟಿದ್ದಾರೆ. ಅವರು ನಿರ್ಮಿಸಿರುವ ದರ್ಗಾಗಳು, ಸ್ಮಾರಕಗಳು ಮೊದಲಾದವುಗಳೆಲ್ಲ ಹಿಂದೆ ಹಿಂದೂ ದೇವಾಲಯಗಳಾಗಿದ್ದವು ಎನ್ನುವ ವಾದ ಅವರದ್ದು. ೧೯೯೨ರಲ್ಲಿ ಬಾಬ್ರಿ ಮಸೀದಿ ಧ್ವಂಸ ಪ್ರಕರಣದ ನೆನಪು ಇನ್ನೂ ಹಸಿರಾಗಿಯೇ ಇದೆ. ಅಲ್ಲಿ ರಾಮಮಂದಿರ ನಿರ್ಮಾಣ ಮಾಡುವುದು ಹಿಂದು ಸನಾತನಿಗಳ ಸಂಘಪರಿವಾರದ ಗುರಿ. ಉತ್ತರಪ್ರದೇಶದಲ್ಲಿ ಅಧಿಕಾರ ಸ್ಥಾಪಿಸಿರುವ ಭಾಜಪ ಸರಕಾರದ ಸಾರಥ್ಯ ಈಗ ಮೋದಿ ಶಿಷ್ಯ ಯೋಗಿ ಆದಿತ್ಯನಾಥನ ಕೈವಶವಾಗಿದೆ. ಈತ ಉತ್ತರ ಪ್ರದೇಶದ ಒಂದು ಮಠದ ಸಂನ್ಯಾಸಿ ಬೇರೆ. ಸತತವಾಗಿ ಮೂರುನಾಲ್ಕು ಬಾರಿ ಪಾರ್ಲಿಮೆಂಟಿಗೆ ಆಯ್ಕೆಯಾಗಿದ್ದ ಈತ ಉತ್ತರ ಪ್ರದೇಶದ ಮುಖ್ಯಮಂತ್ರಿ, ಕಟ್ಟಾ ಹಿಂದುತ್ವವಾದಿ. ಅಧಿಕಾರಕ್ಕೆ ಬಂದ ಮೇಲೆ ಹಿಂಸಾಚಾರವೂ ಹೆಚ್ಚಾಗಿದೆ ಈ ರಾಜ್ಯದಲ್ಲಿ. ರಾಮ ಮಂದಿರ ನಿರ್ಮಿಸಲು ಹೊರಟಿದ್ದಾನೆ ಈತ. ಇಸ್ಲಾಮಿಕ್ ಸ್ಮಾರಕಗಳನ್ನು ನಾಶ ಮಾಡಲು ಹೊರಟಿದ್ದಾನೆ.

ತಾಜ್‌ಮಹಲ್ ಯೋಗಿಯ ಕಣ್ಣು ಕೆಂಪಾಗಿಸಿದೆ. ಈತನ ಸಂಪುಟ ಸಚಿವನೊಬ್ಬ ತಾಜ್‌ಮಹಲ್ ಸ್ಥಾಪಿಸಿರುವ ಸ್ಥಳ ಹಿಂದೆ ಶಿವಾಲಯವಾಗಿತ್ತು ಎಂಬ 'ಸತ್ಯ'ವನ್ನು ಕಂಡುಹಿಡಿದಿದ್ದಾನೆ. ಅಯೋಧ್ಯೆ ರಾಮ ಜನ್ಮಭೂಮಿ ಕತೆಯೇ ಆಧಾರವಾಗಿರಬೇಕು ಆತನಿಗೆ. ಮಥುರಾದಲ್ಲಿ ಔರಂಗಜೇಬ್ ಕಟ್ಟಿರುವ ಮಸೀದಿಯ ಕತೆಯು ಅದೇ ವರಸೆಯೆ. ಹೆಚ್ಚು ಕಡಿಮೆ ಸಾವಿರಕ್ಕೂ ಹೆಚ್ಚು ವರ್ಷಗಳ ಹಿಂದೆ ನಿರ್ಮಾಣಗೊಂಡ ಸ್ಮಾರಕ, ಪ್ರೀತಿಯ ಸಂಕೇತ ತಾಜ್‌ಮಹಲ್ ಈಗ ಯೋಗಿ ಆದಿತ್ಯನಾಥ ಸರಕಾರದ ಅವಕೃಪೆಗೊಳಗಾಗಿ ದುಸ್ಥಿತಿಯಲ್ಲಿದೆ. ಪರಿಸರಮಾಲಿನ್ಯದಿಂದ ಕಪ್ಪಾಗುತ್ತಿರುವ ಅಮೃತ ಶಿಲೆಯ ಸ್ಮಾರಕ ಈಗ ಕಸದ ತೊಟ್ಟಿಯಾಗುತ್ತಿದೆ. ತಾಜ್‌ಮಹಲ್‌ನ ಆಕರ್ಷಣೆ ಕಡಿಮೆ ಮಾಡಲು ಯೋಗಿ ಸರಕಾರ ಪ್ರದೇಶವನ್ನು ಹೊಲಸಾಗಿಸಲು ನೋಡುತ್ತಿದೆ. ಈಚೆಗೆ ನ್ಯಾಯಾಲಯ ಉತ್ತರ ಪ್ರದೇಶದ ಸರಕಾರದ ಗಮನಕ್ಕೆ ಪರಿಸ್ಥಿತಿಯನ್ನು ತಂದಿದೆ. ಸುತ್ತಲೂ ಕಸದರಾಶಿ, ನೀರಿನ ಪ್ಲಾಸ್ಟಿಕ್ ಬಾಟಲ್‌ಗಳು, ಚೀಲಗಳು ಬಿದ್ದಿರುವುದನ್ನು ನ್ಯಾಯಾಲಯ ಎತ್ತಿ ತೋರಿಸಿದೆ. ಪ್ರದೇಶವನ್ನು ಶುಚಿಯಾಗಿರಿಸಲು ಸರಕಾರವನ್ನು ಎಚ್ಚರಿಸಿದೆ.

✶ ✶ ✶

ಕರ್ನಾಟಕದಲ್ಲಿ ಕುಮಾರಸ್ವಾಮಿ ಮುಖ್ಯಮಂತ್ರಿ ಗದ್ದುಗೆ ಏರಿ ಎರಡು ತಿಂಗಳಾಗುತ್ತ ಬಂತು. ಎಲ್ಲ ಮುಖ್ಯಮಂತ್ರಿಗಳೂ ನಾನಾ ಬಗೆಯ ಒತ್ತಡಗಳಲ್ಲಿ ಕಾರ್ಯನಿರ್ವಹಿಸಬೇಕಾದ್ದು ಅನಿವಾರ್ಯ. ಅದರಲ್ಲೂ ಸಮ್ಮಿಶ್ರ ಸರಕಾರದ ಸಾರಥ್ಯ ಸುಲಭವೇನಲ್ಲ. ಹಿಂದೆ ಭಾಜಪ ಜೊತೆ ಜೊತೆ ಕೈಜೋಡಿಸಿ ಸರಕಾರ ರಚಿಸಿದಾಗಲೂ ಕುಮಾರಸ್ವಾಮಿಯ ಜಾತ್ಯತೀತ ಜನತಾದಳ ಪಕ್ಷದ ಶಾಸಕರ ಸಂಖ್ಯೆ ಅಷ್ಟೇನೂ ಹೆಚ್ಚಾಗಿರಲಿಲ್ಲ. ಆಗ ಭಾಜಪದ ಒತ್ತಡದ ಅನುಭವ ಆಗಿರಬೇಕು. ಈಗ ಕಾಂಗ್ರೆಸ್ಸಿಗಿಂತ ಸುಮಾರು ಅರ್ಧದಷ್ಟು ಸದಸ್ಯ ಬಲವಿರುವ 'ಜೆಡಿಎಸ್' ಕಾಂಗ್ರೆಸ್ ಪಕ್ಷದ ಸಹಾಯದಿಂದ ಅಧಿಕಾರ ಹಿಡಿದಿದೆ. ಕುಮಾರಸ್ವಾಮಿ 'ಕಿಂಗ್ ಮೇಕರ್' ಆಗುವುದಕ್ಕೆ ಪ್ರತಿಯಾಗಿ 'ಕಿಂಗ್' ಆಗಿಬಿಟ್ಟಿದ್ದಾರೆ. 'ದೋಸ್ತಿ ಸರಕಾರ' ಎಂದು ನಾಮಕರಣ ಮಾಡಿರುವ ಯಡಿಯೂರಪ್ಪನವರ ಭಾಜಪ ಪ್ರಬಲ ವಿರೋಧ ಪಕ್ಷ. ಅವರು ಈಗ ಸೇಡು ತೀರಿಸಿಕೊಳ್ಳುತ್ತಿದ್ದಾರೆ. ಆ ಒತ್ತಡ ಒಂದು ಕಡೆಯಾದರೆ ಇನ್ನೊಂದು ಕಡೆ ಸಮ್ಮಿಶ್ರ ಸರಕಾರದ ಯಾತನೆ. ಎರಡೂ ಸೇರಿರುವಾಗ ಪಕ್ಷದೊಳಗೇ ಬೇಯುತ್ತಿರುವ ಅತೃಪ್ತಿಯ ಹೊಗೆ. ಈ ಎಲ್ಲ ಒತ್ತಡಗಳಿಂದ ಬೆಂದ ಕುಮಾರಸ್ವಾಮಿ ಪಕ್ಷದ ಸಭೆಯಲ್ಲಿ ಕಣ್ಣೀರ ಕೋಡಿ ಹರಿಸಿದ್ದಾರೆ. ಭಾವುಕತೆಗೆ ಶರಣಾಗಿ ಮತ್ತಷ್ಟು ಟೀಕೆಗೆ ಬಲಿಯಾಗಿದ್ದಾರೆ.

'ಅಳುವ ಗಂಡಸನ್ನು ನಂಬಬೇಡ' ಎಂಬ ಮಾತೊಂದಿದೆ. ಹಾಗೇ ಕುಮಾರಣ್ಣನ ಕಂಬನಿ ಕೂಡ ಇರಬೇಕು. ಅಧಿಕಾರ ವಹಿಸಿಕೊಂಡ ಮೇಲೆ ಯಾರಾದರೂ ಸರಿ ಒತ್ತಡಗಳನ್ನು ಧೈರ್ಯದಿಂದ ಎದುರಿಸಬೇಕೇ ಹೊರತು ಅಳುಬುರುಕತನದಿಂದಲ್ಲ. ಅದಕ್ಕೆ ಅನುಕಂಪದ ನಿರೀಕ್ಷೆ ಸಲ್ಲದು. ಅಧಿಕಾರದಲ್ಲಿಲ್ಲದಿದ್ದಾಗ, ಚುನಾವಣೆಯ ಕಾಲದಲ್ಲಿ ಕೈಲಾಗದ ಆಶ್ವಾಸನೆಗಳನ್ನು ನೀಡಬಹುದು. ಮತದಾರರನ್ನು ಆಕರ್ಷಿಸಲು ರೈತರ ಸಾಲ ಮನ್ನಾ ಮಾಡುವ ಆಶ್ವಾಸನೆ ಅಂಥದ್ದು. ಬೇರೆಯವರ ಮೇಲೆ ಗೂಬೆ ಕೂರಿಸಿ ಜಾರಿಕೊಳ್ಳುವುದು ಸುಲಭವಲ್ಲ. ಕಣ್ಣೀರು ಹರಿಸುವುದರಿಂದ ಪ್ರಯೋಜನವಿಲ್ಲ. ಸಮ್ಮಿಶ್ರ ಸರಕಾರವನ್ನು ತೂಗಿಸಿಕೊಂಡು ಹೋಗುವುದು ಕಾಂಗ್ರೆಸ್ಸಿಗೆ ಅನಿವಾರ್ಯ. ಮುಖ್ಯಮಂತ್ರಿ ಮೇಲೆ ಒತ್ತಡ ಹೇರುವುದು ಸಹಜ ಪ್ರವೃತ್ತಿ. ಕಾಂಗ್ರೆಸ್ ಹೈಕಮಾಂಡ್ ಶ್ರೀರಕ್ಷೆಯನ್ನು ಕುಮಾರಸ್ವಾಮಿ ಚೆನ್ನಾಗಿ ಬಳಸಿಕೊಂಡು ಬಜೆಟ್‌ಅನ್ನು ಮಂಡಿಸಿ, ಶಾಸನಸಭೆ ಅಧಿವೇಶನ ನಡೆಸಿ ಸೈ ಎನಿಸಿಕೊಂಡಿದ್ದಾರೆ. ಇನ್ನೇಕೆ ಅಳು?

✶ ✶ ✶

ಜೂನ್ ತಿಂಗಳಲ್ಲಿ ಯಥಾಪ್ರಕಾರ ೧೯೭೫ರಲ್ಲಿ ಘೋಷಿಸಲಾಗಿದ್ದ ತುರ್ತುಪರಿಸ್ಥಿತಿಯ ವಾರ್ಷಿಕ ನೆನಪಿನಲ್ಲಿ ಅನೇಕ ವ್ಯಾಖ್ಯಾನಗಳು ಹೊರಬಂದವು. ಬೇರೆ ವರ್ಷಗಳಲ್ಲಿ ಇದ್ದುದಕ್ಕಿಂತಲೂ ಹೆಚ್ಚಿನ ಉಗ್ರತೆ ಮತ್ತು ಟೀಕೆಗಳು ವ್ಯಕ್ತವಾದುವು. ಕರ್ನಾಟಕದಲ್ಲಿ ನಡೆದ ಚುನಾವಣೆಯ ಮತ್ತು ಮುಂದಿನ ವರ್ಷ ನಡೆಯಲಿರುವ ಲೋಕಸಭಾ ಚುನಾವಣೆಯ ಹಿನ್ನೆಲೆಯಲ್ಲಿ ಕಾಂಗ್ರೆಸ್ ಪಕ್ಷದ "ಸರ್ವಾಧಿಕಾರಿ" ಧೋರಣೆಯನ್ನು ಒತ್ತುಕೊಟ್ಟು ಛೇಡಿಸಲಾದ್ದು ಸಹಜವಾಗಿತ್ತು. ನಾಗರಿಕ ಹಕ್ಕುಗಳಿಗೆ ಕುತ್ತು ತರುವ ಪಕ್ಷ ಎಂದು ಪ್ರಧಾನಿಯವರು ಕಾಂಗ್ರೆಸ್ ಪಕ್ಷವನ್ನು ದೂಷಿಸಿದರು. ಕಳೆದ ನಾಲ್ಕು ವರ್ಷಗಳ ಅವರ ಆಡಳಿತದಲ್ಲಿ ಜನರ ಮೇಲೆ ನಡೆದ ಹಲ್ಲೆಗಳು ಅವರನ್ನು ಅಷ್ಟಾಗಿ ಕಾಡಿಲ್ಲವೆಂಬುದು ಅವರ

ಹೇಳಿಕೆಗಳಿಂದ ಸ್ಪಷ್ಟವಾಯಿತು. ಅಂತಹ ದೌರ್ಜನ್ಯಗಳು ವರದಿ ಆದಾಗಲೂ ಅವರೆಂದೂ ಅವಕ್ಕೆ ಪ್ರತಿಕ್ರಿಯಿಸಿರಲಿಲ್ಲ. ಇಂದಿನ ಸನ್ನಿವೇಶವು "ಅಘೋಷಿತ ತುರ್ತುಪರಿಸ್ಥಿತಿ" ಎಂದು ಹಲವು ವಲಯಗಳಲ್ಲಿ ವ್ಯಾಖ್ಯಾನಿಸಲಾಗುತ್ತಿದೆ. ೧೯೭೫ರ ತುರ್ತುಪರಿಸ್ಥಿತಿಯ ಘೋಷಣೆ ಮತ್ತು ಅದರ ವಿಷಮ ಪರಿಣಾಮಗಳನ್ನು ಶಾಲಾ–ಕಾಲೇಜುಗಳ ಪಠ್ಯಪುಸ್ತಕಗಳಲ್ಲಿ ಸೇರ್ಪಡೆಗೊಳಿಸಬೇಕೆಂಬ ಸಲಹೆಯನ್ನು ಪ್ರಧಾನಿ ನೀಡಿದ್ದಾರೆ. ಅದನ್ನು ವಿರೋಧಿಸುವ ನಿಲುವು ಅನಗತ್ಯ. ಆದರೆ ಅದನ್ನು ವಸ್ತುನಿಷ್ಠವಾಗಿ ಮತ್ತು ತಾರ್ಕಿಕವಾಗಿ ಪ್ರಸ್ತುತಪಡಿಸಬೇಕು. ಅಂದರೆ, ತುರ್ತುಪರಿಸ್ಥಿತಿ ಘೋಷಣೆಯ ಮುನ್ನ ಜರುಗಿದ್ದ ವಿದ್ಯಮಾನಗಳನ್ನು ಸಮರ್ಪಕವಾಗಿ ಪರಿಚಯಿಸಿಕೊಡಬೇಕು. ಇಂದಿರಾ ಗಾಂಧಿ ಆಡಳಿತವನ್ನು ಕೊನೆಗೊಳಿಸಲು ಮತ್ತು ನೂತನ "ಪ್ರಜಾಪ್ರಭುತ್ವವಾದಿ ಸಂರಚನೆ"ಯನ್ನು ವ್ಯವಸ್ಥೆಗೊಳಿಸಲು ಭ್ರಷ್ಟಾಚಾರಮುಕ್ತ ವಾತಾವರಣದ ಅಗತ್ಯವನ್ನು ಗಮನಿಸಿ ನವನಿರ್ಮಾಣ ಸಂಗ್ರಾಮವು ಆರಂಭವಾಗಿತ್ತು. ನಂತರ ಜೆ.ಪಿ.ಯವರ ನೇತೃತ್ವದಲ್ಲಿ 'ಸಂಪೂರ್ಣ ಕ್ರಾಂತಿ'ಯ ಉದ್ಘಾಟನೆಯಾಯಿತು. ಸಂವಿಧಾನೇತರ ಶಕ್ತಿ ಕೇಂದ್ರಗಳಾಗಿ ರಾಷ್ಟ್ರೀಯ ಸ್ವಯಂಸೇವಕ ಸಂಘ ಮತ್ತು ಸಂಜಯ ಗಾಂಧಿ ಮುನ್ನೆಲೆಗೆ ಬಂದಿದ್ದು ಇತಿಹಾಸ. ಜೆಪಿಯವರು ಇಂದಿರಾ ಗಾಂಧಿಯವರ ದಮನ–ನೀತಿಯ ವಿರುದ್ಧವಾಗಿ ಹೋರಾಟಕ್ಕೆ ಕರೆ ಕೊಡುತ್ತಾ ಪೊಲೀಸ್ ಮತ್ತು ಮಿಲಿಟರಿ ವಿಭಾಗಗಳು ಕೇಂದ್ರ ಸರಕಾರದ ಮತ್ತು ಕಾಂಗ್ರೆಸ್ ಆಡಳಿತದಲ್ಲಿರುವ ರಾಜ್ಯ ಸರ್ಕಾರಗಳ ಆಣತಿಗಳಿಗೆ ಮಾನ್ಯತೆ ನೀಡಕೂಡದೆಂದು ಆಗ್ರಹಿಸಿದ್ದರು. ಜಾರ್ಜ್ ಫರ್ನಾಂಡಿಸ್ ಅವರು ಎಲ್ಲೋ ರೈಲು ಉರುಳಿಸುವ ಹುನ್ನಾರದಲ್ಲಿದ್ದರೆಂದು ಆಪಾದಿಸಲಾಗಿತ್ತು. ಕಾಂಗ್ರೆಸ್‌ಗೆ ಬೆಂಬಲ ನೀಡುತ್ತಿದ್ದ ಸಂಘಟನೆಗಳಿಗೆ ಮತ್ತು ರಾಜಕೀಯ ಪಕ್ಷಗಳಿಗೆ ಆರೆಸ್ಸೆಸ್ ಮತ್ತು ಸಂಪೂರ್ಣ ಕ್ರಾಂತಿಯ ಚಳುವಳಿಗಾರರು ಸವಾಲೆಸೆದು ಅಲ್ಲಲ್ಲಿ ಅವರ ಮೇಲೆ ಧಾಳಿ ನಡೆಸುತ್ತಿದ್ದುದೂ ಉಂಟು. ತುರ್ತುಪರಿಸ್ಥಿತಿಯನ್ನು ಅಂತ್ಯಗೊಳಿಸಿ ಲೋಕಸಭಾ ಚುನಾವಣೆಯನ್ನು ಘೋಷಿಸಿದಾಗ ಆಗ ತಾನೇ ಅಸ್ತಿತ್ವಕ್ಕೆ ಬಂದಿದ್ದ ಜನತಾ ಪಕ್ಷವು ಅಧಿಕಾರಕ್ಕೆ ಬಂದಿತು. ನಂತರ ತುರ್ತುಪರಿಸ್ಥಿತಿಯ ಕಾಲದ ದೌರ್ಜನ್ಯಗಳನ್ನು ತನಿಖೆ ಮಾಡಲು ಷಾ ಆಯೋಗವನ್ನು ರಚಿಸಲಾಯಿತು. ಸಂಪೂರ್ಣ ಕ್ರಾಂತಿಯ ಪರವಾಗಿ ಸಕ್ರಿಯರಾಗಿದ್ದ ಚಳುವಳಿಗಾರರು ನಡೆಸಿದ್ದರೆನ್ನಲಾದ ಘಟನಾವಳಿಗಳ ವಿಚಾರಣೆಯೇನೂ ನಡೆಯಲಿಲ್ಲ.

ಪಠ್ಯಪುಸ್ತಕಗಳಲ್ಲಿ ತುರ್ತುಪರಿಸ್ಥಿತಿಯ ಹಿಂದು–ಮುಂದುಗಳನ್ನು ಪ್ರತಿಪಾದಿಸುವಾಗ ಇವೆಲ್ಲವನ್ನೂ ಸಾಕಷ್ಟು ಸಮಗ್ರವಾಗಿ ನಿರೂಪಿಸುವುದು ಉಚಿತ ಎನಿಸುತ್ತದೆ. ತುರ್ತುಪರಿಸ್ಥಿತಿಯತ್ತ ಹಿನ್ನೋಟ ಬೀರಿದರೆ ಆ ಸಂದರ್ಭದಲ್ಲಿ ಮತ್ತು ಆಮೇಲೆ ಅತಿ ಹೆಚ್ಚಿನ ರಾಜಕೀಯ ಲಾಭ ಪಡೆದದ್ದು ಆರೆಸ್ಸೆಸ್ ಎಂಬುದು ಸುವ್ಯಕ್ತವಾಗಿದೆ. ಸಂಪೂರ್ಣ ಕ್ರಾಂತಿಯ ಆಶಯಗಳಲ್ಲಿ ಯಾವೆಲ್ಲಾ ನೆರವೇರಿದವು ಅಥವಾ ಈಡೇರಲಿಲ್ಲ ಎಂಬುದನ್ನು ಗಮನಿಸಿದರೆ ನಿಟ್ಟುಸಿರೊಂದೇ ಉತ್ತರ. ಭ್ರಷ್ಟಾಚಾರವು ನಿರ್ಮೂಲನಗೊಳ್ಳುವುದಿರಲಿ, ಸಾಸಿವೆ ಕಾಳಿನಷ್ಟು ಕಡಿಮೆ ಸಹ ಆಗಿಲ್ಲ. ಬದಲಾಗಿ ಮತೀಯ ಜಡ್ಡುತನದ ಅಲೆಗಳು ತೋರಿಬಂದವು. ಅದರ ಪರಿಣಾಮಗಳಲ್ಲಿ ರಥಯಾತ್ರೆ ಮತ್ತು ಅಯೋಧ್ಯೆಯಲ್ಲಿ ಶ್ರೀ ರಾಮನ ಮಂದಿರದ ಕಟ್ಟಡ ಕಟ್ಟಲು ಒಂದು ಹಳೆಯ ಮಸೀದಿಯ ಧ್ವಂಸ, ಎರಡೂ ಸೇರಿವೆ. ಗೋಧ್ರಾ ದುರಂತ ಮತ್ತು ಗುಜರಾತಿನ ೨೦೦೨ರ ಪ್ರಕ್ಷುಬ್ಧ ಸ್ಥಿತಿ, ಹತ್ಯಾಕಾಂಡ ಮುಂತಾದ ಘೋರ ಘಟನೆಗಳು ರಥಯಾತ್ರೆ ಮತ್ತು ಮಸೀದಿ ಧ್ವಂಸಕ್ಕೆ ಸಂಬಂಧಿಸಿದುವೇ ಆಗಿವೆ, ಮುಂದುವರಿಕೆಯೇ ಆಗಿವೆ. ತುರ್ತುಪರಿಸ್ಥಿತಿಯ ಕಾಲದ 'ಸರ್ವಾಧಿಕಾರಿ' ಧೋರಣೆಯು ೨೦೧೪ರ ಚುನಾವಣೆಯ ನಂತರ ಬೇರೊಂದು ಅವತಾರದಲ್ಲಿ ಪ್ರತ್ಯಕ್ಷ ಬಾಧೆಯಾಗಿರುವುದು ವಾಸ್ತವ. ಅಂದು ಸಂಜಯ ಗಾಂಧಿ ಮತ್ತು ಆತನ ಗೂಂಡಾಪಡೆ "ಸಂವಿಧಾನೇತರ ಅಧಿಕಾರ ಕೇಂದ್ರ"ವಾಗಿತ್ತು. ೨೦೧೪ರ ತರುವಾಯದಲ್ಲಿ ಆರೆಸ್ಸೆಸ್ ಮತ್ತು ಅದರ ಸೋದರ ಸಂಬಂಧೀ ಸಂಸ್ಥೆಗಳು ಅವನ್ನು ಮೀರು ವಂತಹ ಸಂವಿಧಾನೇತರ ಅಧಿಕಾರ ಕೇಂದ್ರವಾದವು. ಕೇವಲ "ಸಾಂಸ್ಕೃತಿಕ ಕ್ಷೇತ್ರದ ಸಂಘಟನೆ" ಎಂದು ಹೇಳಿಕೊಳ್ಳುತ್ತಿದ್ದ ಆರೆಸ್ಸೆಸ್ ಶ್ರೀ. ರಾಮ ಮಾಧವರಂತಹ ನೂರಾರು ಕಾರ್ಯಕರ್ತರನ್ನು ಭಾರತೀಯ ಜನತಾ ಪಕ್ಷದ ಪದಾಧಿಕಾರಿಗಳು ಮತ್ತು ನೇತಾರರಾಗಿ ಕರ್ತವ್ಯ ನಿರ್ವಹಿಸಲು ಕಳಿಸಿಕೊಟ್ಟಿತು. ಇದು ಎಂತಹ ಸಂಸ್ಕೃತಿಯೋ ತಿಳಿಯದು. ೨೦೧೯ರ ಚುನಾವಣೆಯಲ್ಲಿ ಆರೆಸ್ಸೆಸ್ಸೇತರ ಪಕ್ಷಗಳು, ತಾನು ರಾಜಕೀಯ ಪಕ್ಷವೆಂದು ಬಹಿರಂಗವಾಗಿ ಒಪ್ಪಿಕೊಳ್ಳದ ಆರೆಸ್ಸೆಸ್ ಬೆಂಬಲಿತ ಸಂಘಟಿತ ರಾಜಕೀಯ ಕೂಟವನ್ನು ಹೇಗೆ ಎದುರಿಸಬೇಕೆಂಬುದಕ್ಕೆ ಇವೆಲ್ಲಾ ಸಾಮಗ್ರಿ ಒದಗಿಸುತ್ತವೆ.

ತುರ್ತುಪರಿಸ್ಥಿತಿಯ ಘೋಷಣೆಗೆ ಮುಂಚೆ ಮತ್ತು ಆಮೇಲೆ "ಸಂಪೂರ್ಣ ಕ್ರಾಂತಿ"ಗೆ ಬೆಂಬಲ ಸೂಚಿಸಿದ್ದ ಇಲ್ಲವೇ ಅದನ್ನು ವಿರೋಧಿಸಿದ್ದ ಬೇರೆ ಬೇರೆ ಕಮ್ಯುನಿಸ್ಟ್ ಪಕ್ಷಗಳು ಇಂದು ಯಾವ ಕಾರ್ಯಾಚರಣೆಗೆ ಮುಂದಾಗುತ್ತವೆಂಬುದು ಪ್ರಮುಖ ಪ್ರಶ್ನೆಯಾಗುತ್ತದೆ. "ಆರೆಸ್ಸೆಸ್ ಫ್ಯಾಸಿಸ್ಟ್ ಎಂದಾದರೆ ನಾನು ಫ್ಯಾಸಿಸ್ಟ್" ಎಂದು ತಿಳಿಸಿದ್ದ ಮಾನ್ಯ ಜಯಪ್ರಕಾಶ ನಾರಾಯಣರು ೨೦೧೪ರ ನಂತರದ ಭಾರತದ ಬಗ್ಗೆ ಏನು ಹೇಳುತ್ತಿದ್ದಿರಬಹುದಿತ್ತು? ಬಹುತ್ವ ಭಾರತದ ಕಲ್ಪನೆ ಮತ್ತು ವಾಸ್ತವ ಕುರಿತಂತೆ ಅವರ ಧೋರಣೆ ಏನಾಗಿರುತ್ತಿತ್ತು? ಇವು ಊಹಾತ್ಮಕ ನೆಲೆಯ ಪ್ರಶ್ನೆಗಳಾಗಿ ಉಳಿಯಲಾರವು. ೨೦೧೯ರ ಚುನಾವಣೆಯಲ್ಲಿ ಇಂದಿನ "ಮಾರ್ಮಿಕ ಸರ್ವಾಧಿಕಾರಿ" ಧೋರಣೆ ಮತ್ತು ಕ್ಷುದ್ರ ಕಾರ್ಯಾಚರಣೆಗಳನ್ನು ನಿರ್ಬಂಧಿಸುವಂತಹ ರಾಜಕೀಯ ಪರ್ಯಾಯವನ್ನು ನಿರ್ಮಿಸಿಕೊಂಡು ಅದನ್ನು ತತ್ವಬದ್ಧವಾಗಿ ಮುನ್ನಡೆಸಿಕೊಂಡು ಹೋಗದಿದ್ದರೆ ತುರ್ತುಪರಿಸ್ಥಿತಿಯ ಕತ್ತಲು ಮತ್ತು ಕರಾಳತೆಯನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಮತ್ತು ವ್ಯಾಪ್ತಿಯಲ್ಲಿ ನಮ್ಮ ದೇಶವು ಅನುಭವಿಸಬೇಕಾದೀತು. ೨೦೫೦ರ ಇತಿಹಾಸ ಪಠ್ಯಪುಸ್ತಕಗಳಲ್ಲಿ ಅದನ್ನು ಆ ಪೀಳಿಗೆಯವರು ಬರೆದಿಟ್ಟುಕೊಳ್ಳುವಂತೆ ಆಗಗೊಡಬೇಕೆ? ಸಮಸ್ತರೂ ಆಲೋಚಿಸಬೇಕಾದ ಪ್ರಶ್ನೆ ಇದೇ.

✴ ✴ ✴

"ನೆನೆಯದಿರಣ್ಣ ಭಾರತದೊಳಿನ್ನಾರುಮಂ" ಎಂಬಿತ್ಯಾದಿಯಾಗಿ ಆದಿಕವಿಯು ಕರ್ಣನನ್ನು ವಿಜೃಂಭಿಸಿದ. ಕರ್ಣನು ಸೋತು ಸುಣ್ಣವಾದರೂ ಅವನನ್ನು ನೆನೆಯಬೇಕೆಂದು ಕವಿ ಆಗ್ರಹಿಸಿದ. ಈ ವರ್ಷದ ಜಾಗತಿಕ ಕಾಲ್ಚೆಂಡು ಸ್ಪರ್ಧೆಯು ಮುಕ್ತಾಯವಾದಾಗ ಕ್ರೊವೇಶಿಯ ಸೋಲುಂಡು, ಆಫ್ರಿಕ ಮೂಲದ ಆಟಗಾರರು ಹೇರಳವಾಗಿರುವ ಫ್ರಾನ್ಸಿನ ತಂಡವು ವಿಜಯಿಯಾಯಿತು. ಆಫ್ರಿಕದ ದೇಶಗಳು ತಮ್ಮ ತಮ್ಮ ಆಟಗಾರರನ್ನು ಪ್ರತ್ಯೇಕವಾಗಿ ಕಣಕ್ಕಿಳಿಸದೆ ಒಟ್ಟಾಗಿ ಒಂದು ತಂಡವನ್ನು ರಚಿಸಿಕೊಂಡು ಸ್ಪರ್ಧೆಗಿಳಿದರೆ ಗೆಲುವು ಯಾರಿಗೆಂಬುದಕ್ಕೆ ಉತ್ತರವನ್ನು ತಡಕಾಡಬೇಕಾಗಿಲ್ಲ. ಅದು ಆಫ್ರಿಕದ್ದೇ ಆಗುವುದರಲ್ಲಿ ಸಂಶಯವಿಲ್ಲ. ಇಡೀ ಜಾಗತಿಕ ಸ್ಪರ್ಧೆಯಲ್ಲಿ ನೆನೆಯಲು ಯೋಗ್ಯವಾಗಿ ಉಳಿದದ್ದು ಆರಂಭಿಕ ಹಂತದಲ್ಲಿ ನಡೆದ ಅರ್ಜೆಂಟೀನಾ ಮತ್ತು ನೈಜೀರಿಯ ನಡುವಿನ ಪಂದ್ಯ. ಯಾರೂ ಕೇಳರಿಯದಿದ್ದ ನೈಜೀರಿಯ ತಂಡವು ಮೇರು ಶಿಖರದಲ್ಲಿ ಪ್ರತಿಷ್ಠಿತವಾಗಿದ್ದ ಅರ್ಜೆಂಟೀನಾ ತಂಡವನ್ನು ಇನ್ನೇನು ಸೋಲಿಸಿಬಿಡುತ್ತದೆ ಎನ್ನುವ ರೀತಿಯಲ್ಲಿ ಸೆಣಸಿದ್ದು ಅತ್ಯಾಕರ್ಷಕವಾಗಿತ್ತು, ರಂಜನೀಯವಾಗಿತ್ತು. "ನೆನೆಯದಿರಣ್ಣ ಇನ್ಯಾರನೂ ನೈಜೀರಿಯಾ ಬಿಟ್ಟು" ಎನ್ನುವ ಮಟ್ಟದಲ್ಲಿ ಆ ದೇಶದ ತಂಡವು ಅರ್ಜೆಂಟೀನಾಕ್ಕೆ ಮಣ್ಣುಮುಕ್ಕಿಸ ಹೊರಟಿತ್ತು. ಅರ್ಜೆಂಟೀನಾದ ಒಬ್ಬ ಆಟಗಾರನು ನೈಜೀರಿಯ ತಂಡದವನೊಬ್ಬ ಒದ್ದ ಚೆಂಡನ್ನು ಕೈಗೆ ತಾಕಿಸಿಕೊಂಡ, ಆದರೆ ಅದನ್ನು ಗಮನಿಸದೆ ತೀರ್ಪುಗಾರನು ನೈಜೀರಿಯ ತಂಡದ ಕೈ ಕತ್ತರಿಸಿಬಿಟ್ಟ ನೆಂಬಂತೆ ಭಾಸವಾಯಿತು. ನಮ್ಮ ದೇಶದ ಕಾಲ್ಚೆಂಡು ಆಟಗಾರರು ಮುಂದೊಮ್ಮೆ ವಿಶ್ವಸ್ಪರ್ಧೆಯಲ್ಲಿ ಪಾಲ್ಗೊಳ್ಳುವಂತಾದರೆ ಅವರು ಗೆದ್ದು ಟ್ರೋಫಿಯನ್ನು ತರಲಾರರೇನೋ, ಆದರೆ ನೈಜೀರಿಯಾದವರಂತೆ ಅಭಿಮನ್ಯುಗಳಾದರೆ ಸಾಕು. ಫ್ರಾನ್ಸ್ ಗೆದ್ದಿದ್ದು ಆಫ್ರಿಕ ಮೂಲದ ಆಟಗಾರರಿಂದಾಗಿ, ಆದ್ದರಿಂದ ಆಫ್ರಿಕದ ಆಟಗಾರರಿಗೆ ಜೈ ಎನ್ನೋಣ.

ಇನ್ನು ಕೆಲವೇ ತಿಂಗಳುಗಳಲ್ಲಿ ಜರುಗಲಿರುವ ಏಷ್ಯ ಕ್ರೀಡಾಸ್ಪರ್ಧೆಗಳಲ್ಲಿ ನಮ್ಮ ದೇಶದ ಕ್ರೀಡಾಪಟುಗಳು ಆಫ್ರಿಕದ ಕಾಲ್ಚೆಂಡು ಆಟಗಾರರನ್ನು ನೆನಪಿಸುವಂತೆ ಮಾಡುತ್ತಾರೇನೋ ಕಾದು ನೋಡೋಣ. ಅದಕ್ಕೆ ಪೂರ್ವಭಾವಿಯಾಗಿ "ಮುದುಕ"ರಾಗಿದ್ದರೂ ಕ್ರೀಡಾ ತಂಡಗಳಲ್ಲಿ ಗೂಟ ಹೊಡೆದುಕೊಂಡು ಕಲ್ಲುಕಂಬಗಳಂತೆ ನಿಂತಿರುವವರು ನಮ್ಮ ಯುವಕ–ಯುವತಿಯರಿಗೆ ಸ್ಥಾನಗಳನ್ನು ತೆರವುಗೊಳಿಸಿಕೊಟ್ಟರೆ ಮಾತ್ರ ಅದು ಸಾಧ್ಯವಾಗುತ್ತದೇನೋ. ●




**ಜಾತೀಯತೆ ತೊಲಗಬೇಕಾದರೆ ಮೀಸಲಾತಿ ಬದಲಾಗಬೇಕು**

✉ ಹಲವು ಸಂಸ್ಕೃತಿಗಳ ನೆಲೆವೀಡು, ಹಲವು ಭಾಷೆಗಳ ತವರೂರು ಹೀಗೆ ಹಲವುಗಳ ನಡುವೆ ಏಕತೆ ಸಾಧಿಸಿರುವುದೆ ಭಾರತೀಯತೆಯ ಸಂಕೇತ. ಅದೇ ಈ ದೇಶದ ನಿಜವಾದ ಕಾಳಜಿ. ಏನೆಲ್ಲಾ ಹೊಗಳಿಕೆ ಗಳಿದ್ದರೂ ಸಮಸ್ಯೆಗಳಿಗೇನೂ ಕೊರತೆ ಇಲ್ಲ. ಸಮಸ್ಯೆ ಗಳಿಂದಲೇ ದೇಶದ ಪ್ರಗತಿ ಕುಂಠಿತಗೊಂಡಿದೆ. ಬಡತನ, ನಿರುದ್ಯೋಗ ಸಮಸ್ಯೆ, ಅತಿಯಾದ ಜನಸಂಖ್ಯೆ, ಜಾತಿಪದ್ಧತಿ, ಸಂಕುಚಿತ ಧಾರ್ಮಿಕತೆ, ರಾಜಕೀಯ ಏರಿಳಿತಗಳು, ಹೀಗೆ ಹಲವು ಸಮಸ್ಯೆಗಳ ನಡುವೆ ಪ್ರಗತಿ ಕಾಣಬೇಕಿದೆ. ಅದು ಬಹು ದೊಡ್ಡ ಸವಾಲಾಗಿದೆ. ಇಂತಹ ಸಮಸ್ಯೆಗಳ ನಡುವೆಯೂ ಏಕತೆ ಸಾಧಿಸಿರುವುದೆ ಭಾರತೀಯತೆಯ ಹೆಗ್ಗುರುತು. ವಿಶ್ವದ ಅತ್ಯಂತ ದೊಡ್ಡ ಪ್ರಜಾಪ್ರಭುತ್ವ ದೇಶವಾದ ಭಾರತ ಪ್ರಜಾಪ್ರಭುತ್ವವನ್ನು ಗೆಲ್ಲಿಸುವಲ್ಲಿ ಯಶಸ್ವಿಯಾಗಿದೆ. ಈ ನಿಟ್ಟಿನಲ್ಲಿ ಹಲವಾರು ಏರಿಳಿತಗಳು ಆಗಿರುವುದುಂಟು, ಆದರೂ ಇಲ್ಲಿ ಪ್ರಜಾಪ್ರಭುತ್ವ ಗಟ್ಟಿಯಾಗಿ ನೆಲೆನಿಂತಿದೆ. ಅದಕ್ಕೆ ಭಾರತೀಯ ಸಂವಿಧಾನ ಕಾರಣ ಎಂಬುದರಲ್ಲಿ ಎರಡು ಮಾತಿಲ್ಲ. ಸಂವಿಧಾನ ರಚನಾ ಸಮಿತಿಯ ಅಧ್ಯಕ್ಷರಾದ ಡಾ॥ ಬಾಬು ರಾಜೇಂದ್ರ ಪ್ರಸಾದ್ ಹಾಗೂ ಆ ಸಮಿತಿಯ ಸದಸ್ಯರ ಶ್ರಮದ ಕಾರಣ ಇಂದಿಗೂ ಫಲ ನೀಡುತ್ತಿದೆ. ಇಲ್ಲಿ ಸ್ಮರಿಸಲೇಬೇಕಾದ ಮತ್ತೊಂದು ಹೆಸರು ಡಾ॥ ಬಿ. ಆರ್. ಅಂಬೇಡ್ಕರ್ ಅವರದು. ಸಂವಿಧಾನ ಕರಡು ಸಮಿತಿ ಅಧ್ಯಕ್ಷರಾಗಿದ್ದ ಅವರ ದೂರದೃಷ್ಟಿ ಇದಕ್ಕೆಲ್ಲಾ ಕಾರಣ. ಅಂತಹ ಮಹಾಜ್ಞಾನಿಗಳಿಂದ ರಚಿತವಾದ ಸಂವಿಧಾನವು ಕಾಲಕಾಲಕ್ಕೆ ಸಣ್ಣಪುಟ್ಟ ಬದಲಾವಣೆಗಳೊಂದಿಗೆ ಇಂದಿಗೂ ತನ್ನ ಮೂಲರೂಪ ಉಳಿಸಿಕೊಂಡಿದೆ.

ಭಾರತದಲ್ಲಿನ ಜಾತಿಪದ್ಧತಿಯು ಸಮಾಜವನ್ನು ಹಲವು ಸ್ತರಗಳನ್ನಾಗಿ ವಿಭಜಿಸಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರರೆಂಬ ಜಾತಿಗಳನ್ನಾಗಿ ವಿಂಗಡಿಸ ಲಾಗಿದೆ. ಈ ಸ್ತರಗಳಲ್ಲಿ ಅದರಲ್ಲೂ ಕೆಳವರ್ಗದ ಜಾತಿ ಗಳನ್ನು ಅಸ್ಪೃಶ್ಯತೆಯ ಹೆಸರಿನಲ್ಲಿ ಕೀಳಾಗಿ ಕಾಣುವ ಪರಿಪಾಠವಿತ್ತು. ಅಂತಹ ನೋವುಗಳನ್ನು ಸ್ವತಃ ಅನುಭವಿಸಿದ್ದ ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್ ಅವರು ಅಂತಹ ಶೋಷಿತ ಸಮಾಜವನ್ನು ಮುಖ್ಯ ವಾಹಿನಿಗೆ ತರುವ ಉದ್ದೇಶದಿಂದ ಸಂವಿಧಾನದಲ್ಲಿ ಮೀಸಲಾತಿ ನೀಡಲಾಗಿತ್ತು. ಆದರೆ ಅದೇ ಸೌಲಭ್ಯಗಳು ಅದೇ ಜಾತಿಗಳಲ್ಲಿನ ಬಲಾಢ್ಯರ ಪಾಲಾಗುತ್ತಿವೆ. ಇದರಿಂದ ನಿಜವಾಗಿ ಸೌಲಭ್ಯ ಸಿಗಬೇಕಾದವರು ಶೋಷಣೆಗೆ ಒಳಪಡುತ್ತಲೇ ಇದ್ದಾರೆ.

ಇಂದು ಸರ್ಕಾರದಿಂದ ಸಿಗುತ್ತಿರುವ ಎಲ್ಲ ಸೌಲಭ್ಯಗಳು ಉಳ್ಳವರ ಪಾಲಾಗುತ್ತಿವೆ. ಶೋಷಿತರು ನಿರಂತರ ಶೋಷಣೆಗೆ ಒಳಗಾಗುತ್ತಲೇ ಇದ್ದಾರೆ. ಇನ್ನು ಮೇಲ್ವರ್ಗಗಳಲ್ಲೂ ನಡೆಯುತ್ತಿರುವುದು ಹೀಗೆಯೆ. ಅಲ್ಲೂ ಬಡವರು ಬಡವರಾಗಿಯೇ ಉಳಿಯುತ್ತಲಿದ್ದಾರೆ, ಸಿರಿವಂತರು ಬೆಳೆಯುತ್ತಲೇ ಇದ್ದಾರೆ. ಎಲ್ಲ ಜಾತಿಗಳಲ್ಲೂ ಬಡವರಿಗೆ ಅನ್ಯಾಯವಾಗುತ್ತಿರುವುದಂತೂ ಸತ್ಯ. ಬಡವರಿಗೆ ಆಗುತ್ತಿರುವ ಅನ್ಯಾಯ ಸರಿಪಡಿಸಬೇಕಿದೆ. ಆಗ ನಿಜಕ್ಕೂ ಶೋಷಿತರಿಗೆ ನ್ಯಾಯ ದೊರೆಯುತ್ತದೆ.

*ಬೆಂಗಳೂರು* ***ನಾಗರಾಜ ಜಿ. ನಾಗಸಂದ್ರ***

✉ 'ಇದು ಮಂಗಳೂರು ಸಮಾಚಾರ' ಎನ್ನುವ ಹೊಸತಿನ ಜುಲೈ ಸಂಚಿಕೆ ಈ ತಿಂಗಳು ಪತ್ರಿಕಾ ದಿನಾಚರಣೆ ಎಂಬುದನ್ನು ನೆನಪು ಮಾಡಿಕೊಳ್ಳಲು




ಉತ್ತಮ ಹೇಳಿಕೆಯಾಗಿದೆ. ಜಿ. ರಾಮಕೃಷ್ಣ ಅವರ 'ಸಾಹಿತ್ಯ ಸಿದ್ಧಾಂತ ಸಮಾಜ' ಎನ್ನುವ ಲೇಖನ ಇಂದಿನದು ಹೃದಯ ಹೀನತೆ ಸಮಾಜ ಎಂಬುದಕ್ಕೆ ಒತ್ತು ಕೊಟ್ಟಂತಿದೆ. ಪೂರಕವಾಗಿ ಹರಿದು ಬಂದ ದಾರಿಯಾವುದಯ್ಯ ಶ್ರೀನಿವಾಸ ಕುಂಡಂತಾಯರ ಹಾಗೂ ಅಸ್ಪೃಶ್ಯ ಕನ್ಯೆಯ ವಿಶಾದ ಗೀತೆ ಎಂಬ ಡಾ॥ ಮೂಡ್ನಾಕೂಡು ಚಿನ್ನಸ್ವಾಮಿಯವರ ಕವನ ಲಹರಿಗಳು ರಾಮಕೃಷ್ಣರ ಹೇಳಿಕೆಗೆ ಬೆಂಬಲ ನೀಡಿದಂತಿದೆ. ಎಲ್ಲಕ್ಕೂ ಮಿಗಿಲಾಗಿ ಬೆಂಗಳೂರಿನ ಜಿ. ಎನ್. ಮೋಹನ್ ಅವರು ನೀಡಿದ 'ಚಾನಲ್‌ಗಳಿಗೆ ಈಗ ಅಗಾಧ ಹಸಿವು' ಎಂಬ ಬರಹ ಮೆಚ್ಚದಿರಲು ಸಾಧ್ಯವೇ ಇಲ್ಲ. ಹಾಗೆಯೇ 'ಇದು ಅವನು ಅವಳಾಗುವವರ ಕಥೆ. ಅಸ್ಮಿತೆಗಾಗಿ ಜೀವಂತವಾಗಿದೆ ಇವರ ಸಂಸ್ಕೃತಿ' ಎಂದು ಮಂಗಳೂರಿನ ರೇಷ್ಮಾ ಜಿ. ಉಲ್ಲಾಳ್ ಅವರ ವಿವರಣೆ ಮನ ಕರಗಿಸುವಂತಿತ್ತು.

*ಪಂಜಿಕಲ್ಲು* ***ಕೀರಿಕ್ಕಾಡು ವನಮಾಲಾ ಕೇಶವ ಭಟ್ಟ***

✉ ಕರ್ನಾಟಕದ ೨೦೧೮ರ ಚುನಾವಣೆಯ ಪಕ್ಷಗಳ ಪ್ರಣಾಳಿಕೆಯ ಪ್ರಸ್ತಾವನೆ, ಎರಡು ರಾಷ್ಟ್ರೀಯ, ಒಂದು ಪ್ರಾದೇಶಿಕ ಪಕ್ಷಗಳ ಚುನಾವಣೆ ಪ್ರಣಾಳಿಕೆಗಳ ನಡುವೆ ಮೂಲ ಭಿನ್ನತೆಯೇನಿಲ್ಲವೆಂದೂ, ಲೇಖಕರು ಸ್ಪಷ್ಟವಾಗಿ ವರ್ಣಿಸಿದ್ದಾರೆ. ಎಲ್ಲಾ ಪಕ್ಷ ಪ್ರಣಾಳಿಕೆ ಏಕರೂಪ "ರೈತರ ಸಾಲ ಮನ್ನಾ"ವೆಂಬ ಆಮಿಷ ಒಡ್ಡಿ, ದುಡಿಯುವ ರೈತನನ್ನು ದಾರಿ ತಪ್ಪಿಸಿ, ಮತಗಳನ್ನು ಸೆಳೆದಿದ್ದಾರೆ. ಆಮಿಷಕ್ಕೆ ಬಲಿಯಾದ ರೈತನು ದಿಕ್ಕು ತೋಚದೆ, ಕಂಗಾಲಾಗಿ ಚಾತಕಪಕ್ಷಿಯಂತೆ ಸಾಲಮನ್ನಾ ಕಾಯುತ್ತಾ, ನರಕಯಾತನೆ ಅನುಭವಿಸುವುದು ದುರದೃಷ್ಟ. ಸುಳ್ಳು ಭರವಸೆ ಆಮಿಷಗಳಿಂದ ಆಡಳಿತ ನಡೆಸುವ ಪಕ್ಷಗಳು ರೈತನನ್ನು ವಂಚಿಸಿ, ಬ್ಯಾಂಕ್ ಸಾಲ ಮತ್ತು ಲೇವಾದೇವಿ ಸಾಲ ತೀರಿಸುವ ರೈತನ ಮನಸ್ಸನ್ನು ಬದಲಿಸಿದ್ದರಿಂದ ಇನ್ನೂ ಸಾಲ ಗುಡ್ಡದಂತೆ ಬೆಳೆದಿದೆ. ಹೀಗೆ ಆದರೆ ಸರ್ಕಾರ ಸೇವೆ ರೈತನಿಗೆ ಹೇಗೆ ಸಾಧ್ಯವಾದೀತು? ರೈತರ ಸಮಸ್ಯೆ ಪರಿಹಾರಕ್ಕೆ ಗ್ರಾಮೀಣಾಭಿವೃದ್ಧಿ ಯೋಜನೆಗಳು ಯಶಸ್ಸು ಶ್ರೇಯಸ್ಸು ಗೊಳ್ಳಬೇಕು. ಯೋಜನೆಗಳ ಅನುಷ್ಠಾನ ಚುರುಕು ಗೊಂಡು ರೈತನು ಅಭಿವೃದ್ಧಿಯಾಗಲೆಂದು ಆಶಿಸೋಣ.

ಕರ್ನಾಟಕ ರಾಜ್ಯ ವಿಧಾನಸಭೆ ೨೦೧೮ರ ಮೇ ತಿಂಗಳಲ್ಲಿ ನಡೆದ ಚುನಾವಣೆ ಫಲಿತಾಂಶ ಯಾವ ಪಕ್ಷಗಳೂ ಬಹುಮತ ಗಳಿಸದೆ ಸರ್ಕಾರ ರಚಿಸಲಿಲ್ಲ. ಪ್ರಸ್ತುತ ಸಮ್ಮಿಶ್ರ ಸರ್ಕಾರ ರಚನೆಯಾಗಿದ್ದು ಉತ್ತಮ. ೨೦೧೯ರ ಲೋಕಸಭೆ ಚುನಾವಣೆ ನಂತರ ರಾಜ್ಯ ರಾಜಕೀಯ ಚಿತ್ರಣ ಹೇಗೆ ಬದಲಾವಣೆ ಆಗುವು ದೆಂದೂ ಲೇಖಕರು ಭವಿಷ್ಯ ನುಡಿದಿದ್ದು ಸತ್ಯ.

ಭಾರತದ ಶ್ರೇಷ್ಠ ಕಲಾವಿದ ಮಾದಾಲ ರಂಗಾರಾವ್ 'ಕೆಂಪು ನಕ್ಷತ್ರ', ೨೦೧೮ನೇ ಮೇ ೨೭ರಂದು ನಿಧನದ ಸುದ್ದಿ ಪತ್ರಿಕೆಯಲ್ಲಿ ಪ್ರಕಟಿಸಿದ್ದು ವಿಷಾದ. ದುಡಿಯುವ ವರ್ಗದ ಒಬ್ಬ ಹೋರಾಟಗಾರ ಕಳೆದುಕೊಂಡ ಮಾಹಿತಿ ಕುರಿತು, ಅವರ ಪ್ರತಿಭೆ ಪರಿಚಯವನ್ನು ಲೇಖಕರು ಉತ್ತಮವಾಗಿ ವ್ಯಕ್ತಪಡಿಸಿದ್ದಾರೆ. ಚಳುವಳಿಯ ಆದರ್ಶ ವ್ಯಕ್ತಿಯ ಪರಿಚಯ ನೀಡಿದ ಪತ್ರಿಕಾ ಮಂಡಳಿಗೆ ಧನ್ಯವಾದ.

ಮಾರ್ಕ್ಸಿಸ್ಟ್, ಲೆನಿನಿಸ್ಟ್, ಪಕ್ಷಗಳ ಪ್ರೇರಣೆಯಿಂದ ದುಡಿಯುವ ವರ್ಗಕ್ಕೆ ಕಾಮ್ರೇಡ್ ಸಿಂಗ್ ಸೇರಿ ಕೊಂಡರು. ನಕ್ಸಲ್‌ಬಾರಿ ಭೂ ಹೋರಾಟದಲ್ಲಿ ಜಮೀನ್ದಾರರು ಹತ್ಯೆಯಾದರು. ಈ ಕ್ರಾಂತಿಕಾರಿ ಪರಿಣಾಮದಿಂದ ನಕ್ಸಲೈಟ್‌ರನ್ನು ಪ್ರಭುತ್ವ ಪೊಲೀಸರಿಂದ ಉಗ್ರಗಾಮಿಗಳೆಂದು ಗುರುತಿಸಿ ಸೆರೆಮನೆಗೆ ತಳ್ಳಿದರು. ಸೆರೆಮನೆಯ ಹಿಂಸೆಯ ಬಗ್ಗೆ ಲೇಖಕರು ಸವಿವಿಸ್ತಾರ ವಾಗಿ ವರ್ಣಿಸಿದ್ದಾರೆ. ಜೈಲಿನ ಖೈದಿಗಳು ವಿವಿಧ ರೀತಿ ಶಿಕ್ಷೆಯನ್ನು ಅನುಭವಿಸಿದ ಮಾಹಿತಿ ಓದಿದಾಗ ಮನೆ ತಲ್ಲಣಗೊಂಡಿತು. ಕಾಮ್ರೇಡ್ ಸಿಂಗ್ ಜೈಲಿನಿಂದ ಹೊರ ಬಂದಾಗ, ಜೈಲಿನ ಹಿಂಸೆಯ ಅನುಭವ ಡೈರಿಯಲ್ಲಿ ನಮೋದಿಸಿದ್ದನ್ನು ದೂರದರ್ಶನದ ಹಿಂದಿ ಧಾರಾವಾಹಿ ಯಲ್ಲಿ ಪ್ರಕಟಿಸಿದರು. ಎ ನಕ್ಸಲೈಟ್ಸ್ – ಪ್ರಿಸನ್ ಡೈರಿ" ಎಂಬ ಪುಸ್ತಕ ಪ್ರಕಟಣೆಯಾಗಿದೆ. ಲೇಖಕರು ತಾವು ಓದಿದ ಪುಸ್ತಕದ "ಅಮುಕ್ತರ ಹಸಿವಿನ ಕಥನ"ವೆಂಬ ಮಾಹಿತಿ ನೀಡಿ ಮನತಲ್ಲಣಗೊಳಿಸಿದ್ದಾರೆ. ಕಾಮ್ರೇಡ್ ರಾಮಚಂದ್ರ ಸಿಂಗ್‌ರ ಪ್ರಮಾಣಿಕ ವ್ಯಕ್ತಿತ್ವ ಯುವಕರಿಗೆ ಪ್ರೇರಣೆಯಾಗಲಿ. ಉತ್ತಮ ಲೇಖನ, ಉತ್ಸಾಹ ಪ್ರೇರಣೆ ನೀಡಿವೆ. ಸಂಪಾದಕರಿಗೆ ವಂದನೆಗಳು.

*ಬಳ್ಳಾರಿ* ***ಮರಿದೇವರ ಸಿದ್ದಪ್ಪ ಮೇಷ್ಟ್ರು***











# ಆಧುನಿಕ ಭಾರತದ ರಾಜಕೀಯ ಚಿಂತನೆಯಲ್ಲಿ ಸ್ವಾತಂತ್ರ್ಯದ ಕುರಿತಿರುವ ಕೆಲವು ನಿಲುವುಗಳು

ಡಾ|| ಪ್ರಕಾಶ ದೇಸಾಯಿ

ಆಧುನಿಕ ಭಾರತದ ರಾಜಕೀಯ ಚಿಂತನೆಯಲ್ಲಿ ಹಲವಾರು ವಿಚಾರಗಳು ಚರ್ಚೆಗೊಳಗಾದವು. ಧರ್ಮ, ರಾಷ್ಟ್ರವಾದ, ಮೀಸಲಾತಿ, ಸಮಾನತೆ, ಪ್ರಜಾಪ್ರಭುತ್ವ, ಸ್ವಾತಂತ್ರ್ಯ ಇತ್ಯಾದಿ ವಿಷಯಗಳ ಬಗ್ಗೆ ಚಿಂತಕರು ತಮ್ಮ ನಿಲುವುಗಳನ್ನು ಸಾರ್ವಜನಿಕ ವಲಯಕ್ಕೆ ತಂದರು. ಆದರೆ ಸ್ವಾತಂತ್ರ್ಯದ ಸಮಗ್ರ ಮಗ್ಗಲುಗಳು ಬಹಳಷ್ಟು ಚಿಂತಕರ ಚಿಂತನೆಯಲ್ಲಿ ಪ್ರಾಮುಖ್ಯ ಪಡೆಯಲಿಲ್ಲ. ವಿಶೇಷವಾಗಿ ರಾಷ್ಟ್ರವಾದಿ ಮತ್ತು ಉದಾರವಾದಿ ಚಿಂತಕರಲ್ಲಿ ಈ ಕೊರತೆ ಕಾಣಬಹುದು. ಬಾಲಗಂಗಾಧರ ತಿಲಕರಿಗೆ ಸ್ವಾತಂತ್ರ್ಯವೆಂದರೆ ಬಹುಮುಖ್ಯವಾಗಿ ವಸಾಹತುಶಾಹಿ ಆಳ್ವಿಕೆಯಿಂದ ವಿಮೋಚನೆ ಎಂಬುದಾಗಿತ್ತು. ದಾದಾಭಾಯಿ ನವರೋಜಿ, ಗೋಪಾಲಕೃಷ್ಣ ಗೋಖಲೆ, ಮಹಾದೇವ ಗೋವಿಂದ ರಾನಡೆರವರಿಗೆ ರಾಜಕೀಯ ಸ್ವಾತಂತ್ರ್ಯ ಬಹಳ ಮುಖ್ಯವಾಯಿತು. ಮೋಹನದಾಸ ಗಾಂಧಿಯವರು ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯದ ಬಗ್ಗೆ ಕಳಕಳಿ ತೋರಿದರೂ ಅವರ ವಿಚಾರ ಮತ್ತು ಪ್ರಯೋಗಗಳಲ್ಲಿ ಸಮಗ್ರತೆ ಕಾಣುವದಿಲ್ಲ ಎಂದು ಹೇಳಲು ಕೆಲವು ಉದಾಹರಣೆಗಳುಂಟು. ಸಮಾಜವಾದಿ ಚಿಂತಕರು ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ಬಹಳಷ್ಟು ಚಿಂತಿಸಿದರು. ಬಹುಜನ-ದಲಿತ ಚಿಂತಕರು ಸಾಮಾಜಿಕ ಸ್ವಾತಂತ್ರ್ಯದ ವಿಷಯವನ್ನು ಪರಿಗಣನೆಗೆ ತೆಗೆದುಕೊಂಡು ಅದಕ್ಕೆ ತಾತ್ವಿಕ ಮತ್ತು ಪ್ರಾಯೋಗಿಕ ಅಡಿಪಾಯವನ್ನು ಹಾಕಿದರು. ಈ ಪ್ರಬಂಧದಲ್ಲಿ, ಸ್ವಾತಂತ್ರ್ಯದ ಸಾಮಾಜಿಕ ಮತ್ತು ಆರ್ಥಿಕ ಮಗ್ಗಲುಗಳ ಬಗ್ಗೆ ವಿವಿಧ ಚಿಂತಕರು ಯಾವ ರೀತಿ ಪ್ರತಿಕ್ರಿಯಿಸಿದರು ಎಂಬುವದನ್ನು ವಿವರಿಸುವ ಪ್ರಯತ್ನ ಮಾಡಲಾಗಿದೆ.

ಆಕ್ಸ್‌ಫರ್ಡ್ ಶಬ್ದಕೋಶದ ಪ್ರಕಾರ, ಸ್ವಾತಂತ್ರ್ಯ ಎಂದರೆ ಗುಲಾಮನಂತಿರದ ಅಥವಾ ಬಂಧಿತನಾಗಿರದ ಪರಿಸ್ಥಿತಿ ಮತ್ತು ಕಾರ್ಯೋನ್ಮುಖನಾಗಲು ಪಡೆದುಕೊಂಡಿರುವ ಸಾಮರ್ಥ್ಯ. ಸ್ವಾತಂತ್ರ್ಯದ ಕುರಿತು ಇತ್ತೀಚಿನ ಸೈದ್ಧಾಂತಿಕ ವಿಚಾರಗಳನ್ನು ಗಮನಿಸಿದಾಗ ಬಹು ಮಹತ್ವಪೂರ್ಣವಾದ ವಿಚಾರಗಳನ್ನು ಮಂಡಿಸಿದವರು ಅಮರ್ತ್ಯ ಸೇನರು ಎಂದು ಗೊತ್ತಾಗುತ್ತದೆ. ಭಿನ್ನ ಪ್ರಕಾರದ ಸ್ವಾತಂತ್ರ್ಯಗಳನ್ನು ಒಂದಕ್ಕೊಂದು ಜೋಡಿಸುವ ಪ್ರಾಯೋಗಿಕ ಸಂಬಂಧವನ್ನು ಸೇನರು ತೋರಿಸಿದ್ದಾರೆ. ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯ ರಾಜಕೀಯ ಸ್ವಾತಂತ್ರ್ಯವನ್ನು ಅರ್ಥಪೂರ್ಣವಾಗಿ ಅನುಭವಿಸಲು ಎಡೆಮಾಡಿಕೊಡುತ್ತದೆ. ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯವಿರದಿದ್ದರೆ ವ್ಯಕ್ತಿಯು ರಾಜಕೀಯ ಸ್ವಾತಂತ್ರ್ಯವನ್ನು ಸಂಪೂರ್ಣ ಮಟ್ಟಿಗೆ ಅನುಭವಿಸುವದಿಲ್ಲ. ಒಂದು ಸಮಾಜದ ಸ್ವಾತಂತ್ರ್ಯದ ಮಟ್ಟ ಸಮಗ್ರವಾಗಿದೆ ಎಂದು ಹೇಳಬೇಕಾದರೆ, ಆ ಸಮಾಜದ ವಿವಿಧ ಸಾಮಾಜಿಕ ಪಂಗಡಗಳಾದ ಧರ್ಮ, ಜಾತಿ, ವರ್ಗ, ಬುಡಕಟ್ಟುಗಳ ಜನರು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ

**ದೀನದಲಿತರಿಗಾಗಿ ಸಾಮಾಜಿಕ ಸ್ವಾತಂತ್ರ್ಯದ ವಿಷಯ ಬಂದಾಗ ರಾಷ್ಟ್ರವಾದದ ನೆಪ ತೆಗೆಯುವದು, ಲಿಂಗ ಸ್ವಾತಂತ್ರ್ಯದ ವಿಷಯ ಬಂದಾಗ ಭಾರತ ಮಾತೆಯೆಂಬ ಕಲ್ಪನೆ ತಂದು ಮಹಿಳೆಯರ ನೈಜ ಸ್ವಾತಂತ್ರ್ಯವನ್ನು ಬದಿಗಿಡುವುದು, ಆರ್ಥಿಕ ಸ್ವಾತಂತ್ರ್ಯದ ಆಶಯ ಬಂದಾಗ ದೇಶದ ಅಭಿವೃದ್ಧಿಯ ಬಗೆಗೆ ಮಾತನಾಡಿ ಸಮಾನತೆಯನ್ನು ಮುಚ್ಚಿಹಾಕುವದು ಇಂದಿನ ರಾಷ್ಟ್ರವಾದಿ ಮತ್ತು ಉದಾರವಾದಿ ರಾಜಕೀಯ ಶಕ್ತಿ ಮತ್ತು ಧುರೀಣರ ರೂಢಿಯಾಗಿದೆ.**

ಸ್ವಾತಂತ್ರ್ಯದ ಅರ್ಥಪೂರ್ಣ ಅನುಭವವನ್ನು ಹೊಂದಿದವರಾಗಿರಬೇಕು. ಅದಲ್ಲದೆ, ಈ ಎಲ್ಲ ಪಂಗಡಗಳಲ್ಲಿ ಪುರುಷ ಮತ್ತು ಮಹಿಳೆಯರಿಗೆ ಸಮಾನ ಸ್ವಾತಂತ್ರ್ಯವಿರಬೇಕು. ಇಲ್ಲದಿದ್ದರೆ ಆ ಸಮಾಜವನ್ನು ಸ್ವತಂತ್ರ ಸಮಾಜವೆಂದು ಕರೆಯಲಾಗುವುದಿಲ್ಲ. ಯಾವುದೇ ಸಮಾಜದಲ್ಲಿ ಸಮಗ್ರ ಸ್ವಾತಂತ್ರ್ಯವಿರದಿದ್ದರೆ ಅಲ್ಲಿನ ಬುದ್ಧಿಜೀವಿಗಳು ತಮ್ಮ ಚಿಂತನೆ ಮತ್ತು ಚಳವಳಿಗಳಿಂದ ಈ ಎಲ್ಲ ಪಂಗಡಗಳ ಜನರಿಗೆ (ಹೆಣ್ಣು ಮತ್ತು ಗಂಡು) ಸ್ವಾತಂತ್ರ್ಯದ ಅರ್ಥವನ್ನು ತಿಳಿಸಿ ಅವರೆಲ್ಲರನ್ನು ಸಬಲೀಕರಿಸಬೇಕು. ಇಂತಹ ಕೆಲಸ ಯಾವುದೇ ಸಮಾಜದ ಭೂತ ಮತ್ತು ಪ್ರಚಲಿತದಲ್ಲಿ ಯಾವ ರೀತಿ ನಡೆದಿದೆ ಮತ್ತು ನಡೆಯುತ್ತಿದೆ ಎಂದು ತಿಳಿದುಕೊಳ್ಳುವದು ಅರ್ಥಪೂರ್ಣ ಭವಿಷ್ಯವನ್ನು ಕಟ್ಟಲು ಅವಶ್ಯಕ.

**ಸಾಮಾಜಿಕ ಸ್ವಾತಂತ್ರ್ಯ :** ಭಾರತದ ಸಾಮಾಜಿಕ ಪಂಗಡಗಳಲ್ಲಿ ಜಾತಿಯು ಸಾಮಾಜಿಕ ತುಳಿತಕ್ಕೆ ಎಡೆಮಾಡಿಕೊಡುವ ಒಂದು ಸಾಮಾಜಿಕ ಪಂಗಡವಾಗಿದೆ. ಮೊದಲು ವರ್ಣ, ನಂತರ ಜಾತಿಯಿಂದ ಭಾರತೀಯ ಸಮಾಜದಲ್ಲಿ ಅನೇಕ ಅನಿಷ್ಟ ಪದ್ಧತಿಗಳು ಮತ್ತು ತಾರತಮ್ಯಗಳು ನಡೆಯುತ್ತಾ ಬಂದಿವೆ. ಇದರ ವಿರುದ್ಧ ಹೋರಾಟ ಬುದ್ಧನ ಕಾಲದಿಂದ ನಡೆದರೂ ಸಮಾಜದಲ್ಲಿ ಸಮಾನತೆಯ ಪ್ರಯೋಗ ಗಣನೀಯ ಮಟ್ಟದಲ್ಲಿ ಯಶಸ್ವಿಯಾಗಲಿಲ್ಲ. ಮುಂದೆ ೧೮ನೇ ಶತಮಾನದಲ್ಲಿ ಯುರೋಪಿನ ವಿಚಾರ ಮತ್ತು ಆಚರಣೆಗಳಿಂದ ಭಾರತೀಯ ಬುದ್ಧಿಜೀವಿಗಳು ಪ್ರಭಾವಿತರಾಗಿ ಸಮಾಜದಲ್ಲಿ ಬದಲಾವಣೆಯನ್ನು ತರಲು ಪ್ರಯತ್ನ ಮಾಡಿದರು. ಯುರೋಪಿನ ವೈಚಾರಿಕ ಗ್ರಂಥಗಳು ಮತ್ತು ವಿಚಾರಗಳು, ಭಾರತೀಯ ಸಮಾಜದಲ್ಲಿರುವ ಜಾತಿಪದ್ಧತಿಗೆ ಸಂಬಂಧಿತ ಅಸಮಾನತೆ, ದಬ್ಬಾಳಿಕೆ, ಕಟ್ಟೆ-ಉಪಚಾರಗಳನ್ನು ಪ್ರಶ್ನಿಸುವಂತಹ ಸಾಮರ್ಥ್ಯಕ್ಕೆ ಸ್ಫೂರ್ತಿಗಳಾದವು. ಇಂತಹ ವಿಚಾರಗಳಿಂದ ಪ್ರಭಾವಿತರಾಗಿ, ಸಮಾಜದ ಕೆಳಸ್ತರಗಳಲ್ಲಿರುವ ದಲಿತ-ಬಹುಜನರಿಗೆ ಸಮಾನತೆ, ಗೌರವ, ಘನತೆ ದೊರಕುವ ನಿಟ್ಟಿನಲ್ಲಿ ಕಾರ್ಯೋನ್ಮುಖರಾದವರಲ್ಲಿ ಜ್ಯೋತಿಬಾ ಫುಲೆರವರು ಬಹು ಪ್ರಮುಖರು. ಸಾಮಾಜಿಕವಾಗಿ ತುಳಿತಕ್ಕೆ ಒಳಪಟ್ಟ ಸಮುದಾಯಗಳು ಸಬಲವಾಗಲು ಶಿಕ್ಷಣ ಬಹುಮುಖ್ಯವಾದುದು ಎಂದು ಅರಿತುಕೊಂಡು ಈ ಸಮುದಾಯದ ಜನರಿಗೆ ಶಿಕ್ಷಣವನ್ನು ಒದಗಿಸುವಲ್ಲಿ ಫುಲೆರವರು ಕ್ರಿಯಾಶೀಲರಾದರು. ತಾವು ಸ್ಥಾಪಿಸಿದ ಸಂಸ್ಥೆಯಾದ 'ಸತ್ಯಶೋಧಕ ಸಮಾಜ'ದ ಮುಖಾಂತರ ದಲಿತ-ಬಹುಜನರನ್ನು ಸಜ್ಜುಗೊಳಿಸಿದರು ಮತ್ತು ಒಗ್ಗೂಡಿಸಿದರು. ಇವರಿಗಾಗಿ, ಆಡಳಿತಾತ್ಮಕ ಮತ್ತು ರಾಜಕೀಯ ಅಧಿಕಾರವನ್ನು ಕೇಳುವದಲ್ಲದೆ, ಆಡಳಿತವು ಕೃಷಿಕ ವರ್ಗದ ಜನರ ಸಮಸ್ಯೆಗಳಿಗೆ ಗಮನ ಹರಿಸುವಂತೆ ಒತ್ತಾಯಿಸಿದರು. ಜಾತಿವ್ಯವಸ್ಥೆಯ ಕಠಿಣತೆಯನ್ನು ಮುರಿಯುವ ನಿಟ್ಟಿನಲ್ಲಿ, ವ್ಯಾಪಾರ ಮತ್ತು ತಾಂತ್ರಿಕ ಕ್ಷೇತ್ರಗಳಿಗೆ

### ಅಭಿನಂದನೆ...

ಕರ್ನಾಟಕ ಸಂಘ ಶಿವಮೊಗ್ಗ ನೀಡುವ ೨೦೧೭ನೇ ಸಾಲಿನ ವಾರ್ಷಿಕ ಪ್ರಶಸ್ತಿಗಳಲ್ಲಿ ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ ಕೃತಿಗಳಾದ ಡಾ॥ ಎಚ್. ಗಿರಿಜಮ್ಮನವರ 'ಸ್ತ್ರೀದೇಹ' ಕೃತಿಗೆ, 'ಡಾ॥ ಎಚ್. ಡಿ. ಚಂದ್ರಪ್ಪಗೌಡ ವೈದ್ಯ ಸಾಹಿತ್ಯ' ಪ್ರಶಸ್ತಿ ಹಾಗೂ ಶ್ರೀಮತಿ ಸರೋಜಾ ಪ್ರಕಾಶ ಅವರ 'ಬಾನಲ್ಲಿ ಗ್ರಹಗಣತಿ' ಕೃತಿಗೆ 'ಹಸೂಡಿ ವೆಂಕಟಶಾಸ್ತ್ರಿ ವಿಜ್ಞಾನ ಸಾಹಿತ್ಯ' ಪ್ರಶಸ್ತಿ ಲಭಿಸಿದೆ. ಕೃತಿಯ ಲೇಖಕರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಕಸಬುಗಳ ಮಾರ್ಪಾಡು ಮಾಡುವ ಬೇಡಿಕೆಯನ್ನು ಫುಲೆರವರು ಮಂಡಿಸಿದರು. ಫುಲೆರವರ ಈ ಕೊಡುಗೆಯನ್ನು ಜಿ. ಅಲಾಯಸಿಯಸ್‌ರವರು ತಮ್ಮ ಕೃತಿಯಾದ 'ಭಾರತದಲ್ಲಿನ ರಾಷ್ಟ್ರವಿಲ್ಲದ ರಾಷ್ಟ್ರವಾದ' ಎಂಬ ಕೃತಿಯಲ್ಲಿ ತಿಳಿಸಿರುತ್ತಾರೆ. ಫುಲೆರವರು ತಮ್ಮ ಸೇವೆಯನ್ನು ದಲಿತ-ಬಹುಜನರಿಗಾಗಿ ಸಮರ್ಪಿಸಿದ ಕಾಲದಲ್ಲಿ ಆವತ್ತಿನ ರಾಷ್ಟ್ರವಾದಿ ಧುರೀಣರು ಅವರಿಗೆ ಸರಿಯಾದ ಪ್ರತಿಕ್ರಿಯೆಯನ್ನು ತೋರಿಸಲಿಲ್ಲ. 'ಸ್ವರಾಜ್ಯವೇ ನನ್ನ ಜನ್ಮಸಿದ್ಧ ಹಕ್ಕು' ಎಂದು ಘೋಷಿಸಿದ ಬಾಲಗಂಗಾಧರ ತಿಲಕರವರಿಗೆ ರಾಜಕೀಯ ಸ್ವಾತಂತ್ರ್ಯ ಬಹುಮುಖ್ಯವಾದಾಗ, ಫುಲೆರವರಿಗೆ ಸಾಮಾಜಿಕ ಸ್ವಾತಂತ್ರ್ಯ ಮುಖ್ಯವಾಗಿತ್ತು. ಧರ್ಮ ಗ್ರಂಥ ಮತ್ತು ತತ್ವಗಳ ಆಧಾರದ ಮೇಲೆ ರಾಷ್ಟ್ರವಾದವನ್ನು ಸಾರುತ್ತಾ ಹಲವು ರಾಷ್ಟ್ರವಾದಿಗಳು ರಾಜಕೀಯ ಸ್ವಾತಂತ್ರ್ಯವನ್ನು ಕೇಳಲು ಆಸಕ್ತರಾದಾಗ ಫುಲೆರವರು ಧರ್ಮಕ್ಕೆ ಸಂಬಂಧಿಸಿದ ಸಾಹಿತ್ಯವನ್ನು ಅಧ್ಯಯನ ಮಾಡಿ ಅವುಗಳು ನಮ್ಮ ಸಮಾಜದಲ್ಲಿ ಯಾವ ರೀತಿ ಗುಲಾಮಗಿರಿಯ ಬೆಳವಣಿಗೆಗೆ ಕಾರಣವಾಗಿವೆ ಎಂದು ನೇರವಾಗಿ ತಮ್ಮ ಗ್ರಂಥವಾದ ಗುಲಾಮಗಿರಿ ಮುಖಾಂತರ ಹೇಳಿದರು. ಅವರು ಈ ಬೌದ್ಧಿಕ ಕೆಲಸವನ್ನು ದಲಿತ-ಬಹುಜನ ಸಮಾಜದಲ್ಲಿ ಸ್ವಾತಂತ್ರ್ಯದ ಅರಿವು ಮೂಡಿಸಲು ಮಾಡಿದರು. ಈ ರೀತಿ ಫುಲೆರವರು ಸಾಮಾಜಿಕವಾಗಿ ತುಳಿತಕ್ಕೆ ಒಳಪಟ್ಟ ಸಮುದಾಯಗಳಿಗೆ ಸಾಮಾಜಿಕ ಸ್ವಾತಂತ್ರ್ಯದ ಅರಿವುಮಾಡಿಕೊಡುವ ಕಾರ್ಯದಲ್ಲಿ ತಮ್ಮದೇ ಆದ ಪಾತ್ರವನ್ನು ವಹಿಸಿದರು.

ಸಾಮಾಜಿಕ ತುಳಿತಕ್ಕೆ ಒಳಪಟ್ಟ ಸಮುದಾಯಗಳ ಸ್ವಾತಂತ್ರ್ಯಕ್ಕಾಗಿ ಪ್ರಯತ್ನಿಸಿದ ಮತ್ತೋರ್ವ ಚಿಂತಕರೆಂದರೆ ಬಿ. ಆರ್. ಅಂಬೇಡ್ಕರರವರು. ಇವರ ಹೋರಾಟ ಮುಖ್ಯವಾಗಿ ಜಾತಿಗೆ ಸಂಬಂಧಿತ ಪಕ್ಷಪಾತಗಳ ವಿರೋಧಿಯಾಗಿತ್ತು. ಅಂಬೇಡ್ಕರರ ಸಾಮಾಜಿಕ ಚಿಂತನೆಯು ಮೂಲವಾಗಿ ಭಾರತೀಯ ಸಮಾಜದ ಜಾತಿಪದ್ಧತಿಯ ಚಟುವಟಿಕೆಯನ್ನು ತಿಳಿದುಕೊಳ್ಳುವುದರ ಮತ್ತು ಅಸ್ಪೃಶ್ಯತೆ ವಿರೋಧಿ ಹೋರಾಟದ ಸುತ್ತಮುತ್ತ ಕೇಂದ್ರೀಕೃತವಾಗಿತ್ತು. ತಮ್ಮ ಚಿಂತನೆ ಮತ್ತು ಪ್ರಯೋಗಗಳಿಂದ ಅಂಬೇಡ್ಕರರವರು ಹೋರಾಟ ಮಾಡುವ ಸಮಯದಲ್ಲಿ ಅವರಿಗೆ ಸಕಾರಾತ್ಮಕ ಪ್ರತಿಕ್ರಿಯೆ ಸಿಗಲಿಲ್ಲ. ಮೋಹನದಾಸ ಗಾಂಧಿಯವರಿಗೆ ಸಾಮಾಜಿಕವಾಗಿ ತುಳಿತಕ್ಕೆ ಒಳಪಟ್ಟ ಜನರ ಬಗ್ಗೆ ಕಳಕಳಿಯಿದ್ದರೂ ಅವರ ಮಾರ್ಗ ಅಂಬೇಡ್ಕರರವರ ಮಾರ್ಗದಿಂದ ಭಿನ್ನವಾಗಿತ್ತು. ಅವರಿಬ್ಬರ ಮಾರ್ಗದಲ್ಲಿ ಸಾಮೀಪ್ಯ ಕಾಣಲಿಲ್ಲ. ಅಸ್ಪೃಶ್ಯತನದ ಸಮಸ್ಯೆ ಬಗ್ಗೆ ಗಾಂಧಿಯವರು ಭಿನ್ನವಾದ ವಿಚಾರ ಮತ್ತು ಮಾರ್ಗವನ್ನು ಹೊಂದಿದ್ದರು. ಗಾಂಧಿಯವರು ಅಸ್ಪೃಶ್ಯತೆಯನ್ನು ಖಂಡಿಸಿದರಲ್ಲದೆ ಕಸಬು ಮತ್ತು ಸಾಮಾಜಿಕ ಅಂತಸ್ತಿನ ಮಧ್ಯೆ ಯಾವುದೇ ಸಂಬಂಧವಿಲ್ಲವೆಂದು ಹೇಳಿದರು. ಅಸ್ಪೃಶ್ಯತೆಯನ್ನು ಸಮಾಜದ ಮೇಲುಸ್ತರದ ಜಾತಿಗಳ ಜನರ ಅನುಕಂಪ ಭಾವನೆಯಿಂದ ಮಾತ್ರ ತೊಲಗಿಸಬಹುದು ಎಂಬುದು ಗಾಂಧಿಯವರ ನಂಬುಗೆಯಾಗಿತ್ತು. ಈ ಅಂಶವನ್ನು ಎಲೆನೋರ ಜೆಲ್ಲಿಓಟರವರು, ಥಾಮಸ್ ಪಂಥಮ್ ಮತ್ತು ಕೆನೆಥ ಡ್ಯುಸಚ್‌ರವರು ಸಂಪಾದಿಸಿದ ಪುಸ್ತಕವಾದ ಆಧುನಿಕ ಭಾರತದಲ್ಲಿ ರಾಜಕೀಯ ಚಿಂತನೆಯಲ್ಲಿ ತಾವು ಬರೆದ ಒಂದು ಅಧ್ಯಾಯದಲ್ಲಿ ತಿಳಿಸುತ್ತಾರೆ. ಸಾಮಾಜಿಕವಾಗಿ ತುಳಿತಕ್ಕೆ ಒಳಪಟ್ಟ ಜನರ ವಿಮೋಚನೆಯನ್ನು ಗಾಂಧಿಯವರು ಹಿಂದು ಧರ್ಮದ ಚೌಕಟ್ಟಿನಲ್ಲಿಯೇ ಆಗಬೇಕೆಂದು ವಾದಿಸಿದರು. ಆದರೆ, ಅಂಬೇಡ್ಕರರವರು, ದಲಿತರು ಹಿಂದು ಧರ್ಮದಿಂದಲೇ ವಿಮೋಚನೆಯಾಗಬೇಕೆಂದು ಪ್ರತಿಪಾದಿಸಿದರು. ಗಾಂಧಿಯವರು ಅಸ್ಪೃಶ್ಯತೆಯ ನಿರ್ಮೂಲನೆ ಜನರ ಸ್ವಜ್ಞಾನೋದಯದಿಂದ ಆಗಬೇಕೆಂದು ಬಯಸಿದ್ದರು (ಈ ಅಂಶವನ್ನು ವಿದ್ಯುತ್ ಚಕ್ರಬರ್ತಿ ಮತ್ತು ರಾಜೇಂದ್ರಕುಮಾರ ಪಾಂಡೆರವರು ಬರೆದ ಕೃತಿಯಾದ ಆಧುನಿಕ ಭಾರತದ ರಾಜಕೀಯ ಚಿಂತನೆಯಲ್ಲಿ ನೋಡಬಹುದು). ಅಂಬೇಡ್ಕರರವರು ಇಂತಹ ಮಾರ್ಗ ಮತ್ತು ನಂಬುಗೆಗಳನ್ನು ಹೊಂದಿರಲಿಲ್ಲ. ಕಾನೂನಾತ್ಮಕ ಉಪಾಯ ಮತ್ತು ಹಕ್ಕುಗಳ ಖಾತ್ರಿಯಿಂದ ಅಸ್ಪೃಶ್ಯತೆಯನ್ನು ಎದುರಿಸಬಹುದು ಎಂಬುದು ಅಂಬೇಡ್ಕರರವರ ನಂಬುಗೆಯಾಗಿತ್ತು.

ಫುಲೆ, ಅಂಬೇಡ್ಕರರವರಲ್ಲದೆ ದೇಶದ ಹಲವು ಪ್ರಾಂತ್ಯಗಳಲ್ಲಿ ಸ್ಥಳೀಯ ಚಿಂತಕರು ಮತ್ತು ಹೋರಾಟಗಾರರು ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ಇವರಿಗೆಲ್ಲಾ ಕೇವಲ ರಾಜಕೀಯ ಸ್ವಾತಂತ್ರ್ಯ ಮುಖ್ಯವಾಗಿರದೆ ಸಾಮಾಜಿಕ ಸ್ವಾತಂತ್ರ್ಯ ಬಹು ಮುಖ್ಯವಾಗಿತ್ತು. ತಮಿಳು ಪ್ರಾಂತ್ಯದಲ್ಲಿ ಪೆರಿಯಾರ್ ಮತ್ತು ಇಯೋಥಿದಾಸ, ಮಲಯಾಳಂ ಪ್ರಾಂತ್ಯದಲ್ಲಿ ಅಯ್ಯಂಕಾಳಿ ಮತ್ತು ನಾರಾಯಣ ಗುರು, ತೆಲುಗು ಪ್ರಾಂತ್ಯದಲ್ಲಿ ಪೂಟ್ಟುಲುರಿ ವೀರಬ್ರಹ್ಮನ್‌ರವರು ಸಾಮಾಜಿಕ ತುಳಿತಕ್ಕೆ ಒಳಪಟ್ಟ ಸಮುದಾಯಗಳಿಗೆ ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ಹೋರಾಡಿದರು. ಈ ಎಲ್ಲ ಸಾಮಾಜಿಕ



ಬದಲಾವಣೆಯ ರೂವಾರಿಗಳು ತಮ್ಮ ಸಮಾಜದಲ್ಲಿರುವ ಯಥಾಸ್ಥಿತಿಯನ್ನು ಪ್ರಶ್ನಿಸಿದರು ಮತ್ತು ಬದಲಾಯಿಸಲು ಪ್ರಯತ್ನಿಸಿದರು.

ಸಾಮಾನ್ಯವಾಗಿ ರಾಷ್ಟ್ರವಾದಿ ಚಿಂತಕರಿಗೆ ಕೇವಲ ಪ್ರಜಾಪ್ರಭುತ್ವ, ಸ್ವರಾಜ್ಯ, ಸ್ಥಳೀಯ ಆಡಳಿತ ಆಕರ್ಷಿತವಾಗಿದ್ದವು. ಈ ವಿಚಾರಗಳು ದಲಿತ–ಬಹುಜನ ಚಿಂತಕರಿಗೆ ಅಷ್ಟೊಂದು ಇಷ್ಟವಾಗಲಿಲ್ಲ. ಏಕೆಂದರೆ ಈ ಪರಿಕಲ್ಪನೆಗಳು ಬೇರೆ ವಿಚಾರಗಳನ್ನು ತುಳಿಯುವಂತಹ ಉಪಕರಣಗಳಾಗಿದ್ದವು. ಈ ವಿಷಯದ ಕುರಿತು ರಾಜಕೀಯ ಶಾಸ್ತ್ರಜ್ಞರಾದ ಗೋಪಾಲ ಗುರುರವರು ಸ್ಪಷ್ಟಪಡಿಸಿದ್ದಾರೆ. ರಾಷ್ಟ್ರವಾದಿ ಚಿಂತಕರು ಉತ್ಪಾದಿಸಿದ ಪರಿಕಲ್ಪನೆಗಳಾದ ಪ್ರಜಾಪ್ರಭುತ್ವ , ಸ್ವರಾಜ್ಯ, ಮತ್ತು ರಾಜಕೀಯ ಸ್ವಾತಂತ್ರ್ಯವು, ಅವುಗಳ ಭಾರದ ಕೆಳಗೆ, ಅಸ್ಪೃಶ್ಯರ ಸಾರ್ವತ್ರಿಕ ಹೆಬ್ಬಯಕೆಗಳನ್ನು ಜೀವಂತವಿಡುವ ಬೇರೆ ಪರಿಕಲ್ಪನೆಗಳಾದ ಸ್ವಾಭಿಮಾನ ಅಥವಾ ಘನತೆಗಳನ್ನು ತುಳಿಯುವಂಥವಾಗಿದ್ದವು ಎಂದು ಗೋಪಾಲ ಗುರುರವರು ತಿಳಿಸುತ್ತಾರೆ. ದಲಿತ–ಬಹುಜನ ಚಿಂತಕರು ಇತರ ಪರಿಕಲ್ಪನೆಗಳಾದ ಸ್ವಾಭಿಮಾನ ಅಥವಾ ಘನತೆಗಳನ್ನು ಪ್ರಕಾಶಿಸುವ ಪ್ರಯತ್ನವನ್ನು ಪ್ರಜ್ಞಾಪೂರ್ವಕವಾಗಿ ಮಾಡಿದರು. ಗೋಪಾಲ ಗುರುರವರು ಹೇಳಿದಂತೆ ರಾಷ್ಟ್ರವಾದಿ ಚಿಂತನೆಯು ದಲಿತ ಪ್ರಶ್ನೆಯನ್ನು ಸಮಾಧಿ ಮಾಡಲು ಕಠಿಣವಾಗಿ ಪ್ರಯತ್ನಿಸಿತು. ಆದರೆ ತನ್ನ ಪ್ರಯತ್ನದಲ್ಲಿ ವಿಫಲವಾಯಿತು. ಏಕೆಂದರೆ, ದಲಿತ–ಬಹುಜನ ಚಿಂತಕರು ಈ ರೀತಿ ಆಗಲಿಕ್ಕೆ ಬಿಡಲಿಲ್ಲ. ಇಂತಹ ಸಮಯದಲ್ಲಿ, ದಲಿತ–ಬಹುಜನ ಚಿಂತಕರು ಈ ಸಾಮಾಜಿಕ ಪ್ರಶ್ನೆಯನ್ನು ಸಾರ್ವಜನಿಕ ಚರ್ಚೆಯಲ್ಲಿ ಅದು ತಲುಪಿರುವ ಆಳದಿಂದ ಎಳೆದು ತಂದರು.

ಸಾಮಾಜಿಕ ಸ್ವಾತಂತ್ರ್ಯದ ಕುರಿತು ಸೈದ್ಧಾಂತಿಕವಾಗಿ ಮತ್ತು ಪ್ರಾಯೋಗಿಕವಾಗಿ ತೊಡಗಿಕೊಂಡ ಭಾರತೀಯ ಸ್ಥಳಿಕ ಸಮಾಜವಾದಿಗಳಲ್ಲಿ ರಾಮಮನೋಹರ ಲೋಹಿಯಾರವರ ಪ್ರಯತ್ನವನ್ನು ಹೆಚ್ಚಾಗಿ ಗುರುತಿಸಲಾಗುತ್ತದೆ. ಲಿಂಗಭೇದ ಮತ್ತು ಶ್ರೇಣೀಕೃತ ಜಾತಿಪದ್ಧತಿ ವಿರುದ್ಧ ಜಂಟಿ ಹೋರಾಟ ಭಾರತದ ಸಾಮಾಜಿಕ ಮತ್ತು ಆರ್ಥಿಕ ಪರಿವರ್ತನೆಯಲ್ಲಿ ಮೊದಲ ಹೆಜ್ಜೆ ಎಂದು ಲೋಹಿಯಾರವರು ತಿಳಿದುಕೊಂಡಿದ್ದರು ಎಂದು ರಾಜಾರಾಮ ತೋಲ್ಪಾಡಿಯವರು ತಮ್ಮ ಒಂದು ಸಂಶೋಧನಾ ಲೇಖನದಲ್ಲಿ ವಿವರಿಸುತ್ತಾರೆ. ಒಂದು ವಿಚಾರಶಾಸ್ತ್ರದಂತೆ ಜಾತಿಪದ್ಧತಿಯು ಎಲ್ಲವನ್ನು ಸುತ್ತುಗಟ್ಟುವದಾಗಿದೆ ಎಂದು ಲೋಹಿಯಾರವರು ಹೇಳಿರುವ ಮಾತನ್ನು ರಾಜಾರಾಮ ತೋಲ್ಪಾಡಿರವರು ತಿಳಿಸುತ್ತಾರೆ. ಜಾತಿಪದ್ಧತಿ ವಿರೋಧಿ ಹೋರಾಟದ ನಿಟ್ಟಿನಲ್ಲಿ ಲೋಹಿಯಾರವರು ಸಾಂಸ್ಥಿಕ ಪ್ರಯತ್ನ ಮಾಡಿರುವ ಫಲವಾಗಿ 'ಜಾತಿ ವಿನಾಶ' ಸಂಘವೆಂಬ ಸಂಸ್ಥೆ ಕಾರ್ಯಾಚರಣೆಗೆ ಬಂದಿತು. ಈ ಸಂಸ್ಥೆಯು ಜಾತಿಗೆ ಸಂಬಂಧಿಸಿದ ಯಾವುದೇ ಮಹತ್ವತೆಯನ್ನು ವಿರೋಧಿಸುವಲ್ಲಿ ಜನರಿಗೆ ಸ್ಫೂರ್ತಿಯಾಗಿತ್ತು. ಜಾತಿ ವಿಷಯದ ಕುರಿತು ಲೋಹಿಯಾರಿಗೆ ಇದ್ದ ಸ್ಪಷ್ಟ ತಿಳುವಳಿಕೆ ಏನೆಂದರೆ, ಜಾತಿ ವಿನಾಶ ಕೇವಲ ಒಂದೇ ದಿಶೆಯಿಂದ ಆಗುವುದಿಲ್ಲ, ಅದನ್ನು ವಿನಾಶ ಮಾಡಲು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಧಾರ್ಮಿಕ, ತಾತ್ವಿಕ ಮತ್ತು ರಾಜಕೀಯ ದಿಶೆಯಿಂದ ಆಕ್ರಮಣ ಮಾಡಬೇಕಾಗುತ್ತದೆ ಎಂದು. (ಈ ತಿಳುವಳಿಕೆಯನ್ನು ಕೇಶವರಾವ ಜಾಧವರವರು, 'ಆರ್ಥಿಕ ಮತ್ತು ರಾಜಕೀಯ ಸಾಪ್ತಾಹಿಕ'ದಲ್ಲಿ ಪ್ರಕಟಿಸಿದ ತಮ್ಮ ಸಂಶೋಧನಾ ಲೇಖನದಲ್ಲಿ ವಿವರಿಸುತ್ತಾರೆ) ಈ ರೀತಿ ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ಲೋಹಿಯಾರವರು ಮಾಡಿದ ಚಿಂತನೆ ಮತ್ತು ಪ್ರಯತ್ನ ಜನರ ಗಮನ ಸೆಳೆಯಿತು ಮತ್ತು ಸ್ವಲ್ಪ ಮಟ್ಟಿಗೆ ಸಮಾಜದ ಮೇಲುಸ್ತರದ ಸಮುದಾಯಗಳ ಪ್ರಾಬಲ್ಯವನ್ನು ಕಡಿಮೆ ಮಾಡುವಲ್ಲಿ ಸಫಲವಾಯಿತು.

ಸಮಾಜದಲ್ಲಿ ಮಹಿಳೆಯರಿಗೆ ಸಮಾನ ಸ್ಥಾನಮಾನ ಸಾಮಾಜಿಕ ಸ್ವಾತಂತ್ರ್ಯದ ಇನ್ನೊಂದು ಮುಖ್ಯ ಅಂಶವಾಗಿದೆ. ಮಹಿಳೆಯರ ಸ್ಥಾನಮಾನ, ಗೌರವ ಮತ್ತು ಸಬಲೀಕರಣಕ್ಕಾಗಿ ತಾತ್ವಿಕ ಮತ್ತು ಪ್ರಾಯೋಗಿಕ ಹೋರಾಟ ಮಾಡಿದ ಆಧುನಿಕ ಭಾರತದ ಮಹಿಳೆಯರಲ್ಲಿ ಪಂಡಿತಾ ರಮಾಬಾಯಿಯವರು ಪ್ರಥಮರೆಂದು ಕರೆಯಲು ಎರಡು ಮಾತಿಲ್ಲ. ಅವರ ಹೋರಾಟದ ಪ್ರಯೋಗವನ್ನು ಸಾಮಾಜಿಕ ಸ್ವಾತಂತ್ರ್ಯದ ಹೋರಾಟವೆಂದು ಕರೆಯಬಹುದು. ರಮಾಬಾಯಿಯವರ ಜ್ಞಾನವನ್ನು ತಿಳಿದುಕೊಂಡು ಆಗಿನ ಬುದ್ಧಿವಂತರು ಅವರನ್ನು ಪಂಡಿತಾ ಎಂದು ಕರೆದರು. ಅಂದಿನಿಂದ ಅವರು ಪಂಡಿತಾ ರಮಾಬಾಯಿ ಎಂದು ಪರಿಚಯಗೊಂಡರು. ರಮಾಬಾಯಿಯವರ ಕಾಲದ ಸಮಾಜದಲ್ಲಿ ಸಾಮಾಜಿಕ ತುಳಿತಕ್ಕೆ ಒಳಪಟ್ಟ ಸಮುದಾಯಗಳ ಮಹಿಳೆಯರು ಹಲವು ತರಹದ ಸಮಸ್ಯೆಗಳನ್ನು ಎದುರಿಸುತ್ತಿದ್ದರೆ, ಮೇಲ್ಜಾತಿ ಕುಟುಂಬಗಳಲ್ಲಿನ ಮಹಿಳೆಯರು ಕೂಡಾ ಪುರುಷ ಪ್ರಧಾನ ವ್ಯವಸ್ಥೆಯಿಂದ ಹಲವಾರು ಸಮಸ್ಯೆಗಳಿಂದ ನೊಂದವರಾಗಿದ್ದರು. ಅವರು ಜಾತಿ ಶ್ರೇಷ್ಠತೆಯ ಪಂಜರದಲ್ಲಿದ್ದರೇ ಹೊರತು ಅವರಿಗೆ ಸ್ವಾತಂತ್ರ್ಯವಿರಲಿಲ್ಲ. ಬಾಲ್ಯ ವಿವಾಹ, ವರದಕ್ಷಿಣೆ, ಅನಕ್ಷರತೆ ಮತ್ತು ಬಾಲ್ಯದಲ್ಲಿಯೇ ವಿಧವಾ ಜೀವನ ಹೀಗೆ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದರು. ರಮಾಬಾಯಿಯವರು ಇದೇ ಸಮಾಜದವರಾಗಿದ್ದರಿಂದ ಅವರಿಗೆ ಅಲ್ಲಿರುವ ಮಹಿಳೆಯರ ಸಮಸ್ಯೆಗಳ ಬಗ್ಗೆ ಸಾಕಷ್ಟು ಅನುಭವವಿತ್ತು. ಈ ಸಮಾಜದ ಬಾಲಕಿಯರು ಮತ್ತು ಬಾಲ್ಯ ವಿಧವೆಯರಿಗಾಗಿ ಶಾಲೆ ಮತ್ತು ಆಶ್ರಯ ಧಾಮಗಳನ್ನು ತೆರೆದರು. ಈ ಕಾರ್ಯದಲ್ಲಿ ಅವರಿಗೆ ಸಮಾಜದ ಸಾಮಾನ್ಯರಿಂದ ಮತ್ತು ಧುರೀಣರಿಂದ ವಿರೋಧ ಬಂದಿತು. ಇಲ್ಲಿ ನಮಗೆ ತಿಳಿದುಕೊಳ್ಳುವ ಮುಖ್ಯ ವಿಷಯವೇನೆಂದರೆ, ಆವತ್ತಿನ ಕೆಲವು ರಾಷ್ಟ್ರವಾದಿ ಧುರೀಣ ಮತ್ತು ಚಿಂತಕರು ಕೂಡಾ ರಮಾಬಾಯಿಯವರ ಪ್ರಯತ್ನಕ್ಕೆ ಬೆಂಬಲ ತೋರಲಿಲ್ಲ.

ರಾಷ್ಟ್ರವಾದ ಚಿಂತನೆಯ ಚಿಲುಮೆಯೆನಿಸಿಕೊಂಡ ಬಾಲಗಂಗಾಧರ ತಿಲಕರವರು ರಮಾಬಾಯಿಯವರ ಸಾಮಾಜಿಕ ಸ್ವಾತಂತ್ರ್ಯದ ಹೋರಾಟವನ್ನು ವಿರೋಧಿಸಿದರು. (ತಿಲಕರ ರಾಷ್ಟ್ರವಾದದ ಕುರಿತು ಹೆಚ್ಚಿನ ವಿವರಣೆಗಾಗಿ ಪರಿಮಳಾ ರಾವರವರ ತಿಲಕರ ರಾಷ್ಟ್ರವಾದದ ಅಡಿಪಾಯಗಳು ಎಂಬ ಕೃತಿಯನ್ನು ನೋಡಬಹುದು) ತಿಲಕರು ರಮಾಬಾಯಿಯವರ ಪ್ರಾಮಾಣಿಕತೆ ಮತ್ತು ನಿಯತ್ತನ್ನು ಪ್ರಶ್ನಿಸಿದರು. ರಮಾಬಾಯಿಯವರು ಬಾಲ್ಯವಿವಾಹದ ಸಮಸ್ಯೆಯಿಂದ ಹೋರಾಡುತ್ತಿರುವ ರಖಂಬಾಯಿಯೆಂಬ ಮಹಿಳೆಗೆ ತಮ್ಮ ಬೆಂಬಲ ತೋರಿದರು. ರಖಂಬಾಯಿಯ ವಿವಾಹವು ಬಾಲ್ಯವಿವಾಹವಾಗಿತ್ತು. ಆಕೆ ಪ್ರಾಪ್ತ ವಯಸ್ಸಿಗೆ ಬಂದಾಗ ಅವಳ ಗಂಡನ ಜೊತೆ ಜೀವನ ಮಾಡಲು ಒಪ್ಪಲಿಲ್ಲ. ತನ್ನ ಒಪ್ಪಿಗೆ ಇಲ್ಲದೆ ಅಪ್ರಾಪ್ತ ವಯಸ್ಸಿನಲ್ಲಿ ಅವಳ ಮದುವೆಯಾಗಿರುವದರಿಂದ ಆಕೆಯನ್ನು ಗಂಡನ ಜೊತೆ ಬಾಳ್ವೆ ಮಾಡಲು ಒತ್ತಾಯ ಮಾಡಬಾರದು ಎಂದು ಆಕೆಯ ಕೋರಿಕೆಯಾಗಿತ್ತು. ಆದರೆ, ತಿಲಕರು ರಖಂಬಾಯಿಯ ಕೋರಿಕೆಯ ವಿರುದ್ಧವಾಗಿ ಬಂದ ನ್ಯಾಯಾಲಯದ ತೀರ್ಪನ್ನು ಸ್ವಾಗತಿಸಿದರು. ತಿಲಕರಿಗೆ, ಅವರ ಸಮಯದಲ್ಲಿ ನಡೆಯುತ್ತಿರುವ ಸಾಮಾಜಿಕ ಸುಧಾರಣೆ ಮತ್ತು ಬದಲಾವಣೆಗಳ ಪ್ರಯತ್ನಗಳು ಹಿಡಿಸಲಿಲ್ಲ. ಸಮಾಜ ಸುಧಾರಣಾ ಪ್ರಯತ್ನಗಳು ಹಿಂದೂಧರ್ಮ ಮತ್ತು ಅದರ ಸಂಸ್ಕೃತಿ ಬಗ್ಗೆ ಜನರಲ್ಲಿ ಕೀಳರಿಮೆ ಉಂಟುಮಾಡುತ್ತಿವೆ ಎಂಬುದು ತಿಲಕರ ಅಭಿಪ್ರಾಯವಾಗಿತ್ತು. ಸಮಾಜ ಸುಧಾರಕರು ಮತ್ತು ಬುದ್ಧಿವಂತರಲ್ಲಿರುವ ಕ್ರೈಸ್ತಧರ್ಮದ ಆಕರ್ಷಣೆ ಮತ್ತು ಬ್ರಾಹ್ಮಣ್ಯ ವಿರೋಧಿ ಟೀಕೆಗಳು ತಿಲಕರಿಗೆ ಹಿಡಿಸಲಿಲ್ಲ. (ಈ ಎಲ್ಲ ಅಂಶಗಳ ವಿವರಣೆಯನ್ನು ಆದಿ ಡಾಕ್ಟರರವರ ಕೃತಿಯಾದ ಆಧುನಿಕ ಭಾರತದ ರಾಜಕೀಯ ಚಿಂತಕರು ಕೃತಿಯಲ್ಲಿ ನೋಡಬಹುದು).

ಇವರಿಗೆ ಧರ್ಮ, ಜಾತಿಗಳು ಪ್ರಾಮುಖ್ಯವಾದವೇ ಹೊರತು ಸ್ವಾತಂತ್ರ್ಯದ ಉಸಿರಿನ ಸಾಮಾಜಿಕ ಬದಲಾವಣೆ ಪ್ರಾಮುಖ್ಯವಾಗಲಿಲ್ಲ.

ರಮಾಬಾಯಿಯವರ ಹೋರಾಟದ ಅವಧಿಯಲ್ಲಿಯೇ ಬಾಲಕಿಯರು ಮತ್ತು ವಿಧವೆಯರ ಸಬಲೀಕರಣಕ್ಕಾಗಿ ಜ್ಯೋತಿಬಾ ಫುಲೆ ಮತ್ತು ಅವರ ಪತ್ನಿ ಸಾವಿತ್ರಿಬಾಯಿ ಅವರ ನೇತೃತ್ವದಲ್ಲಿ ಶೈಕ್ಷಣಿಕ ಹೋರಾಟ ನಡೆಯಿತು. ಇವರು ಸಮಾಜದ ಎಲ್ಲ ಸಮುದಾಯದ ಬಾಲಕಿಯರು ಮತ್ತು ಸಾಮಾಜಿಕವಾಗಿ ನೊಂದ ವಿಧವೆಯರಿಗಾಗಿ ಶಾಲೆ ಮತ್ತು ಆಶ್ರಯಧಾಮಗಳನ್ನು ಪ್ರಾರಂಭಿಸಿ ಸಾಮಾಜಿಕ ಸ್ವಾತಂತ್ರ್ಯಕ್ಕಾಗಿ ಪ್ರಯತ್ನಿಸಿದರು. ಸಾಮಾಜಿಕ ತುಳಿತಕ್ಕೆ ಒಳಪಟ್ಟ ಸಮುದಾಯಗಳಿಗಾಗಿ ಮತ್ತು ಮಹಿಳೆಯರಿಗಾಗಿ ಮಾಡಿದ ರಮಾಬಾಯಿಯವರ, ಜ್ಯೋತಿಬಾ ಫುಲೆ ಮತ್ತು ಸಾವಿತ್ರಿಬಾಯಿ ಫುಲೆರವರ ಸಾಮಾಜಿಕ ಸ್ವಾತಂತ್ರ್ಯದ ಪ್ರಯತ್ನಗಳಿಗೆ ರಾಷ್ಟ್ರವಾದಿ ಹೋರಾಟ ಮತ್ತು ಚಿಂತನೆಗಳು ಅಷ್ಟೊಂದು ಬೆಂಬಲ ಕೊಡಲಿಲ್ಲ. ರಾಷ್ಟ್ರವಾದಿಗಳು ಈ ರೀತಿ ತೋರಿರುವ ಪ್ರತಿಕ್ರಿಯೆ ಅವರ ಯಥಾಸ್ಥಿತಿ ಪ್ರವೃತ್ತಿಯನ್ನು ತೋರಿಸುತ್ತದೆ.

ಆರ್ಥಿಕ ಸ್ವಾತಂತ್ರ್ಯ : ಸ್ವಾತಂತ್ರ್ಯದ ಇನ್ನೊಂದು ಬಹುಮುಖ್ಯ ಅಂಗ ಆರ್ಥಿಕ ಸ್ವಾತಂತ್ರ್ಯ. ಬದುಕಿಗಾಗಿ ಒಂದು ಆರ್ಥಿಕ ಉದ್ಯೋಗ ಆರ್ಥಿಕ ಸ್ವಾತಂತ್ರ್ಯದ ಮುಖ್ಯವಾದ ಅಂಶ. ಒಬ್ಬ ವ್ಯಕ್ತಿಗೆ ತನಗಾಗಿ ಮತ್ತು ತನ್ನ ಅವಲಂಬಿತರಿಗಾಗಿ ಆರ್ಥಿಕ ಉದ್ಯೋಗದ ಅವಶ್ಯಕತೆ ಇರುತ್ತದೆ. ಈ ಉದ್ಯೋಗ ಆತನ ಜೀವನಕ್ಕೆ ನೆಮ್ಮದಿ ಮತ್ತು ಸ್ವಾತಂತ್ರ್ಯ ತರುವಂತಿರಬೇಕು. ಕೃಷಿ ಕಾರ್ಮಿಕ ಮತ್ತು ಕೈಗಾರಿಕಾ ಕಾರ್ಮಿಕರ ಉದ್ಯೋಗಗಳಲ್ಲಿ ಅವುಗಳ ಮಾಲೀಕತ್ವದ ದುರಾಸೆ ಮತ್ತು ಶೋಷಣೆಯಿಂದ ಅವರಿಗೆ ನೆಮ್ಮದಿ ಮತ್ತು ಸ್ವಾತಂತ್ರ್ಯದ ಅನುಭವ ದೊರಕುವದಿಲ್ಲ. ಅವರಿಗೆ ಈ ನೆಮ್ಮದಿಯ ಅನುಭವವಾಗದಿದ್ದರೆ ಅದರ ಕಾರಣಕರ್ತರ ವಿರುದ್ಧ ಹೋರಾಡುವುದು ಸಹಜ. ಆರ್ಥಿಕ ಸ್ವಾತಂತ್ರ್ಯಕ್ಕಾಗಿ ಕೃಷಿಕಾರ್ಮಿಕ ವರ್ಗ ಮತ್ತು ಕೈಗಾರಿಕಾ ಕಾರ್ಮಿಕ ವರ್ಗ ಹೋರಾಡುವಾಗ ರಾಷ್ಟ್ರವಾದಿ ಧುರೀಣರ ಮತ್ತು ಚಿಂತಕರ ಪ್ರತಿಕ್ರಿಯೆ ಹೇಗಿತ್ತು ಎಂಬುವದನ್ನು ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ ಹೊರಬಂದ ಕೆಲವೊಂದು ಸಂಗತಿ ಮತ್ತು ವಿಚಾರಗಳಿಂದ ಪರೀಕ್ಷಿಸಬಹುದು. ಆರ್ಥಿಕ ಸ್ವಾತಂತ್ರ್ಯದ ಪ್ರಶ್ನೆಯ ಕುರಿತು ಕೃಷಿ ಮತ್ತು ಕೈಗಾರಿಕಾ ಕಾರ್ಮಿಕರಿಗೆ ಅನೇಕ ರಾಷ್ಟ್ರವಾದಿ ಧುರೀಣರು ಬಹಳಷ್ಟು ಬಾರಿ ಬೆಂಬಲ ನೀಡಿದ್ದರೂ ಸಹಿತ ನಿರ್ಣಾಯಕ ಸಮಯದಲ್ಲಿ ಅವರ ನಿಲುವುಗಳು ಸಂಪ್ರದಾಯಪಾಲಕ ಆರ್ಥಿಕ ವಿನ್ಯಾಸವನ್ನು ಹಿಡಿದಿಟ್ಟುಕೊಳ್ಳಲು ಸಹಾಯವಾಗಿ ಕೃಷಿ ಮತ್ತು ಕೈಗಾರಿಕಾ ಕಾರ್ಮಿಕರು ತಮ್ಮ ಆರ್ಥಿಕ ಸ್ವಾತಂತ್ರ್ಯವನ್ನು ಕಳೆದುಕೊಳ್ಳುವಂತೆ ಮಾಡಿದವು.

ವಸಾಹತುಶಾಹಿ ಆಡಳಿತ ಮತ್ತು ಜಮೀನ್ದಾರರ ಶೋಷಣೆಯ ವಿರುದ್ಧ ಬಡ ರೈತರ ಮತ್ತು ಕೃಷಿ ಕಾರ್ಮಿಕರ ಪ್ರತಿಭಟನೆ ಸ್ವಾತಂತ್ರ್ಯ ಸಂಗ್ರಾಮದ ಒಂದು ಲಕ್ಷಣವಾಗಿತ್ತು. ರೈತ ಮತ್ತು ಕೃಷಿಕಾರ್ಮಿಕರ ಶೋಷಣೆಯನ್ನು ಅವರ ಆರ್ಥಿಕ ಸ್ವಾತಂತ್ರ್ಯದ ಅಪಹರಣವೆಂದು ಕರೆಯಬಹುದು. ರೈತರ ಪ್ರತಿಭಟನೆಗಳನ್ನು ಪರೀಕ್ಷಿಸಿದಾಗ ಕಂಡುಬರುವ ವಿಷಯವೇನೆಂದರೆ, ಪ್ರತಿಭಟನೆಗಳು ರಾಷ್ಟ್ರವಾದಿ ಧುರೀಣರ ನೇತೃತ್ವದಲ್ಲಿ ನಡೆದಾಗ ಉಗ್ರ ಮತ್ತು ಪರಿವರ್ತನಾವಾದಿಗಳಾಗಲಿಲ್ಲ. ಸ್ವತಂತ್ರವಾಗಿ ಪರಿವರ್ತನಾ ದಾರಿಯನ್ನು ತುಳಿದರೆ ಅವುಗಳನ್ನು ವಿಮರ್ಶಿಸಲಾಗುತ್ತಿತ್ತು ಮತ್ತು ವಿರೋಧಿಸಲಾಗುತ್ತಿತ್ತು. ಗಾಂಧಿಯವರನ್ನೊಳಗೊಂಡು ಅನೇಕ ರಾಷ್ಟ್ರವಾದಿ ಧುರೀಣರು ಆಗಾಗ್ಗೆ ರೈತರನ್ನು ಜಮೀನ್ದಾರರಿಗೆ ಬಾಡಿಗೆ ಸಂದಾಯವನ್ನು ನಿಲ್ಲಿಸುವ ಅತಿರೇಕದ ಕೃತ್ಯ ಬಿಟ್ಟುಬಿಡುವುದಾಗಿ ಕೇಳುತ್ತಿದ್ದರು. ತಮ್ಮ ನೇತೃತ್ವದಲ್ಲಿರುವ ರಾಷ್ಟ್ರೀಯ ಹೋರಾಟವು ತಮ್ಮ ಹತೋಟಿಯಿಂದ ಕೈಜಾರಿ ತೀವ್ರಗಾಮಿ ಅಥವಾ ಕ್ರಾಂತಿಕಾರಿ ಧುರೀಣರ ಕಡೆಗೆ ಹೋಗಬಹುದೆಂಬ ಭಯದಿಂದ ಮಧ್ಯಮ ವರ್ಗದ ಧುರೀಣರು ಈ ರೀತಿ ಕೋರಿಕೆ ಮಾಡುತ್ತಿದ್ದರು ಎಂದು ಅರ್ಥೈಸಲಾಗಿದೆ. (ಈ ವಿಷಯ ಇತಿಹಾಸ ತಜ್ಞರಾದ ಬಿಪಿನ ಚಂದ್ರ ಮತ್ತು ಅವರ ಸಹಪಾಠಿಗಳ ಕೃತಿ ಸ್ವಾತಂತ್ರ್ಯಕ್ಕಾಗಿ ಭಾರತದ ಹೋರಾಟದಲ್ಲಿ ನೋಡಬಹುದು). ಇಂತಹ ಅರ್ಥವಿವರಣೆಗಳಲ್ಲಿ ತಿರುಳು ಇದೆ ಎಂದು ನಂಬಲು ಸಹಾಯಕಾರಿಯಾಗಿ ಬರುವ ಸಂಗತಿಗಳೆಂದರೆ, ದಲಿತ-ಬಹುಜನರ ಹೋರಾಟಗಳಿಗೆ ರಾಷ್ಟ್ರವಾದಿ ಧುರೀಣರು ತೋರಿರುವ ಪ್ರತಿಕ್ರಿಯೆಗಳು. ದಲಿತ-ಬಹುಜನರು, ತಮ್ಮ ಸಮಸ್ಯೆಗಳನ್ನು ಬೇರೆಯವರ ಧುರೀಣತ್ವವಿಲ್ಲದೆ ತಮ್ಮದೇ ನೇತೃತ್ವದಲ್ಲಿ ಸ್ಪಷ್ಟವಾಗಿ ಹೇಳಲು ಪ್ರಯತ್ನಿಸಿದಾಗ ಯಾವ ರೀತಿ ರಾಷ್ಟ್ರವಾದಿ ಧುರೀಣತ್ವವು ತಡೆಯಲೂ ಪ್ರಯತ್ನ ಮಾಡಿತೋ ಅದೇ ರೀತಿ ಬಡ ರೈತ ಮತ್ತು ರೈತ ಕಾರ್ಮಿಕರು ತಮ್ಮದೆಯಾದ ಧುರೀಣರ ನೇತೃತ್ವದಲ್ಲಿ ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಒತ್ತಾಯ ಮಾಡಿದಾಗ ಅವರನ್ನು ತಡೆಯಿತು.

ಭಾರತದಲ್ಲಿ ಕಾರ್ಮಿಕ ವರ್ಗದ ಚಳವಳಿಯು ೧೯೨೦ರ ದಶಕದಲ್ಲಿಯೇ ಗಮನಿಸುವಂತಹ ಒಂದು ಶಕ್ತಿಯಾಗಿ ಬೆಳೆಯಿತು. ಇದೇ ಸಮಯದಲ್ಲಿ ಗಾಂಧಿಯವರು ಸ್ವಾತಂತ್ರ್ಯ ಹೋರಾಟದಲ್ಲಿ ಒಬ್ಬ ಪ್ರಮುಖ ಧುರೀಣರಾಗಿ ಪ್ರವೇಶ ಮಾಡಿದರು. ಅವರಿಗೆ ಕಾರ್ಮಿಕ ವರ್ಗದ ಬಗ್ಗೆ ಕಾಳಜಿ ಇತ್ತಾದರೂ ಅವರನ್ನು ಕಾರ್ಮಿಕರ ನೈಜ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಧುರೀಣನೆಂದು ಕರೆಯಲಾಗುವದಿಲ್ಲ. ಗಾಂಧಿಯವರು, ಕಾರ್ಮಿಕ ವರ್ಗದ ಸಮಸ್ಯೆಗಳ ಪರಿಹಾರಕ್ಕಾಗಿ ತಮ್ಮದೇ ಆದ ಒಂದು ಮಾರ್ಗವನ್ನು ಹೊಂದಿದ್ದರು. ಈ ಮಾರ್ಗವು ಹಕ್ಕುಗಳ ಪ್ರತಿಪಾದನೆಗಿಂತ ಸಾಮರಸ್ಯಕ್ಕೆ ಪ್ರಾಮುಖ್ಯತೆ ಕೊಟ್ಟಿತು. ಆದರೆ, ಈ ಸಾಮರಸ್ಯ ಕಾರ್ಮಿಕರ ನೆಮ್ಮದಿ ಮತ್ತು ಸ್ವಾತಂತ್ರ್ಯಕ್ಕಾಗಿ ಎಷ್ಟರಮಟ್ಟಿಗೆ ಕಾರಣವಾಗುತ್ತದೆ ಎಂದು ಗಾಂಧಿಯವರು ಇನ್ನೂ ಹೆಚ್ಚಿನ ಆಲೋಚನೆ ಮಾಡಲಿಲ್ಲ. ರಾಖಾಹರಿ ಚಟರ್ಜಿಯವರ ಪ್ರಕಾರ, ಗಾಂಧಿಯವರು ಕಾರ್ಮಿಕ ವರ್ಗವನ್ನು ಕ್ರಾಂತಿಕಾರಿ ಅಲ್ಲದ ದಾರಿಯ ಮುಖಾಂತರ ಮತ್ತು ಸಾಂಪ್ರದಾಯಿಕ ಮೌಲ್ಯಗಳ ಚೌಕಟ್ಟಿನಲ್ಲಿ ಬಹಳ ಮಂದವಾದ ಒಟ್ಟಿಗೆ ಕೂಡಿಸುವಿಕೆಯ ಪ್ರಕ್ರಿಯೆಯ ಪರವಾಗಿದ್ದರು.

ಅವರು ಕಾರ್ಮಿಕ ವರ್ಗದವರನ್ನು ಉದ್ದೇಶಿಸಿ ಮಾತನಾಡುವ ಅವಕಾಶ ಸಿಕ್ಕಾಗ ಕಾರ್ಮಿಕ ವರ್ಗಕ್ಕೆ ಬಂಡವಾಳಶಾಹಿಗಳ ಅವಶ್ಯಕತೆ ಎಷ್ಟು ಇದೆಯೋ ಅಷ್ಟೆ ಕಾರ್ಮಿಕ ವರ್ಗದ ಅವಶ್ಯಕತೆ ಬಂಡವಾಳಶಾಹಿಗಳಿಗಿದೆ ಎಂದು ಅರಿಯಲು ಕಾರ್ಮಿಕರನ್ನು ಉಪದೇಶಿಸುತ್ತಿದ್ದರು. ಈ ರೀತಿ ತಮ್ಮ ಮನವೊಲಿಸುವಂಥ ಮಾರ್ಗದಿಂದ ಗಾಂಧಿಯವರು ಕಾರ್ಮಿಕ ವರ್ಗದ ಕ್ರಾಂತಿಕಾರಕ ಶಕ್ಯತೆಯನ್ನು ಮೃದು ಮಾಡುವಲ್ಲಿ ಸಫಲರಾದರು. ರಾಖಾಹರಿ ಚಟರ್ಜಿಯವರು, ಗಾಂಧೀಜಿ ಮತ್ತು ಕಾರ್ಮಿಕ ಚಳವಳಿಯ ಬಗ್ಗೆ ವಿವರಿಸುತ್ತಾ ಹೇಳಿರುವ ಮತ್ತೊಂದು ಅಂಶವೇನೆಂದರೆ, ಗಾಂಧಿಯವರು ಅಖಿಲ ಭಾರತ ಮಟ್ಟದಲ್ಲಿ ಕಾರ್ಮಿಕರು ಸಂಘಟಿತವಾಗುವ ಪ್ರಯತ್ನಕ್ಕೆ ವಿರುದ್ಧವಾಗಿದ್ದರು. ಏಕೆಂದರೆ ಇಂತಹ ಸಂಘಟನೆಯು ವರ್ಗ ಬಿರುಕನ್ನು ಹೆಚ್ಚಿಸುವಂತಹದ್ದಾಗಿ ರಾಷ್ಟ್ರೀಯ ಸಮಗ್ರತೆಯನ್ನು ಕೆಡಿಸುತಿತ್ತು. ರಾಷ್ಟ್ರೀಯ ಸಮಗ್ರತೆಯ ಬಗ್ಗೆ ಇಲ್ಲಿ ಹೇಳಲೇಬೇಕಾದ ಮಾತುಗಳೆಂದರೆ, ಸಮಾಜದ ಪ್ರತಿ ವ್ಯಕ್ತಿ ಮತ್ತು ಸಮುದಾಯಗಳಲ್ಲಿ ಹಕ್ಕು ಮತ್ತು ಸ್ವಾತಂತ್ರ್ಯದ ನೈಜ ಅನುಭವವಿದ್ದರೆ ರಾಷ್ಟ್ರೀಯ ಸಮಗ್ರತೆ ಸ್ವಾಭಾವಿಕವಾಗಿಯೇ ಬರುತ್ತದೆ. ಒಂದು ವರ್ಗದ ಆಶಯಗಳನ್ನು ಬದಿಗೊತ್ತಿ ಸಮಾಜ ಮತ್ತು ದೇಶಕ್ಕಾಗಿ ಹೋರಾಟದ ಸಮಗ್ರತೆಯನ್ನು ಇಚ್ಛಿಸಿದರೆ ನೈಜ ಸಮಗ್ರತೆ ಸಾಧಿಸುವದು ಕಠಿಣವಾಗುತ್ತದೆ. ಗಾಂಧಿಯವರ ಮನಸ್ಸಿನಲ್ಲಿ ಇನ್ನು ವಿಶಾಲವಾದ ವಿಚಾರಗಳು ಬಂದಿದ್ದರೆ



ಸ್ವಾತಂತ್ರ್ಯದ ವಿಚಾರ ಮತ್ತು ಪ್ರಯೋಗ ಇನ್ನೂ ಹೆಚ್ಚಿಗೆ ಪರಿಪಕ್ವವಾಗಬಹುದಿತ್ತು ಎಂಬ ಆಶಯಗಳು ಸದಾ ಕಾಡುತ್ತಲೇ ಇರುತ್ತವೆ.

ಕಾರ್ಮಿಕ ವರ್ಗ ಮತ್ತು ಇತರೆ ದುಡಿಯುವ ಜನರ ಬಗ್ಗೆ ಗಾಂಧಿಯವರು ಅಳವಡಿಸಿಕೊಂಡ ಮಾರ್ಗ ವಿಮರ್ಶಾತ್ಮಕವಾಗಿ ಅವಲೋಕನ ಮಾಡಿದವರಲ್ಲಿ ಸಮಾಜವಾದಿ ಧುರೀಣ ಮತ್ತು ಚಿಂತಕರಾದ ಇ. ಎಂ. ಎಸ್. ನಂಬೂದ್ರಿಪಾದರವರು. ಇವರು ತಮ್ಮ ಕೃತಿ ಮಹಾತ್ಮಾ ಮತ್ತು ವಾದದಲ್ಲಿ ಗ್ರಾಮೀಣ ಬಡ ಜನತೆಗೆ ಸಂಬಂಧಿತವಲ್ಲದೆ ಕಾರ್ಮಿಕ ವರ್ಗ ಮತ್ತು ಇತರೆ ದುಡಿಯುವ ಜನರ ಬಗ್ಗೆಯು ಕೂಡಾ ಗಾಂಧಿಯವರ ಮಾರ್ಗವು ಪ್ರಯೋಗದಲ್ಲಿ ಅಥವಾ ನೈಜತೆಯಲ್ಲಿ ಮಧ್ಯಮ ವರ್ಗಕ್ಕೆ ಸಹಾಯ ಮಾಡಿತ್ತು ಎಂದು ತಿಳಿಸುತ್ತಾರೆ. ಗಾಂಧಿಯವರ ವಿಚಾರ ಮತ್ತು ಚಟುವಟಿಕೆಗಳಾದ ಧರ್ಮದರ್ಶಿ ಸಿದ್ಧಾಂತ, ರಾಜಕೀಯ ಚಟುವಟಿಕೆಗಳಿಗೆ ನಿರ್ದೇಶನಗಳಂತೆ ಕೆಲವು ನೈತಿಕ ಮೌಲ್ಯಗಳ ಮೇಲೆ ಅವರ ಆಗ್ರಹ, ಸಂಸದೀಯ ಮತ್ತು ಸಂಸದೀಯ – ಮಿಗಿಲಾದ ಚಟುವಟಿಕೆಗಳನ್ನು ಕೂಡಿಸುವ ಅವರ ನಿಪುಣತೆಯ ದಾರಿ ಎಲ್ಲವೂ ಪ್ರಯೋಗದಲ್ಲಿ ಮಧ್ಯಮ ವರ್ಗಕ್ಕೆ ಅತಿದೊಡ್ಡ ಸಹಾಯವಾಗಿ ಕಂಡುಬಂದವು ಎಂದು ನಂಬೂದ್ರಿಪಾದರವರು ತಿಳಿಸುತ್ತಾರೆ.



ವಸಾಹತುಶಾಹಿಯ ಆಳ್ವಿಕೆಯ ಸಮಯದಲ್ಲಿ ರೈತರ ಸಮಸ್ಯೆಗಳ ಕುರಿತು ಗಾಂಧಿಯವರ ಪ್ರತಿಕ್ರಿಯೆಯು ಅಸ್ಪಷ್ಟ ಮತ್ತು ವಿರೋಧಾತ್ಮಕವಾಗಿತ್ತು ಎಂದು ಅಭಾ ಪಾಂಡ್ಯರವರು ಚರ್ಚಿಸುತ್ತಾರೆ. ಹೀಗೆ ಚರ್ಚಿಸುವುದಕ್ಕೆ ಕೆಲವೊಂದು ಸಹಾಯಕ ಅಂಶಗಳಿವೆ. ೧೯೨೦ ಮತ್ತು ೩೦ರ ದಶಕಗಳಲ್ಲಿ ಸ್ಥಳೀಯ ಜಮೀನ್ದಾರರ ದಬ್ಬಾಳಿಕೆಯ ವಿರುದ್ಧ ರೈತರ ಹೋರಾಟ ಹೆಚ್ಚುತ್ತಿರುವಾಗ ಗಾಂಧಿಯವರು ಅವರ ಅತೃಪ್ತಿಯ ಪ್ರದರ್ಶನವನ್ನು ಪ್ರತಿಕೂಲವಾಗಿ ಪ್ರತಿಕ್ರಿಯೆ ಮಾಡಿದರು. ಉದಾಹರಣೆಗಾಗಿ ೧೯೨೧ರಲ್ಲಿ ಜಾಸ್ತಿ ಬಾಡಿಗೆಗೆ ಒಳಗಾಗಿರುವ ರೈತರು ಉತ್ತರ ಪ್ರದೇಶದಲ್ಲಿ ಆರಂಭಿಸಿದ ಸಾಮಾಜಿಕ ಬಹಿಷ್ಕಾರ, ಬಾಡಿಗೆ ಕೊಡದ ಅಥವಾ ಅಬಾಡಿಗೆ ಕಾರ್ಯಾಚರಣೆಯನ್ನು ಗಾಂಧಿಯವರು ಬಲವಾಗಿ ಖಂಡಿಸಿದರು ಮತ್ತು ಈ ಚಳವಳಿಯನ್ನು ಹಿಂಸೆಯ ಸಾಧನವೆಂದು ಕರೆದರು. ಸರ್ಕಾರದ ಕೃತ್ಯಗಳಿಂದ ರೈತರ ಹಿತಾಸಕ್ತಿಗಳಿಗೆ ಧಕ್ಕೆ ಬಂದರೆ, ಗಾಂಧಿಯವರು ರೈತರ ಹಿತಾಸಕ್ತಿಗಳನ್ನು ಪ್ರತಿಪಾದಿಸುತ್ತಿದ್ದರು. ಆದರೆ, ಗಾಂಧಿ ನೇತೃತ್ವದಲ್ಲಿರುವ ಕಾಂಗ್ರೆಸ್, ಜಮೀನ್ದಾರರ ಹಿತಾಸಕ್ತಿಯಿಂದ ರೈತರ ಹಿತಾಸಕ್ತಿಗಳಿಗೆ ತೊಂದರೆಯಾದರೆ ಪರಸ್ಪರ ನಂಬುಗೆ ಮತ್ತು ತಿಳುವಳಿಕೆಯ ಸಲಹೆ ನೀಡಿ ಸತತವಾಗಿ ಭಾರತೀಯ ಪಟ್ಟಭದ್ರ ಹಿತಾಸಕ್ತಿಗಳ ಪರವಾಗಿ ಸಂಧಾನ ಮಾಡಿಕೊಳ್ಳುತಿತ್ತು ಎಂದು ಅಭಾ ಪಾಂಡ್ಯರವರ ಸಂಶೋಧನೆಯಿಂದ ತಿಳಿದುಬರುತ್ತದೆ.

ಈ ಮೇಲೆ ವಿಶ್ಲೇಷಣೆ ಮಾಡಿದ ಚರ್ಚೆ ಮತ್ತು ವಿವಿಧ ನಿಲುವುಗಳನ್ನು ಗಂಭೀರವಾಗಿ ವಿಚಾರಿಸಿದರೆ ನಮ್ಮಲ್ಲಿ ನಮ್ಮ ವಾಸ್ತವದ ಬಗ್ಗೆ ಕೆಲವು ಸಂಶಯಗಳು ಬರಬಹುದು. ಈಗ ನಾವಿರುವುದು ಸ್ವತಂತ್ರ ಪ್ರಜಾಪ್ರಭುತ್ವಾತ್ಮಕ ರಾಜಕೀಯ ವ್ಯವಸ್ಥೆಯಲ್ಲಿ. ಇಂತಹ ವ್ಯವಸ್ಥೆಯಲ್ಲಿ ಪ್ರತಿಯೊಬ್ಬ ನಾಗರಿಕರು ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯವನ್ನು ಅನುಭವಿಸಬೇಕು. ಆದರೆ, ಈ ಅನುಭವದ ಬಗ್ಗೆ ನಮ್ಮಲ್ಲಿ ಯಾವುದೇ ಸಂಶಯವಿಲ್ಲದ ಉತ್ತರವಿಲ್ಲ. ತಕ್ಕಮಟ್ಟಿಗೆ ನಾವೆಲ್ಲಾ ರಾಜಕೀಯ ಸ್ವಾತಂತ್ರ್ಯವನ್ನು ಅನುಭವಿಸುತ್ತಿದ್ದರೂ ನಮ್ಮಲ್ಲಿ ಬಹಳಷ್ಟು ಜನರಿಗೆ ಸಾಮಾಜಿಕ ಮತ್ತು ಆರ್ಥಿಕದ ಅನುಭವ ಇನ್ನೂ ಆಗಿಲ್ಲ ಎಂದು ನಮ್ಮಲ್ಲಿರುವ ಆಧಾರಾಂಶಗಳು ಮತ್ತು ವೈಯಕ್ತಿಕ ಅನುಭವಗಳು ತಿಳಿಸುತ್ತವೆ. ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯದ ದಿಸೆಯಲ್ಲಿ ಪ್ರಯತ್ನ ನಡೆಯುತ್ತಿದೆ ಎಂದು ನಮ್ಮ ಸರ್ಕಾರಗಳು ಮೊದಲಿನಿಂದಲೂ ಹೇಳುತ್ತಾ ಬಂದಿವೆ. ಆದರೆ ಈ ಪ್ರಯತ್ನಗಳು ಗುರಿ ಮುಟ್ಟುವವರೆಗೆ ನಡೆಯುತ್ತಿಲ್ಲ ಮತ್ತು ಅದನ್ನು ಪೂರೈಸುವ ಇಚ್ಛಾಶಕ್ತಿ ನಮ್ಮ ಸರ್ಕಾರ ಮತ್ತು ಹಲವು ರಾಜಕೀಯ ಶಕ್ತಿಗಳಲ್ಲಿಲ್ಲ. ಯಾವ ರೀತಿ ಸ್ವಾತಂತ್ರ್ಯ ಪೂರ್ವದ ಭಾರತದಲ್ಲಿ ಸ್ವಾತಂತ್ರ್ಯದ ಕುರಿತು ಕೆಲವು ಚರ್ಚೆ ಮತ್ತು ಹೋರಾಟಗಳು ಸಮಗ್ರವಾಗಿರಲಿಲ್ಲವೋ ಅದೇ ರೀತಿ ಇಂದಿನ ಚರ್ಚೆ ಮತ್ತು ಹೋರಾಟಗಳು ಸಮಗ್ರವಾಗಿಲ್ಲ.

ದೀನದಲಿತರಿಗಾಗಿ ಸಾಮಾಜಿಕ ಸ್ವಾತಂತ್ರ್ಯದ ವಿಷಯ ಬಂದಾಗ ರಾಷ್ಟ್ರವಾದದ ನೆಪ ತೆಗೆಯುವದು, ಲಿಂಗ ಸ್ವಾತಂತ್ರ್ಯದ ವಿಷಯ ಬಂದಾಗ ಭಾರತ ಮಾತೆಯೆಂಬ ಕಲ್ಪನೆ ತಂದು ಮಹಿಳೆಯರ ನೈಜ ಸ್ವಾತಂತ್ರ್ಯವನ್ನು ಬದಿಗಿಡುವುದು, ಆರ್ಥಿಕ ಸ್ವಾತಂತ್ರ್ಯದ ಆಶಯ ಬಂದಾಗ ದೇಶದ ಅಭಿವೃದ್ಧಿಯ ಬಗೆಗೆ ಮಾತನಾಡಿ ಸಮಾನತೆಯನ್ನು ಮುಚ್ಚಿಹಾಕುವದು ಇಂದಿನ ರಾಷ್ಟ್ರವಾದಿ ಮತ್ತು ಉದಾರವಾದಿ ರಾಜಕೀಯ ಶಕ್ತಿ ಮತ್ತು ಧುರೀಣರ ರೂಢಿಯಾಗಿವೆ. ಇದೆಲ್ಲಾ ನೋಡಿದಾಗ ನಮಗೆ ಇತಿಹಾಸದಲ್ಲಿ ನಡೆದ ಸ್ವಾತಂತ್ರ್ಯದ ಚರ್ಚೆಯು ಮತ್ತೆ ಮರಳಿಬಂದಿದೆ ಎಂದು ನಮಗೆ ಅನ್ನಿಸುವದಿಲ್ಲವೆ? ಹಾಗೆ ಭಾವಿಸಿದ್ದರೆ ನಮ್ಮಲ್ಲಿ ಬಹಳಷ್ಟು ಜನ ಮೂಕಪ್ರೇಕ್ಷಕರೆ? ಈ ಮೂಕಪ್ರೇಕ್ಷಕರಲ್ಲಿ ಅರಿವನ್ನು ಮೂಡಿಸಲು, ಎಲ್ಲರಿಗೂ ಸಮಗ್ರ ಸ್ವಾತಂತ್ರ್ಯದ ಅನುಭವವಾಗಲು, ಮತ್ತೊಮ್ಮೆ ನವ ಪಂಡಿತಾ ರಮಾಬಾಯಿಯರ, ಫುಲೆ–ಅಂಬೇಡ್ಕರರವರ, ಲೋಹಿಯಾ ಮತ್ತು ನಂಬೂದ್ರಿಪಾದರವರ ನೇತೃತ್ವದ ಸ್ವಾತಂತ್ರ್ಯ ಸಂಗ್ರಾಮದ ಅವಶ್ಯವಿದೆ ಎಂದು ಅನ್ನಿಸುವದಿಲ್ಲವೆ?

ನಮ್ಮಲ್ಲಿ ಸಾಮಾಜಿಕ ಮತ್ತು ಆರ್ಥಿಕ ಹೊಸ ವಸಾಹತುಶಾಹಿ ಆವರಿಸಿದೆ ಎಂದು ಹೇಳಲು, ಉದಾಹರಣೆಗಾಗಿ, ಕೆಲವು ಅಭಿವ್ಯಕ್ತಿಗಳನ್ನು ನಿವೇದನೆ ಮಾಡಬೇಕಾಗುತ್ತದೆ. ಮೊದಲನೆಯದಾಗಿ, ಒಬ್ಬ ವ್ಯಕ್ತಿ ತಾನು ಯಾವ ಆಹಾರವನ್ನು ತಿನ್ನಬೇಕೆಂದು ನಿರ್ಧರಿಸುವ ಸಾಮರ್ಥ್ಯ ಅವನಲ್ಲಿ ಇರದಿದ್ದರೆ ಅಥವಾ ಅದನ್ನು ಬೇರೆಯವರು ಕಸಿದುಕೊಂಡರೆ ಆತನನ್ನು ಸ್ವತಂತ್ರ ವ್ಯಕ್ತಿಯೆಂದು ಕರೆಯಲಾಗುವುದಿಲ್ಲ. ಎರಡನೆಯದಾಗಿ, ಒಬ್ಬ ಯುವಕ ಅಥವಾ ಯುವತಿ ತಮ್ಮ ಮದುವೆಯನ್ನು ಸ್ವಯಂ ನಿರ್ಧಾರದಿಂದ ಮಾಡಿಕೊಳ್ಳುವುದಕ್ಕೆ ಸಾಮಾಜಿಕ ಅಡೆತಡೆಗಳಿದ್ದರೆ ಅವರನ್ನು ಸ್ವತಂತ್ರ ವ್ಯಕ್ತಿಗಳೆಂದು ಕರೆಯಲಾಗುವುದಿಲ್ಲ. ಮೂರನೆಯದಾಗಿ, ಸಮಾಜದಲ್ಲಿ ಶೋಷಿತ ವರ್ಗದ ವ್ಯಕ್ತಿಯು ಖುಷಿಯಿಂದ ತಾನು ಇಚ್ಛೆಪಟ್ಟ ಪದ್ಧತಿಯಂತೆ ಆತನು ಮದುವೆಯಾಗಲು ಅಡೆತಡೆಗಳಿದ್ದರೆ ಅವನು ಅಥವಾ ಅವಳನ್ನು ಸ್ವತಂತ್ರ ವ್ಯಕ್ತಿಯೆಂದು ಕರೆಯಲಾಗುವದಿಲ್ಲ. ಕೊನೆಯದಾಗಿ, ಒಬ್ಬ ಸಾಮಾನ್ಯ ವ್ಯಕ್ತಿಯು ತನ್ನ ನೆಲ, ಜಲ ಮತ್ತು ಇನ್ನಿತರ ನೈಸರ್ಗಿಕ ಸಂಪನ್ಮೂಲಗಳನ್ನು ತನ್ನ ನೆಮ್ಮದಿ ಮತ್ತು ಸ್ವಾತಂತ್ರ್ಯಕ್ಕಾಗಿ ಉಪಯೋಗಿಸಲು ಅಡೆತಡೆಗಳಿದ್ದರೆ ಆತನನ್ನು ಅಥವಾ ಅವಳನ್ನು ಸ್ವತಂತ್ರ ವ್ಯಕ್ತಿಯೆಂದು ಕರೆಯಲಾಗುವದಿಲ್ಲ. ಇಂತಹ ಸ್ವಾತಂತ್ರ್ಯಹರಣ ಸಂಬಂಧಿತ ಘಟನೆಗಳು ನಮ್ಮ ದೇಶದಲ್ಲಿ ನಡೆಯುತ್ತಲೇ ಇವೆ ಮತ್ತು ಈಗೀಗ ಹೆಚ್ಚಾಗಿವೆ.

ಸ್ವಾತಂತ್ರ್ಯ ಸಮಗ್ರವಾಗಲು ಅದರ ಕುರಿತು ನಮ್ಮಲ್ಲಿರುವ ವಿಚಾರಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳಬೇಕು. ನಮ್ಮಲ್ಲಿರುವ ಗಾಂಧಿವಾದಿಗಳು ಮತ್ತು ತಿಲಕರಂತಹ ರಾಷ್ಟ್ರವಾದಿಗಳು ನವ ರಮಾಬಾಯಿ–ಸಾವಿತ್ರಿಬಾಯಿಯರ, ಫುಲೆ–ಅಂಬೇಡ್ಕರವರ, ಲೋಹಿಯಾ–ನಂಬೂದ್ರಿಪಾದರವರ ಕೋರಿಕೆಗಳಿಗೆ ಸ್ಪಂದನೆ ಮಾಡಬೇಕು. ಈ ಸ್ಪಂದನೆಯಿಂದ ಸ್ವಾತಂತ್ರ್ಯದ ಅನುಭವ ಶ್ರೀಮಂತವಾಗಬೇಕು. ಇಲ್ಲವಾದರೆ, ನವ ಪಂಡಿತಾ ರಮಾಬಾಯಿ ಮತ್ತು ಸಾವಿತ್ರಿಬಾಯಿ, ಫುಲೆ ಮತ್ತು ಅಂಬೇಡ್ಕರ, ಲೋಹಿಯಾ ಮತ್ತು ನಂಬೂದ್ರಿಪಾದರವರ ನೇತೃತ್ವದ ಸ್ವಾತಂತ್ರ್ಯ ಸಂಗ್ರಾಮ ಅತಿ ರಭಸದಲ್ಲಿ ನಡೆಯಬೇಕಾಗುತ್ತದೆ.

**ಡಾ॥ ಪ್ರಕಾಶ ದೇಸಾಯಿ**
ಸಹಾಯಕ ಪ್ರಾಧ್ಯಾಪಕರು, ರಾಜ್ಯಶಾಸ್ತ್ರ ವಿಭಾಗ
ಗೋವಾ ವಿಶ್ವವಿದ್ಯಾಲಯ, ಗೋವಾ

# ಅಧ್ಯಕ್ಷ ಟ್ರಂಪ್ ಪ್ರಾರಂಭಿಸಿರುವ ವಾಣಿಜ್ಯ ಸಮರ



ನ್ಯೂ ಸ್ಟೇಟ್ಸ್‌ಮನ್ ಪತ್ರಿಕೆ ಕೃಪೆ

ಬಂಡವಾಳಶಾಹಿ ವ್ಯವಸ್ಥೆಯ ಹುಟ್ಟೇ ಪೈಪೋಟಿಗೆ ಮೂಲ. ವಸ್ತುಗಳ ವಿನಿಮಯದ ಹಿಂದಿನ ವ್ಯವಸ್ಥೆ ಅದೃಶ್ಯಗೊಂಡಮೇಲೆ ಮಾರುಕಟ್ಟೆಗೆ ಹುಡುಕಾಟ. ಒಂದೇ ಸೂರಿನಡಿ ಅಗತ್ಯಕ್ಕಿಂತ ಹೆಚ್ಚಾಗಿ ಸರಕು ಉತ್ಪಾದನೆಯೇ ಅದರ ಸೃಷ್ಟಿ. ಇಪ್ಪತ್ತನೆ ಶತಮಾನದಲ್ಲಿ ಎರಡು ಮಹಾಯುದ್ಧಗಳು ನಡೆದದ್ದೂ ಕೂಡ ಮಾರುಕಟ್ಟೆ ವಿಸ್ತರಣೆಗಾಗಿಯೆ. ವಸಾಹತೀಕರಣವೂ ಕೂಡ ಅದರ ಒಂದು ಭಾಗ. ಶೋಷಣೆಯೇ ಬಂಡವಾಳಶಾಹಿ ವ್ಯವಸ್ಥೆಗೆ ಆಧಾರ. ಮಾರುಕಟ್ಟೆಯ ನಿಯಂತ್ರಣಕ್ಕಾಗಿ ಹುಟ್ಟಿಕೊಂಡದ್ದು 'ಗ್ಯಾಟ್' ಎಂದು ಇಂಗ್ಲಿಷ್‌ನಲ್ಲಿ ಕರೆಯುತ್ತಿದ್ದ ವಾಣಿಜ್ಯ ಮತ್ತು ಸುಂಕದ ದರ ಕುರಿತ ಸಾಮಾನ್ಯ ಒಪ್ಪಂದ. ಸಾಕಷ್ಟು ದೀರ್ಘಕಾಲ ಇದ್ದ ಈ ಒಪ್ಪಂದ ಹೋಗಿ, ಬಂದದ್ದು ವಿಶ್ವ ವಾಣಿಜ್ಯ ಸಂಸ್ಥೆ, ಹ್ರಸ್ವವಾಗಿ 'ಡಬ್ಲ್ಯೂಟಿಒ'. ಇಪ್ಪತ್ತೊಂದನೆ ಶತಮಾನದ ಹೊಸ ಅವತಾರ ಎನ್ನಲು ಅಡ್ಡಿಯಿಲ್ಲ. ಅದರ ಪರಿಣಾಮವೇ ಜಾಗತೀಕರಣ, ಉದಾರೀಕರಣ, ವಗೈರೆ ವಗೈರೆ ನೀತಿಯ ಪ್ರವೇಶ. ಇದೀಗ ಪ್ರಾರಂಭವಾಗಿದೆ ಬಂಡವಾಳಶಾಹಿ ವ್ಯವಸ್ಥೆಯ ವಾಣಿಜ್ಯ ಸಮರ.

ಇದನ್ನು ಪ್ರಾರಂಭಿಸಿದ್ದು ಬಂಡವಾಳಶಾಹಿ ಜಗತ್ತಿನಲ್ಲಿ ಅಗ್ರಸ್ಥಾನದಲ್ಲಿರುವ, ಆರ್ಥಿಕವಾಗಿ, ಸೈನಿಕವಾಗಿ ಬಲಾಢ್ಯವೆನಿಸಿರುವ ಅಮೆರಿಕದ ಅಧ್ಯಕ್ಷ ಡೋನಾಲ್ಡ್ ಟ್ರಂಪ್. ಈ ಸಮರದ ಪರಿಣಾಮ ಏನು ಎನ್ನುವುದನ್ನು ಈಗಲೇ ಹೇಳುವಂತಿಲ್ಲ. ಸೋಲು ಗೆಲವು ಅನಿಶ್ಚಿತ. ಭಾರತದಂಥ ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ ದುಷ್ಪರಿಣಾಮವಾಗುವುದಂತೂ ಖಚಿತ. ಅಮೆರಿಕ ಮೊದಲು, ಅಮೆರಿಕ ಅಮೆರಿಕನ್ನರಿಗೆ ಮುಂತಾದ ಘೋಷಣೆಗಳಿಂದ ಅಧಿಕಾರಕ್ಕೇರಿರುವ ಟ್ರಂಪ್ ಯಾವಾಗ ಏನು ನಿರ್ಧಾರ ಕೈಗೊಳ್ಳುತ್ತಾರೆ ಎನ್ನುವುದು ಅನೂಹ್ಯ. ಒಂದೊಂದಾಗಿ ಅಮೆರಿಕ ಮಾಡಿಕೊಂಡಿದ್ದ ಒಪ್ಪಂದಗಳಿಂದ, ವಿಶ್ವಸಂಸ್ಥೆಯ ಅಂಗ ಸಂಸ್ಥೆಗಳಿಂದ ಹೊರಬೀಳುತ್ತಿದೆ. ಇರಾನಿನೊಂದಿಗೆ ಮಾಡಿಕೊಂಡಿದ್ದ ಪರಮಾಣು ಒಪ್ಪಂದವನ್ನು ಏಕಪಕ್ಷೀಯವಾಗಿ ರದ್ದುಗೊಳಿಸಿರುವ ಅಧ್ಯಕ್ಷ ಟ್ರಂಪ್ ಮತ್ತೊಮ್ಮೆ ಆ ದೇಶದ ಮೇಲೆ ಆರ್ಥಿಕ ದಿಗ್ಬಂಧನ ಹೇರಿದ್ದಾರೆ. ಯೂರೋಪಿಯನ್ ಯೂನಿಯನ್ ಹಾಗೂ ಇತರ ದೇಶಗಳು ಈ ಕ್ರಮವನ್ನು ತೀವ್ರವಾಗಿ ವಿರೋಧಿಸಿವೆ, ಸಹಕರಿಸಲು ನಿರಾಕರಿಸಿವೆ. ಈಗ ವಾಣಿಜ್ಯ ಸಮರ ಸಾರಿ 'ಡಬ್ಲ್ಯೂಟಿಒ' ವ್ಯವಸ್ಥೆಯನ್ನೇ ಬುಡ ಮೇಲು ಮಾಡಲು ಹೊರಟಿದ್ದಾರೆ ಟ್ರಂಪ್. ಇದಕ್ಕೆ ಸಾರ್ವತ್ರಿಕವಾದ ವಿರೋಧವಿದೆ.




ಚೀಣಾವನ್ನು ಗುರಿಯಾಗಿರಿಸಿಕೊಂಡು ಕೆಲ ತಿಂಗಳ ಹಿಂದೆ ಪ್ರಾರಂಭವಾದ ಸುಂಕ ಸಮರ ಇತರ ದೇಶಗಳಿಗೂ ವಿಸ್ತರಿಸಿದೆ. ಚೀಣಾದೊಂದಿಗೆ ವಾಣಿಜ್ಯ ಸಂಬಂಧಗಳಲ್ಲಿ ಅಮೆರಿಕ ಪಾವತಿಸಬೇಕಾಗಿರುವ ಮೊತ್ತದಲ್ಲಿ ತೀವ್ರ ಕೊರತೆ ಇದೆ. ಚೀಣಾದಿಂದ ಅಮೆರಿಕಾಗೆ ಆಮದಾಗುವ ಸರಕುಗಳ ಮೇಲೆ ಶೇಕಡ ೨೫ರಷ್ಟು ತೆರಿಗೆ ಹೆಚ್ಚಿಸಲಾಗಿದೆ. ಪ್ರತಿ ವರ್ಷ ಅಮೆರಿಕಾಗೆ ಚೀಣಾದಿಂದ ಹೆಚ್ಚು ಕಡಿಮೆ ೫೦೦ ಬಿಲಿಯ ಡಾಲರುಗಳಷ್ಟು ಸರಕುಗಳು ರಫ್ತಾಗುತ್ತವೆ. ಅಮೆರಿಕದ ಈ ಕ್ರಮವನ್ನು ಚೀಣ 'ಆರ್ಥಿಕ ವ್ಯವಹಾರಗಳ ಇತಿಹಾಸದಲ್ಲಿ ಅತಿ ದೊಡ್ಡ ವಾಣಿಜ್ಯ ಸಮರ' ಎಂದು ಬಣ್ಣಿಸಿದೆ. ಅಮೆರಿಕದ ಸುಂಕದ ನೀತಿಗೆ ಪ್ರತಿಯಾಗಿ ಚೀಣಾ ಅಮೆರಿಕದಿಂದ ಆಮದು ಮಾಡಿಕೊಳ್ಳುತ್ತಿರುವ ಸರಕುಗಳ ಮೇಲೆ ಸುಂಕ ವಿಧಿಸಿದೆ. ಕಳೆದ ಜೂನ್ ತಿಂಗಳಲ್ಲಿ ಅಮೆರಿಕ ಯೂರೋಪಿಯನ್ ಯೂನಿಯನ್ ಕೆನಡಾ ಮತ್ತು ಮೆಕ್ಸಿಕೋದಿಂದ ತರಿಸಿಕೊಳ್ಳುವ ಉಕ್ಕು ಮತ್ತು ಅಲ್ಯೂಮಿನಿಯಂ ಮೇಲೆ ಸುಂಕ ಏರಿಸಿದರು. ಇದಕ್ಕೆ ಪ್ರತಿಯಾಗಿ ಆ ದೇಶಗಳು ಅಮೆರಿಕದಿಂದ ಆಮದು ಮಾಡಿಕೊಳ್ಳುತ್ತಿದ್ದ ಸರಕುಗಳ ಮೇಲೆ ಸುಂಕ ವಿಧಿಸಿವೆ. ಈ ದೇಶಗಳು ಅಮೆರಿಕದಿಂದ ಸುಮಾರು ೨೭ ಬಿಲಿಯ ಡಾಲರುಗಳಷ್ಟು ಸರಕುಗಳನ್ನು ಆಮದು ಮಾಡಿಕೊಳ್ಳುತ್ತಿವೆ.



ಈಚೆಗೆ ಕೆನಡಾದ ಕ್ವಿಬೆಕ್ ಪ್ರಾಂತದಲ್ಲಿ ಜರುಗಿದ ಏಳು ಶ್ರೀಮಂತ ರಾಷ್ಟ್ರಗಳ ನಾಯಕರ ಸಮಾವೇಶದಲ್ಲಿ ಡೋನಾಲ್ಡ್ ಟ್ರಂಪ್‌ರವರ ವಾಣಿಜ್ಯ ಸಮರ ಪ್ರಸ್ತಾಪಕ್ಕೆ ಬಂದಿತ್ತು. ಟ್ರಂಪ್ ವಿಶ್ವ ವಾಣಿಜ್ಯ ಸಂಸ್ಥೆಯೊಂದಿಗೆ ಅಮೆರಿಕ ಮಾಡಿಕೊಂಡಿರುವ ಒಪ್ಪಂದ ಅತ್ಯಂತ ಕೆಟ್ಟದ್ದು ಎಂದು ಬಣ್ಣಿಸಿದ್ದಾರೆ. 'ಡಬ್ಲ್ಯೂಟಿಒ' ಸರ್ವನಾಶಕಾರಿ ಸಂಸ್ಥೆ ಎಂದು ೨೦೧೮ರ ಆದಿಯಲ್ಲೇ ಅವರು ಹೇಳಿದ್ದರು. ಈಗ ತಾನೇ ಉಪಕ್ರಮಿಸಿ, ಸ್ಥಾಪಿಸಿದ ಜಾಗತಿಕ ಸಂಸ್ಥೆಯನ್ನು ಬುಡಮೇಲು ಮಾಡಲು ಹೊರಟಿದೆ ಅಮೆರಿಕ ಟ್ರಂಪ್ ಆಡಳಿತದಲ್ಲಿ. ಅಧಿಕಾರಕ್ಕೆ ಬಂದ ಮೇಲೆ 'ಡಬ್ಲ್ಯೂಟಿಒ'ದ ಒಂದೊಂದು ನಿಯಮವನ್ನೂ ಟ್ರಂಪ್ ಉಲ್ಲಂಘಿಸುತ್ತಿದ್ದಾರೆ. ಈ ವಾಣಿಜ್ಯ ಸಂಘಟನೆಯ ನ್ಯಾಯಾಲಯಕ್ಕೆ ನೇಮಕವನ್ನು ತಡೆಹಿಡಿದಿದ್ದಾರೆ. ಈ ನ್ಯಾಯಾಲಯವು ವಾಣಿಜ್ಯ ವಿವಾದವನ್ನು ವಿಚಾರಣೆ ನಡೆಸಿ ಬಗೆಹರಿಸುವುದರಲ್ಲಿ ನಿರತವಾಗಿತ್ತು. ಈಗ ನ್ಯಾಯಾಲಯದ ಕಲಾಪಗಳು ಟ್ರಂಪ್ ನಿರ್ಧಾರದಿಂದಾಗಿ ಸ್ಥಗಿತಗೊಂಡಿವೆ. ಭಯೋತ್ಪಾದಕರು ನ್ಯೂಯಾರ್ಕ್ ನಗರದಲ್ಲಿರುವ ಡಬ್ಲ್ಯೂಟಿಒ ಕಟ್ಟಡದ ಮೇಲೆ ದಾಳಿ ನಡೆಸಿ ಧ್ವಂಸ ಮಾಡಿದರು, ಈಗ ಅಧ್ಯಕ್ಷ ಟ್ರಂಪ್ 'ಡಬ್ಲ್ಯೂಟಿಒ' ವ್ಯವಸ್ಥೆಯನ್ನೇ ಧ್ವಂಸ ಮಾಡಲು ಹೊರಟಿದ್ದಾರೆ.

ಜಾಗತೀಕರಣಗೊಂಡಿರುವ ಜಗತ್ತಿನಲ್ಲಿ ಈ ಸುಂಕದ ಸಮರ ಆರ್ಥಿಕಾಭಿವೃದ್ಧಿಗೆ ಮಾರಕವಾಗುವುದು ಖಚಿತ. ಅನಿಶ್ಚಿತ ಪರಿಣಾಮಗಳನ್ನುಂಟುಮಾಡುವ ಈ ವಾಣಿಜ್ಯ ಸಮರ ಎಲ್ಲಿಗೆ ಮುಟ್ಟುವುದೋ ನೋಡಬೇಕು. ಅಧ್ಯಕ್ಷ ಟ್ರಂಪ್ ಆಡಳಿತದಲ್ಲಿ ಇನ್ನೂ ಏನೇನು ಕಾದಿದೆಯೋ! ಶೀತಯುದ್ಧ ಕಾಲದಲ್ಲಿ ಅಸ್ತಿತ್ವಕ್ಕೆ ಬಂದದ್ದು ಪಶ್ಚಿಮ ರಾಷ್ಟ್ರಗಳ ಮಿಲಿಟರಿ ಕೂಟ 'ಉತ್ತರ ಅಟ್ಲಾಂಟಿಕ್ ಕೌಲು ಸಂಘಟನೆ' (ನ್ಯಾಟೋ). ಇದರಲ್ಲಿ ಅಮೆರಿಕದ ಪಾಲು, ಪ್ರಾಧಾನ್ಯತೆಯೇ ಹೆಚ್ಚು. ಈಗ ಈ ಮಿಲಿಟರಿ ಕೂಟಕ್ಕೆ ಸದಸ್ಯರಾಗಿರುವ ರಾಷ್ಟ್ರಗಳು ತಮ್ಮ ಮಿಲಿಟರಿ ವೆಚ್ಚವನ್ನು ಹೆಚ್ಚಿಸಬೇಕೆಂದು ಅಧ್ಯಕ್ಷ ಟ್ರಂಪ್ ಒತ್ತಡ ಹೇರುತ್ತಿದ್ದಾರೆ. ಜಗತ್ತಿನ ಹಲವು ದೇಶಗಳಲ್ಲಿ ಅಮೆರಿಕದ ಸೈನಿಕ ನೆಲೆಗಳಿವೆ. ಬೇರಾವ ರಾಷ್ಟ್ರವೂ ಅಂಥ ವ್ಯವಸ್ಥೆಯನ್ನು ಹೊಂದಿಲ್ಲ.

ಅಮೆರಿಕದೊಂದಿಗೆ ಸಖ್ಯ ಬೆಳೆಸಿ, ಪ್ರಮುಖ ಪಾಲುದಾರನಾಗಲು ಹವಣಿಸುತ್ತಿರುವ ಭಾಜಪ ನೇತೃತ್ವದ ಭಾರತ ಸರಕಾರ ಮುಂದೆ ಎಚ್ಚರಿಕೆಯ ಹೆಜ್ಜೆ ಇರಿಸಬೇಕಾಗಿದೆ. ಈಗಾಗಲೇ ಇರಾನಿನಿಂದ ಆಮದು ಮಾಡಿಕೊಳ್ಳುತ್ತಿರುವ ತೈಲವನ್ನು ಸ್ಥಗಿತಗೊಳಿಸಲು ಅಮೆರಿಕ ಒತ್ತಡ ತರುತ್ತಿದೆ. ಈಗಾಗಲೇ ಭಾರತದ ಗ್ರಾಹಕರು ಬಳಸುವ ತೈಲಕ್ಕೆ ಅಧಿಕ ಬೆಲೆ ನೀಡಿ ಪರಿತಪಿಸುತ್ತಿದ್ದಾರೆ. ಅಮೆರಿಕ ಇದೀಗ ಪ್ರಾರಂಭಿಸಿರುವ ವಾಣಿಜ್ಯ ಸಮರದ ಪರಿಣಾಮಗಳನ್ನು ಮೋದಿ ಸರಕಾರ ಎದುರಿಸಬೇಕಾಗಿದೆ. ಪ್ರಾಯಶಃ ಈ ಸಮರ ಜಾಗತೀಕರಣದ ಅಂತ್ಯಕ್ಕೆ ನಾಂದಿಯಾದೀತು.

**ಸೀಯಾರ್ಕೆ**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫

# ದೆಹಲಿಯ ಕೆಂಪುಕೋಟೆಯ ಖಾಸಗೀಕರಣ

**ಮುರಳಿಧರ ಚಿಕ್ಕಮಗಳೂರು**

**೨೦೧೪ರ** ಲೋಕಸಭಾ ಚುನಾವಣೆಯಲ್ಲಿ ಪೊಳ್ಳು ಘೋಷಣೆಗಳ ಮಹಾಪೂರ ಹರಿಸಿ ಭಕ್ತರನ್ನು ಉನ್ಮಾದಗೊಳಿಸಿ ಅಮಾಯಕರನ್ನು ಭ್ರಮಾಧೀನರನ್ನಾಗಿಸಿ ಕೇವಲ ಶೇಕಡ ೩೧ರಷ್ಟು ಮತ ಗಳಿಸಿದ್ದರೂ ಏಕಮೇವ ಚಕ್ರಾಧಿಪತಿಯಂತೆ ಅಧಿಕಾರದ ಚುಕ್ಕಾಣಿ ಹಿಡಿದ ನರೇಂದ್ರ ಮೋದಿ ಅದೇ ವರ್ಷದ ಸ್ವಾತಂತ್ರ್ಯ ದಿನದಂದು ದೆಹಲಿಯ ಕೆಂಪುಕೋಟೆ ಏರಿ ನಿಂತು ಜಗತ್ತಿನ ಎಲ್ಲ ರಾಷ್ಟ್ರಗಳ ಬಂಡವಳಿಗರನ್ನು ಭಾರತದಲ್ಲಿ ಬಂಡವಾಳ ಹೂಡಲು ಕೈ ಬೀಸಿ ಕರೆದದ್ದು ಮತ್ತು ಅವರು ಬರದೇ ಇದ್ದುದು ಈಗ ಹಳೆಯ ಕಥೆ. ಈಗ ಮತ್ತೊಮ್ಮೆ ೨೦೧೮ರ ಸ್ವಾತಂತ್ರ್ಯ ದಿನದಂದು ಅದೇ ಕೆಂಪುಕೋಟೆಯ "ತುಳಿದು" ನಿಂತು "ದೇಶ ಬದಲಾಗುತ್ತಿದೆ" "ಅಭಿವೃದ್ಧಿ" "ಒಳ್ಳೆಯ ದಿನಗಳು" ಇತ್ಯಾದಿ ಘೋಷಣೆಗಳ ಹಳೆಯ ಮದ್ಯವನ್ನು ಹೊಸ ಬಾಟಲಿಯಲ್ಲಿ ಹಾಕಿ ಹಂಚಲಿದ್ದಾರೆ. ಚರಿತ್ರೆಯನ್ನು ಬದಲಾಯಿಸಿ ಬಿಟ್ಟರೆ ದೇಶವನ್ನೇ ಬದಲಾಯಿಸಿದಂತೆ, ಒಳ್ಳೆಯ ದಿನಗಳು ಬಂದಂತೆ, ದೇಶದ ಅಭಿವೃದ್ಧಿಯಾದಂತೆ ಎಂಬುದು ಸಂಘ ಪರಿವಾರದ ಮತ್ತು ಅದರ ಪ್ರಚಾರಕ ನರೇಂದ್ರ ಮೋದಿಯವರ ಗಾಢ ನಂಬಿಕೆ. ಹಾಗಾಗಿ ಭಾರತದ ಇತಿಹಾಸವನ್ನು ಬದಲಾಯಿಸುವುದೇ ನರೇಂದ್ರ ಮೋದಿಯ ನಿತ್ಯ ಕಾಯಕವಾಗಿ ಬಿಟ್ಟಿದೆ. ಈ ನಂಬಿಕೆಯ ಫಲವೇ ೧೬ನೇ ಶತಮಾನದ ಬಾಬ್ರಿ ಮಸೀದಿ ೧೯೯೨ರಲ್ಲಿ ನೆಲಸಮಗೊಂಡಿದ್ದು, ೨೦೦೨ರ ಗುಜರಾತ್ ಹತ್ಯಾಕಾಂಡ ನಡೆದದ್ದು.

**ಬಹುತ್ವ ಸಂಸ್ಕೃತಿಯ ಮೇಲೆ ಏಕತ್ವದ ದಾಳಿ**

ನರೇಂದ್ರ ಮೋದಿ ಪ್ರಧಾನ ಮಂತ್ರಿಯಾದ ನಂತರ ಭಾರತದ ಚರಿತ್ರೆಯನ್ನು ತಿರುಚಿ ಹೊಸ ಚರಿತ್ರೆಯನ್ನು ಬರೆಯುವ ಪ್ರಕ್ರಿಯೆ ನಿರಂತರವಾಗಿ ಮತ್ತು ಅಧಿಕೃತವಾಗಿ ನಡೆಯುತ್ತಿದೆ. ಪುರಾಣವೇ ಇತಿಹಾಸವಾಗಿ ಪರಿವರ್ತಿತವಾಗುತ್ತಿದೆ. ಮತೀಯ ಸಾಮರಸ್ಯಕ್ಕೆ ಹೆಸರಾದ ಮೊಘಲ್ ದೊರೆ ಅಕ್ಬರ್ ಮತಾಂಧನಾಗಿದ್ದನೆಂದು ಪ್ರಚಾರ ಮಾಡಲಾಗುತ್ತಿದೆ. ಬ್ರಿಟಿಷರ ವಿರುದ್ಧ ಹೋರಾಡಿ ದೇಶ ಪ್ರೇಮ ಮೆರೆದ ಟಿಪ್ಪು ಸುಲ್ತಾನನನ್ನು ಹಿಂದು ದ್ವೇಷಿ ಎಂದು ಚಿತ್ರಿಸಲಾಗುತ್ತಿದೆ. ಉತ್ತರ ಪ್ರದೇಶದಲ್ಲಿ ಮದರಸಾಗಳಿಗೆ ಕೇಸರಿ ಬಣ್ಣ ಬಳಿಯಲಾಗುತ್ತಿದೆ. ಬ್ರಿಟಿಷ್ ಅಧಿಕಾರಿಗಳಿಗೆ ತನ್ನನ್ನು ಕಾರಾಗೃಹದಿಂದ ಬಿಡುಗಡೆ ಮಾಡಬೇಕೆಂದು ಅಂಗಲಾಚಿದ್ದ ದಾಮೋದರ ಸಾವರ್ಕರ್ ಮತ್ತು ಮಹಾತ್ಮ ಗಾಂಧಿಯನ್ನು ಗುಂಡಿಕ್ಕಿ ಕೊಂದ ನಾಥೂರಾಮ್ ಗೋಡ್ಸೆಯನ್ನು ದೇಶಪ್ರೇಮಿಗಳನ್ನಾಗಿ ಪರಿವರ್ತಿಸಿಬಿಟ್ಟಿದ್ದಾರೆ. ಮುಗ್ಧ ವಿದ್ಯಾರ್ಥಿಗಳು ಓದುವ ಪಠ್ಯಪುಸ್ತಕಗಳಲ್ಲಿ ಮೊಘಲ್ ದೊರೆಗಳು ಹಿಂದು ವಿರೋಧಿಗಳೆಂದು ವಿವರಿಸಲಾಗಿದೆ. ಹಿಂದು ದೇವಾಲಯಗಳನ್ನು ಕೆಡವಿ ಅವುಗಳ ಮೇಲೆ ಮಸೀದಿಗಳನ್ನು ಕಟ್ಟಲಾಗಿದೆ ಎಂಬ ಭಾವನೆಗಳನ್ನು ಕೆಣಕುವ ಪ್ರಚಾರವಂತೂ ವ್ಯವಸ್ಥಿತವಾಗಿ ಮತ್ತು ಬಿರುಸಾಗಿ ಸಾಗುತ್ತಿದೆ. ಇದಕ್ಕೆ ಪೂರಕವಾಗಿ ಭಾರತೀಯ ಇತಿಹಾಸ ಸಂಶೋಧನಾ ಮಂಡಲಿಗೆ ಸಂಘ ಪರಿವಾರದ ಅಳಲೆಕಾಯಿ ಪಂಡಿತರನ್ನು ತುರುಕಲಾಗಿದೆ. ಮೋದಿ ಆಳ್ವಿಕೆಯಲ್ಲಿ ನಿಜಕ್ಕೂ ಭಾರತ ಬದಲಾಗುತ್ತಿದೆ. ಬಹುತ್ವ ಸಂಸ್ಕೃತಿಯ ಮೇಲೆ ಏಕತ್ವದ ದಾಳಿ ನಡೆಯುತ್ತಿದೆ. ಸಂವಿಧಾನದ ಆಶಯಗಳನ್ನು ಗಾಳಿಗೆ ತೂರಲಾಗಿದೆ.

**ಕೆಂಪುಕೋಟೆ ಪಾರಂಪರಿಕ ಸ್ಮಾರಕ**

ಸಂಘ ಪರಿವಾರದ "ಹಿಟ್ ಲಿಸ್ಟ್"ನಲ್ಲಿ ಬಾಬ್ರಿ ಮಸೀದಿಯಲ್ಲದೆ ಇನ್ನೂ ಅನೇಕ ಮೊಘಲ್ ಆಳ್ವಿಕೆಯ ಪಾರಂಪರಿಕ ಸ್ಮಾರಕಗಳು ಸೇರಿವೆ. ಅವುಗಳಲ್ಲಿ ಈಗ ಸಂಘ ಪರಿವಾರದ ಗುರಿಗೆ ಸಿಕ್ಕಿರುವುದು ದೆಹಲಿಯ ಪ್ರಖ್ಯಾತ ಕೆಂಪುಕೋಟೆ. ಈ ಕೋಟೆಗೆ ಸುದೀರ್ಘ ಇತಿಹಾಸವಿದೆ. ೧೬೪೮ನೇ ಇಸವಿಯಲ್ಲಿ ಐದನೇ ಮೊಘಲ್ ದೊರೆ ಶಹಜಹಾನ್ ತನ್ನ ರಾಜಧಾನಿಯನ್ನು ಆಗ್ರಾದಿಂದ ದೆಹಲಿಗೆ ಸ್ಥಳಾಂತರಗೊಳಿಸುವ ಸಲುವಾಗಿ ಕೆಂಪುಕೋಟೆಯನ್ನು ಕಟ್ಟಿದ್ದು. ೧೮೫೭ರ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬಹಾದೂರ್ ಶಾ ಜಫರ್‌ನ ನೇತೃತ್ವದಲ್ಲಿ ಬ್ರಿಟಿಷ್ ಸೇನೆಯ ವಿರುದ್ಧ ಹೋರಾಡಿ ಮಡಿದ ಹುತಾತ್ಮ ಯೋಧರ ಚರಿತ್ರೆಯನ್ನೊಳಗೊಂಡಿದೆ. ೧೯೪೭ರ ಆಗಸ್ಟ್ ೧೫ರಂದು ದೇಶ ಗಳಿಸಿದ ಸ್ವಾತಂತ್ರ್ಯವನ್ನು ಜಗತ್ತಿಗೆ ಘೋಷಿಸಲು



ಪಂಡಿತ್ ಜವಹರ್‌ಲಾಲ್ ನೆಹರು ಹತ್ತಿದ್ದು ಕೆಂಪುಕೋಟೆಯನ್ನು. ಇದು ಕೆಂಪುಕೋಟೆಯ ಇತಿಹಾಸ, ಪರಂಪರೆ ಹಾಗೂ ಹಿರಿಮೆ. ಆದಕಾರಣವೇ ಯುನೆಸ್ಕೊ ೨೦೦೭ರಲ್ಲಿ ಕೆಂಪುಕೋಟೆಯನ್ನು "ಜಾಗತಿಕ ಪಾರಂಪರಿಕ ಸ್ಮಾರಕ" ಎಂದು ಘೋಷಿಸಿತು. ಕೇಂದ್ರ ಸರ್ಕಾರದ ಆರ್ಕಿಯೊಲಾಜಿಕಲ್ ಸರ್ವೆ ಆಫ್ ಇಂಡಿಯಾ ಕೆಂಪುಕೋಟೆಯ ಜವಾಬ್ದಾರಿ ಮತ್ತು ಉಸ್ತುವಾರಿಯನ್ನು ವಹಿಸಿಕೊಂಡಿತ್ತು. ಸಾಕಷ್ಟು ಶ್ರಮ ವಹಿಸಿ ದೇಶೀಯ ಮತ್ತು ವಿದೇಶೀಯ ಪ್ರವಾಸಿಗರಿಗೆ ಕೆಂಪುಕೋಟೆಯ ಹೊರಾವರಣ ಮತ್ತು ಒಳಾವರಣಗಳಲ್ಲಿ ಅನೇಕ ಸೌಲಭ್ಯಗಳನ್ನು ಒದಗಿಸಿಕೊಟ್ಟಿತ್ತು. ಈ ಕೋಟೆಯ ಚರಿತ್ರೆಯನ್ನು ಸಾರುವ ಬೆಳಕು–ಧ್ವನಿ ಪ್ರದರ್ಶನ ಪ್ರವಾಸಿಗರಿಗೆ ಮುಖ್ಯ ಆಕರ್ಷಣೆಯಾಗಿದೆ. ಮೊಘಲ್ ಆಳ್ವಿಕೆಯ ಸಾಂಸ್ಕೃತಿಕ ಕೊಡುಗೆಯನ್ನು ನೆನಪಿಸುತ್ತದೆ. ಮೋದಿ ಸರ್ಕಾರದ ತೀರ್ಮಾನ, ಭಾರತ ಬದಲಾಗ ಬೇಕೆಂದರೆ ಕೆಂಪುಕೋಟೆಯ ಇತಿಹಾಸ ಸ್ಮರಣೆ ನಿಲ್ಲಲೇಬೇಕು ಎಂಬುದಾಗಿದೆ !

**ಪಾರಂಪರಿಕ ಸ್ಮಾರಕ – ದತ್ತು ಯೋಜನೆ**

ನರೇಂದ್ರ ಮೋದಿಗೆ ಸಂಘ ಪರಿವಾರದ ಸೇವೆಯೇ ದೇಶ ಸೇವೆ. ಕಳೆದ ವರ್ಷ ಸೆಪ್ಟೆಂಬರ್ ೨೭ರಂದು "ಜಾಗತಿಕ ಪ್ರವಾಸಿ ದಿನ" ಆಚರಣೆಯ ಸಂದರ್ಭದಲ್ಲಿ "ಒಂದು ಪಾರಂಪರಿಕ ಸ್ಮಾರಕ ದತ್ತು ತೆಗೆದುಕೊಳ್ಳಿ" ಎಂದು ಮೋದಿ ಕಾರ್ಪೊರೇಟ್ ದಣಿಗಳಿಗೆ ಕರೆಕೊಟ್ಟರು. ಮೋದಿ ಸರ್ಕಾರದ ಇಂತಹ ಯೋಜನೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಲ್ಲಿ ಸರ್ಕಾರ ಅದನ್ನು ಎಷ್ಟೇ ಮರೆಮಾಚಲು ಪ್ರಯತ್ನಿಸಿದರೂ ಅದರಲ್ಲಿ ಅಡಗಿರುವ ಸಂಘ ಪರಿವಾರದ ಕುತಂತ್ರಗಳು ಗಮನಕ್ಕೆ ಬಾರದೆ ಹೋಗುವುದಿಲ್ಲ. "ಪಾರಂಪರಿಕ ಸ್ಮಾರಕ – ದತ್ತು" ಯೋಜನೆಗೆ ಸಿಕ್ಕ ಮೊದಲ ಬೇಟೆಯೆಂದರೆ ದೆಹಲಿಯ ಕೆಂಪುಕೋಟೆ.

**ದಾಲ್ಮಿಯ – ಕೇಸರಿ ಕೋಟೆ**

ದೆಹಲಿಯ ಕೆಂಪುಕೋಟೆ ಮತ್ತು ಆಂಧ್ರಪ್ರದೇಶದ ಕಡಪ ಜಿಲ್ಲೆಯ ಗಂಡಿಕೋಟ ಕೋಟೆಯನ್ನು ಭಾರತ ಸರ್ಕಾರದ ಸಂಸ್ಕೃತಿ ಮಂತ್ರಾಲಯ ಇಪ್ಪತ್ತೈದು ಕೋಟಿ ರೂಪಾಯಿಗೆ ಐದು ವರ್ಷದ ಅವಧಿಗೆ ದಾಲ್ಮಿಯ – ಭಾರತ್ ಗ್ರೂಪ್ ಸಂಸ್ಥೆಗೆ ದತ್ತು ನೀಡಿದೆ. ಈ ನಿಟ್ಟಿನಲ್ಲಿ ಸಂಸ್ಕೃತಿ ಮಂತ್ರಾಲಯ, ಆರ್ಕಿಯೊಲಾಜಿಕಲ್ ಸರ್ವೆ ಆಫ್ ಇಂಡಿಯಾ ಮತ್ತು ದಾಲ್ಮಿಯ ಭಾರತ್ ಸಂಸ್ಥೆ ೯, ಏಪ್ರಿಲ್ ೨೦೧೮ರಂದು ಒಪ್ಪಂದಕ್ಕೆ ಸಹಿ ಹಾಕಿವೆ. ಈ ಒಪ್ಪಂದದ ಪ್ರಕಾರ ಕೆಂಪುಕೋಟೆಯ ಪ್ರವೇಶ ಶುಲ್ಕವನ್ನು ದಾಲ್ಮಿಯ ಭಾರತ್ ಸಂಸ್ಥೆಯೇ ನಿರ್ಧರಿಸಬಹುದು. ಕೋಟೆಯ ಆವರಣದಲ್ಲಿ ಬದಲಾವಣೆಗಳನ್ನು ಸಂಸ್ಥೆಯವರು ಕೈಗೊಳ್ಳಬಹುದು. ಅಂತಹ ಸಂದರ್ಭದಲ್ಲಿ ಕೋಟೆಗೆ ಹಾನಿಯಾದರೆ ಮತ್ತು ಪುಂಡರು ಕೋಟೆಯನ್ನು ಛಿದ್ರಗೊಳಿಸಿದಲ್ಲಿ (ಬಾಬ್ರಿ ಮಸೀದಿಯ ತರಹ!) ಅದಕ್ಕೆ ದಾಲ್ಮಿಯ ಸಂಸ್ಥೆ ಹೊಣೆಗಾರರಲ್ಲ. ಕೋಟೆಯ ಪ್ರಮುಖ ಸ್ಥಳಗಳಲ್ಲಿ ಸಂಸ್ಥೆ ತನ್ನ ಕಂಪನಿಗಳ ಜಾಹೀರಾತುಗಳನ್ನು ಪ್ರದರ್ಶಿಸಬಹುದು, ಇಷ್ಟೆಲ್ಲ ಷರತ್ತುಗಳು ದಾಲ್ಮಿಯ ಸಂಸ್ಥೆಯ ಪರ ಇದ್ದರೂ, ಕೆಂಪುಕೋಟೆಯ ಉಳಿವು ಮತ್ತು ಪ್ರವಾಸಿಗರ ಹಿತ ತಮ್ಮ ಮುಖ್ಯ ಉದ್ದೇಶವೆಂದು ಸಂಸ್ಕೃತಿ ಮಂತ್ರಾಲಯ ಹೇಳಿಕೆ ನೀಡಿದೆ! ನಾಚಿಕೆಗೇಡಿನ ಸಂಗತಿಯೆಂದರೆ ಕೇವಲ ಇಪ್ಪತ್ತೈದು ಕೋಟಿ ರೂಪಾಯಿಗೆ ಭಾರತದ ವಜ್ರ ಮುಕುಟ ಎಂದು ಪ್ರಸಿದ್ಧವಾಗಿರುವ ಕೆಂಪುಕೋಟೆಯ ಆಧಿಪತ್ಯವನ್ನು ಹೊಣೆ ರಹಿತವಾಗಿ "ಸ್ಮಾರಕ ಮಿತ್ರ" ದಾಲ್ಮಿಯ ಸಂಸ್ಥೆಗೆ ವಹಿಸಿಕೊಟ್ಟಿರುವುದು. ಕೆಂಪುಕೋಟೆಯ ವಾರ್ಷಿಕ ಆದಾಯ ಸುಮಾರು ಆರು ಕೋಟಿ ರೂಪಾಯಿ. ಅಂದರೆ ಐದು ವರ್ಷದ ಅವಧಿಗೆ ಮೂವತ್ತು ಕೋಟಿ ರೂಪಾಯಿ. ಅಂದರೆ ಒಂದು ಬಿಡಿಗಾಸೂ ಕೊಡದೆ ಕೆಂಪುಕೋಟೆಯಂತಹ ಆಕರ್ಷಣೀಯ ಪ್ರವಾಸಿ ತಾಣವನ್ನು ದಾಲ್ಮಿಯಾ ಸಂಸ್ಥೆ ತನ್ನ ಕಂಪನಿಗಳ ಜಾಹೀರಾತಿಗೆ ಉಪಯೋಗಿಸಿಕೊಳ್ಳುವ ಅವಕಾಶ ದಕ್ಕಿಸಿಕೊಂಡಿದೆ. ಶಹಜಹಾನನ ಕೆಂಪುಕೋಟೆ ದಾಲ್ಮಿಯ ಭಾರತ್‌ನ ಕೇಸರಿ ಕೋಟೆಯಾಗುವ ದಿನಗಳು ದೂರವಿಲ್ಲ.

**ಕಾರ್ಪೊರೇಟ್ ಯಜಮಾನಿಕೆ**

ಮೋದಿ ಸರ್ಕಾರ ಕೆಂಪುಕೋಟೆಯನ್ನು ಖಾಸಗಿಯವರಿಗೆ ಹರಾಜು ಮಾಡಿದೆ ಎಂಬುದು ಒಂದು ಟೀಕೆಯಾದರೆ ಈ ಕ್ರಮ ಇತಿಹಾಸವನ್ನು ತಿರುಚುವ ಮತ್ತೊಂದು ಯೋಜನೆಯೆಂದು ಪ್ರಜ್ಞಾವಂತರ ತೀವ್ರ ಆಕ್ರೋಶಕ್ಕೆ ಒಳಗಾಗಿದೆ. ದೇಶದ ಪಾರಂಪರಿಕ ಸ್ಮಾರಕಗಳನ್ನು ಕಾರ್ಪೊರೇಟ್‌ಗಳಿಗೆ ಹರಾಜು ಮಾಡುವುದನ್ನು ಸಂಸ್ಕೃತಿ ಮಂತ್ರಾಲಯದ ಪಾರ್ಲಿಮೆಂಟರಿ ಸಮಿತಿ ಪ್ರಬಲವಾಗಿ ವಿರೋಧಿಸಿತ್ತು. ಸರ್ಕಾರ ಈಗಾಗಲೇ ತೊಂಭತ್ತಮೂರು ಪಾರಂಪರಿಕ ಸ್ಮಾರಕಗಳನ್ನು ಪಟ್ಟಿ ಮಾಡಿ ಕಾರ್ಪೊರೇಟ್‌ಗಳಿಗೆ ಹರಾಜು ಮಾಡಲು ಸನ್ನದ್ಧವಾಗಿದೆ. ಈ ಪಟ್ಟಿಯಲ್ಲಿ ಆಗ್ರಾದ ತಾಜ್‌ಮಹಲ್ ಸೇರಿದೆ. ದೇಶದ ಪಾರ್ಲಿಮೆಂಟ್ ಭವನ ಈ ಪಟ್ಟಿಯಲ್ಲಿಲ್ಲ. ಅದು ಎಂದೋ ಕಾರ್ಪೊರೇಟ್‌ಗಳ ಹಿಡಿತಕ್ಕೆ ಹೋಗಿಬಿಟ್ಟಿದೆ ಎಂಬುದು ಹಲವಾರು ಜನರ ಅಭಿಮತ. ದೇಶದ ಇತಿಹಾಸವನ್ನು ಬದಲಿಸುವ ಸಂಘ ಪರಿವಾರದ ಕಾರ್ಯಸೂಚಿಗೆ ಕಾರ್ಪೊರೇಟ್‌ಗಳು ಕೈ ಜೋಡಿಸಿದ್ದಾರೆ.

**ವಿಷ್ಣು ಹರಿ ದಾಲ್ಮಿಯ – ಬಾಬ್ರಿ ಮಸೀದಿ**

ದೆಹಲಿಯ ಕೆಂಪುಕೋಟೆಯನ್ನು ದತ್ತು ತೆಗೆದುಕೊಂಡಿರುವ ದಾಲ್ಮಿಯ ಭಾರತ್ ಸಂಸ್ಥೆಗೆ ಪಾರಂಪರಿಕ ಸ್ಮಾರಕಗಳನ್ನು ಉಳಿಸಿ ಅಭಿವೃದ್ಧಿಗೊಳಿಸುವ ಅನುಭವ ಇಲ್ಲ. ಆದರೆ ಮೊಘಲ್ ಕಾಲದ ಪಾರಂಪರಿಕ ಸ್ಮಾರಕಗಳನ್ನು ಉರುಳಿಸುವ ಅನುಭವ ಹೊಂದಿದೆ. ದಾಲ್ಮಿಯ ಸಂಸ್ಥೆಯ ವಿಷ್ಣು ಹರಿ ದಾಲ್ಮಿಯ ಕುಟುಂಬದ ಹಿರಿಯರು. ಇವರು ವಿಶ್ವ ಹಿಂದು ಪರಿಷತ್, ಅಂತರರಾಷ್ಟ್ರೀಯ ವಿಶ್ವ ಹಿಂದು ಪರಿಷತ್‌ನ ಅಧ್ಯಕ್ಷರಾಗಿದ್ದವರು. ಈಗ ಇವರು ವಿಶ್ವ ಹಿಂದು ಪರಿಷತ್‌ನ ಸಲಹಾ ಮಂಡಲಿಯ ಹಿರಿಯ ಸದಸ್ಯರು. ವಿಷ್ಣು ಹರಿ ದಾಲ್ಮಿಯ ಎಂಬಾತ ಬಾಬ್ರಿ ಮಸೀದಿ ಪ್ರಕರಣದಲ್ಲಿನ ಆರೋಪಿಗಳಲ್ಲೊಬ್ಬರು. ಇದೇ ವಿಷ್ಣು ಹರಿ ದಾಲ್ಮಿಯ ವಿಶ್ವ ಹಿಂದು ಪರಿಷತ್‌ನ ಅಧ್ಯಕ್ಷ ಅಶೋಕ್ ಸಿಂಘಾಲ್‌ಗೆ ಅವರ ತೊಂಭತ್ತನೇ ಜನ್ಮ ದಿನದಂದು ಕೇಂದ್ರ ಗೃಹ ಸಚಿವ ರಾಜನಾಥ್ ಸಿಂಗ್ ಅವರ ಸಮ್ಮುಖದಲ್ಲಿ ರಾಮ ಮಂದಿರವನ್ನು ಅವರಿಗೆ ಹುಟ್ಟುಹಬ್ಬದ ಕಾಣಿಕೆಯಾಗಿ ಸಲ್ಲಿಸಬೇಕೆಂದು ಪ್ರಧಾನಿ ಮೋದಿಯವರನ್ನು ಒತ್ತಾಯಿಸಿದ ಘಟನೆಯನ್ನು ಸ್ಮರಿಸಬಹುದು. ಬಾಬ್ರಿ ಮಸೀದಿ ಧ್ವಂಸ ಮಾಡಿದ ಪುಂಡರ ಜೊತೆ ಕೈ ಜೋಡಿಸಿದ ವಿಷ್ಣು ಹರಿ ದಾಲ್ಮಿಯ ಶಹಜಹಾನನ ಕೆಂಪುಕೋಟೆಯನ್ನು ರಕ್ಷಿಸುವರೇ?

**ಕೊಲೆಗಳ ಸರಣಿ**

ದೆಹಲಿಯ ಕೆಂಪುಕೋಟೆಯ ಬೆಳವಣಿಗೆಯು ಮೋದಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ನಂತರ ದೇಶದಾದ್ಯಂತ ಅಲ್ಪಸಂಖ್ಯಾತರು ಮತ್ತು ದಲಿತರ ಮೇಲೆ ನಡೆಯುತ್ತಿರುವ ದಾಳಿಯ ಇನ್ನೊಂದು ಭಾಗ ಅಷ್ಟೇ. ಉತ್ತರ ಪ್ರದೇಶದ ದದ್ರಿಯಲ್ಲಿ ಮೊಹಮದ್ ಅಖ್ಲಾಕನನ್ನು ತಿರುಚಿ ಕೊಂದದ್ದು, ಶಂಬುಲಾಲ್ ರೇಗರ್ ಎಂಬಾತ ಮುಸ್ಲಿಂ ವ್ಯಕ್ತಿಯೊಬ್ಬನನ್ನು ಯಾವ ಕಾರಣವೂ ಇಲ್ಲದೆ ತಿವಿದು ಕೊಂದು ಆತನ ಶರೀರಕ್ಕೆ ಪೆಟ್ರೋಲ್ ಸುರಿದು ಬೆಂಕಿ ಹಚ್ಚಿ ನರ್ತಿಸಿದ್ದು, ಜೋಧಪುರದಲ್ಲಿ ಈ ಕುಕೃತ್ಯವನ್ನು ಮೆಚ್ಚಿದ ಜನ ಅವನ ಫೋಟೋ ಹೊತ್ತು ಮೆರವಣಿಗೆ ತೆಗೆದದ್ದು, ಅವನ ಬ್ಯಾಂಕ್ ಖಾತೆಗೆ ಲಕ್ಷಾಂತರ ರೂಪಾಯಿ ಜಮಾ ಮಾಡಿದ್ದು, ದೆಹಲಿಯಿಂದ ತನ್ನೂರಿಗೆ ಪ್ರಯಾಣಿ ಸುತ್ತಿದ್ದ ಅಮಾಯಕ ಬಾಲಕ ಜುನೈದ್‌ನನ್ನು ರೈಲಿನಲ್ಲೇ ಕೊಲೆಗೈದದ್ದು, ಜಮ್ಮುನ ಕತುವಾನಲ್ಲಿ ಎಂಟು ವರ್ಷದ ಬಾಲಕಿಯ ಮೇಲೆ ಸಾಮೂಹಿಕ ಅತ್ಯಾಚಾರ ನಡೆಸಿದವರ ಪರವಾಗಿ ಪ್ರದರ್ಶನ ನಡೆಸಿದ್ದು, ಗುಜರಾತ್‌ನ ಊನದಲ್ಲಿ ನಾಲ್ಕು ದಲಿತ ಯುವಕರನ್ನು ಪೊಲೀಸರ ಸಮ್ಮುಖದಲ್ಲೇ ಥಳಿಸಿದ್ದು, ಇತ್ತೀಚೆಗೆ ಉತ್ತರ ಪ್ರದೇಶದ ಹರ್‌ಪುರದಲ್ಲಿ ೪೫ ವರ್ಷದ ಖಾಸಿಂನನ್ನು ತಿರುಚಿ ಕೊಂದದ್ದು, ಈ ಮುಂಚೆ ವಿಚಾರವಾದಿಗಳಾದ ನರೇಂದ್ರ ದಾಭೋಲ್ಕರ್, ಗೋವಿಂದ ಪನ್ಸಾರೆ, ಎಂ. ಎಂ. ಕಲ್ಬುರ್ಗಿ, ಗೌರಿ ಲಂಕೇಶ್‌ರನ್ನು ಹತ್ಯೆಗೈದಿದ್ದು, ಮುಂತಾದುವೆಲ್ಲಾ ಈ ದೇಶದಲ್ಲಿ ಕಳೆದ ನಾಲ್ಕು ವರ್ಷಗಳಲ್ಲಿ ಬೆಳೆದುನಿಂತಿರುವ ಅಸಹಿಷ್ಣುತೆ, ದ್ವೇಷ ಮತ್ತು ಮತಾಂಧತೆಗೆ ಕಣ್ಣಿಗೆ ಕಂಡ ನಿದರ್ಶನಗಳಾಗಿವೆ. ನರೇಂದ್ರ ಮೋದಿ ಎಂತಹ ಸಮಾಜಕ ವಿಭಜಕ ಶಕ್ತಿ ಎಂಬುದು ನಿಚ್ಚಳವಾಗಿ ಗೋಚರವಾಗಿದೆ.

**ಜನತೆಯ ಮುಂದಿರುವ ಸವಾಲು**

೨೦೧೯ರ ಚುನಾವಣೆಗೆ ಸಂಘ ಪರಿವಾರ ಮತ್ತು ಪ್ರಚಾರಕ ಮೋದಿಗಿರುವ ಸಾಮಗ್ರಿಯೆಂದರೆ ರಾಮ ಜನ್ಮ ಭೂಮಿ. ಆದರೆ ಸರ್ವೋಚ್ಚ ನ್ಯಾಯಾಲಯದಲ್ಲಿ ಬಾಕಿ ಇರುವ ಪ್ರಕರಣ ಅದಕ್ಕೆ ಅಡ್ಡಿಯಾಗಿದೆ. ಅದಿಲ್ಲದಿದ್ದಲ್ಲಿ ಭಾವನೆಗಳಿಗೆ ಕೊಳ್ಳಿ ಹಚ್ಚುವ ಮಗದೊಂದು ವಿಷಯಕ್ಕಾಗಿ ಹುಡುಕಾಟ ನಡೆದಿದೆ. ಲಕ್ನೋನಗರ "ಲಕ್ಷ್ಮಣ ಪುರಿ"ಯಾಗಬೇಕು. ಆ ನಗರದ ೩೫೦ ವರ್ಷಗಳ ಇತಿಹಾಸವಿರುವ ತೀಲ್‌ವಾಲಿ ಮಸೀದಿಯ ಮುಂದೆ ಲಕ್ಷ್ಮಣನ ಬೃಹತ್ ಪ್ರತಿಮೆ ಸ್ಥಾಪಿಸಬೇಕೆಂದು ಭಾರತೀಯ ಜನತಾ ಪಕ್ಷದ ಹಿಡಿತದಲ್ಲಿರುವ ಲಕ್ನೋ ನಗರಸಭೆ ತೀರ್ಮಾನಿಸಿದೆ. ಇತಿಹಾಸವನ್ನು ಬದಲಿಸಲು ಹೊರಟಿರುವ ನರೇಂದ್ರ ಮೋದಿಯ ಆಳ್ವಿಕೆಯನ್ನು ಕೊನೆಗೊಳಿಸಬೇಕಾದದ್ದು ಐತಿಹಾಸಿಕ ಅಗತ್ಯ.

**ಮುರಳೀಧರ ಚಿಕ್ಕಮಗಳೂರು**
ವಕೀಲರು, ನಂ. ೩, ೨ನೇ ಮಹಡಿ, ಡೈಯಾಗೊನಲ್ ರಸ್ತೆ, ವಿ.ವಿ.ಪುರಂ, ಬೆಂಗಳೂರು – ೪



# ಉಳುವಾ ಯೋಗಿಯ ನೋಡಲ್ಲಿ...

ರೈತರ ಆತ್ಮಹತ್ಯೆಗಳು ದಿನನಿತ್ಯದ ಸುದ್ದಿಗಳಾಗುತ್ತಿರುವ ಸಂದರ್ಭದಲ್ಲಿ, ಸರಕಾರಗಳು ರೈತನ ಸಾಲ ಮನ್ನಾ ಕುರಿತು ಮಾತನಾಡುವ ದಿನಗಳಲ್ಲಿ, ದೇಶದ ಶೇಕಡಾ ೪೪ ಅಂದರೆ ಅರ್ಧಕ್ಕಿಂತ ಹೆಚ್ಚಿನ ರೈತರು ಕೃಷಿಯನ್ನೇ ತೊರೆಯುವುದಾಗಿ ಹೇಳಿದ್ದಾರೆಂದು ಸರಕಾರಿ ದಾಖಲೆಗಳೇ ಹೇಳುತ್ತಿರುವ ಸನ್ನಿವೇಶದಲ್ಲಿ ನಾಳಿನ ಭಾರತದಲ್ಲಿ 'ಉಳುವ ಯೋಗಿ' ಹೇಗಿರಬಹುದು ಎಂದು ಯೋಚಿಸಬೇಕಾಗಿದೆ. ಕುವೆಂಪು ಅವರು ಹೇಳುವ ಹಾಗೆ ರಾಜ್ಯಗಳು ಉಳಿಯಲಿ, ಅಳಿಯಲಿ, ಸೈನಿಕರೆಲ್ಲಾ ಮುತ್ತಿಗೆ ಹಾಕಲಿ, ಉಳುವುದನ್ನು ನಮ್ಮ ರೈತ ಬಿಡುವುದಿಲ್ಲ ಎಂಬ ಆಶಯ ನಿಜವಾಗುವುದೇ? – ಎಂಬ ಪ್ರಶ್ನೆ ಕಾಡುತ್ತಿದೆ. ನಾನು ಕೃಷಿ ಪರಿಣತ, ವಿಜ್ಞಾನಿ, ತಜ್ಞನಲ್ಲ. ಆದರೆ ಒಬ್ಬ ಕೃಷಿಕನ ಮಗ. ಬಾಲ್ಯದಿಂದಲೂ ಕೃಷಿಯನ್ನು ನೋಡುತ್ತ, ವಿದ್ಯಾಭ್ಯಾಸದ ಜೊತೆಗೇ ಕೃಷಿ ಚಟುವಟಿಕೆಯಲ್ಲಿ ಭಾಗವಹಿಸುತ್ತ ನಂತರ ರೈತ ಸಂಘಟನೆಗಳ ಹೋರಾಟಗಳಲ್ಲಿ ಒಂದಾಗಿ ಬೆಳೆದವನು. ಹಾಗಾಗಿ ನನಗೆ ನಾಳಿನ ಭಾರತದಲ್ಲಿ ಕೃಷಿ ಹೇಗಿರುತ್ತದೆ ಎನ್ನುವುದಕ್ಕಿಂತ ಕೃಷಿಕ ಅಂದರೆ ನಮ್ಮ ನೇಗಿಲ ಯೋಗಿ ಹೇಗಿರುತ್ತಾನೆ ಎಂಬುದೇ ಕಾಳಜಿ. ನಾಳಿನ ಭಾರತದ ಕೃಷಿಯ ಕುರಿತು ಇಂದಿನ ನಮ್ಮ ಸರಕಾರಗಳು ಕೊಡುತ್ತಿರುವ ಘೋಷಣೆಗಳು ಆಕರ್ಷಕವಾಗಿವೆ. ನಮ್ಮ ಪ್ರಧಾನಿ ನರೇಂದ್ರ ಮೋದಿಯವರು ೨೦೨೨ನೇ ವರ್ಷಕ್ಕೆ, ಅಂದರೆ ನಮ್ಮ ದೇಶ ಸ್ವಾತಂತ್ರ್ಯ ಪಡೆದ ೭೫ನೇ ವರ್ಷದ ಹೊತ್ತಿಗೆ ದೇಶದ ಕೃಷಿಕರ ಆದಾಯವನ್ನು ದ್ವಿಗುಣಗೊಳಿಸುತ್ತೇವೆ ಎಂದು ಹೇಳಿದ್ದಾರೆ. ನಮ್ಮ ವಿತ್ತ ಮಂತ್ರಿ ಅರುಣ ಜೇಟ್ಲಿಯವರೂ ಬಜೆಟ್ ಮಂಡನೆಯ ಸಂದರ್ಭದಲ್ಲಿ ಪ್ರಧಾನಿಯವರ ಆಶಯವನ್ನು ಪುನರುಚ್ಚರಿಸಿದ್ದಾರೆ.

ಭಾರತ ತನ್ನ ಇತಿಹಾಸದಲ್ಲಿ ಭೀಕರ ಬರಗಾಲಗಳನ್ನು ಕಂಡಿದೆ. ಡೋಗಿ ಬರ, ಸಜ್ಜೆಬರ, ಹಸಿಬರ, ಒಣಬರ ಎಂಥ ಬರಗಾಲ ಬಂದರೂ ನಮ್ಮ ರೈತರು ಬದುಕಲು ಹೋರಾಡಿದ್ದಾರೆ, ವಲಸೆ ಹೋಗಿದ್ದಾರೆ, ಹುಲ್ಲು ತಿಂದಿದ್ದಾರೆ, ಸತ್ತ ಪಕ್ಷಿ, ಪ್ರಾಣಿಗಳನ್ನು, ಅಷ್ಟೇ ಏಕೆ ಹಸಿವಿನಿಂದ ಸತ್ತ ಮನುಷ್ಯರನ್ನೂ ಸಹ ತಿಂದು ಬದುಕಲು ಪ್ರಯತ್ನಿಸಿದ್ದಾರೆ. ೨೦ರ ದಶಕದವರೆಗೂ ನಮ್ಮ ಪೀಳಿಗೆಯವರು ಭೀಕರ ಬರಗಾಲವನ್ನು ನೋಡಿದ್ದೇವೆ. ಅಂಥ ಸಂದರ್ಭದಲ್ಲಿಯೂ ನಮ್ಮ ರೈತರು ಸರಕಾರಗಳ ಸಹಾಯವನ್ನೂ ನಿರೀಕ್ಷಿಸದೆ ಬದುಕಿಗಾಗಿ ಹೋರಾಡಿದ್ದಾರೆ. ಆತ್ಮಹತ್ಯೆ ಮಾಡಿಕೊಂಡಿರಲಿಲ್ಲ. ಆದರೆ ಈಗ ಎರಡೂವರೆ ದಶಕದಲ್ಲಿ ಅಂಥ ಬರಗಾಲಗಳಿಲ್ಲದಿದ್ದರೂ ಮೂರೂವರೆ ಲಕ್ಷ ರೈತರು ಆತ್ಮಹತ್ಯೆ ಮಾಡಿ ಕೊಂಡಿದ್ದಾರೆ. ಇದಕ್ಕೆ ಕಾರಣ 'ಅಗ್ರಿಕಲ್ಚರ್' ಎನ್ನುವ ಪದ, ವಿಧಾನ ಹೋಗಿ ಈಗ 'ಅಗ್ರಿ ಬಿಸಿನೆಸ್' ಎಂಬ ಪದ, ವಿಧಾನ ಜಾರಿಯಾಗಿರುವುದು.



ಡಾ॥ ಸಿದ್ದನಗೌಡ ಪಾಟೀಲ

ಇನ್ನೂ ಒಂದು ಹೆಜ್ಜೆ ಮುಂದೆ ಹೋದ ಕೇಂದ್ರದ ಕೃಷಿ ಸಚಿವರಾದ ರಾಧಾ ಮೋಹನ್ ಸಿಂಗ್ ಅವರು ಇದೇ ವರ್ಷದ ಆರಂಭದಲ್ಲಿ ಜಬಲ್‌ಪೂರದಲ್ಲಿ ನಡೆದ ಕೃಷಿ ಸವಾಲುಗಳ ಕುರಿತ ರಾಷ್ಟ್ರೀಯ ಸಮ್ಮೇಳನದಲ್ಲಿ '೨೦೩೦ರ ಹೊತ್ತಿಗೆ ಶೇಕಡಾ ೯೧ರಷ್ಟು ಕೃಷಿ ಹಿಡುವಳಿಗಳು ಸಣ್ಣ ಮತ್ತು ಅತಿ ಸಣ್ಣ ರೈತರ ಕೈಯಲ್ಲಿರುತ್ತವೆ' ಎಂದು ಹೇಳಿದ್ದಾರೆ. ನಾಳಿನ ಭಾರತದಲ್ಲಿ ನಮ್ಮ ರೈತ ಈ ದೇಶದ ಆಗುಹೋಗುಗಳನ್ನು ನಿರ್ಧರಿಸುತ್ತಾನೆ. ಯಾಕೆಂದರೆ ದೇಶದ ಶೇಕಡಾ ೮೬ರಷ್ಟು ರೈತರು ಸಣ್ಣ ಮತ್ತು ಅತಿ ಸಣ್ಣ ರೈತರ ವ್ಯಾಪ್ತಿಗೆ ಬರುತ್ತಾರೆ. ಈಗ ಈ ರೈತ ಸಮೂಹದ (೦.೧ರಿಂದ ೨ ಹೆಕ್ಟೇರ್ ಅಂದರೆ ೮ ಎಕರೆ ಒಳಗಿನ ರೈತರ) ಸಂಖ್ಯೆ ಅಗಾಧವಾಗಿದೆ. ಅಷ್ಟಿದ್ದರೂ ಅವರು ಉಳುತ್ತಿರುವ ಭೂಮಿ ಶೇಕಡ ೪೦ರಿಂದ ೪೭ ಮಾತ್ರ. ಹೀಗಿದ್ದಾಗ ಕೃಷಿ ಸಚಿವ ರಾಧಾ ಮೋಹನ್ ಸಿಂಗ್ ಅವರ ಹೇಳಿಕೆ ರೈತರಿಗೆ ಸಂತೋಷ ತರಲೇಬೇಕು.

ಕೇಂದ್ರ ಸರಕಾರ ಇನ್ನೂ ಒಂದು ಕ್ರಾಂತಿಕಾರಿ ಬದಲಾವಣೆಯನ್ನು ಕೃಷಿ ಕ್ಷೇತ್ರದಲ್ಲಿ ತರುತ್ತೇನೆಂದು ಹೇಳಿದೆ. ಅದಕ್ಕಾಗಿ ಒಂದು ಮಾದರಿ ಕಾನೂನನ್ನು ದೇಶದ ಎಲ್ಲ ರಾಜ್ಯ ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗಾಗಿ ಸಿದ್ಧಪಡಿಸಿದೆ. ಇದರ ಹೆಸರು 'ಅಗ್ರಿಕಲ್ಚರಲ್ ಪ್ರೊಡ್ಯೂಸ್ ಆ್ಯಂಡ್ ಲೈವ್‌ಸ್ಟಾಕ್ ಮಾರ್ಕೆಟಿಂಗ್ (ಪ್ರಮೋಶನ್ ಆ್ಯಂಡ್ ಫೆಸಿಲಿಟೇಶನ್) ಆ್ಯಕ್ಟ್–೨೦೧೭'. ಇದಕ್ಕಾಗಿ ರಚನೆಯಾದ ಸಮಿತಿಯ ಕೇಂದ್ರದ ಕೃಷಿ ಅಧಿಕಾರಿ ಹೇಳುತ್ತಾರೆ: 'ದೇಶದ ಕೃಷಿ ವಲಯದಲ್ಲಿ ದೊಡ್ಡ ಸ್ಥಿತ್ಯಂತರ ನಡೆಯಲಿದೆ, ಕೃಷಿ ಕ್ಷೇತ್ರದಲ್ಲಿ ಆಟ ಬದಲಾಗುವ (ಗೇಮ್ ಚೇಂಜರ್) ಪ್ರಕ್ರಿಯೆ ಇದು' ಎಂದು. ಅವರ ಪ್ರಕಾರ ಈಗಿರುವ ಎ.ಪಿ.ಎಂ.ಸಿ. ಕಾನೂನಿನ ಬದಲಾಗಿ ಈ ಹೊಸ ಕಾನೂನು ಬರುತ್ತಿದೆ. ಕೃಷಿ ರಾಜ್ಯದ ಪಟ್ಟಿಯಲ್ಲಿದ್ದರೂ ಇತ್ತೀಚೆಗೆ ಒಂದು ದೇಶ, ಒಂದು ತೆರಿಗೆ, ಒಂದು ಭಾಷೆ, ಒಂದು ಸಂಸ್ಕೃತಿಯ ಜೊತೆಗೆ ಒಂದು ದೇಶಕ್ಕೆ ಒಂದು ಕೃಷಿ ನೀತಿ ಎಂಬ ಘೋಷಣೆ ಬಂದು ಕೃಷಿ ಕೇಂದ್ರ ರಾಜ್ಯಗಳ ಸಹವರ್ತಿ (ಕನ್ಕರಂಟ್) ಲಿಸ್ಟ್‌ಗೆ ಸೇರಿದೆ. ಈ ಹೊಸ ಕಾನೂನಿನ ಇತರೆ ವಿಷಯಗಳನ್ನು ಬೇರೆ ಸಂದರ್ಭದಲ್ಲಿ ವಿಶ್ಲೇಷಿಸಬಹುದು. ಅದರಲ್ಲಿರುವ ಒಂದು ಮುಖ್ಯ ಸಂಗತಿಯನ್ನು ಈ ಸಂದರ್ಭದಲ್ಲಿ ಗಮನಿಸಬೇಕು. ಆ ಕಾನೂನಿನ ಮೊದಲನೇ ಅಧ್ಯಾಯದ ೧೮ನೇ ವಿಷಯ 'ಫಾರ್ಮರ್ ಪ್ರೊಡ್ಯೂಸರ್ ಕಂಪನಿ' ಕುರಿತು ಹೇಳುತ್ತದೆ. ಈ ಕಂಪನಿ ೧೯೫೬ರ ಕಂಪನಿಗಳ ಕಾನೂನು ಪ್ರಕಾರ ನೋಂದಣಿ ಆಗುತ್ತದೆ ಅಂತ ಹೇಳುತ್ತದೆ. ಅಂದರೆ ಒಕ್ಕಲುತನಗಳ ಕಂಪನಿಗಳು ಇನ್ನು ಮುಂದೆ ಜಾರಿಗೆ ಬರುತ್ತವೆ. ನಮ್ಮ ನೇಗಿಲ ಯೋಗಿಗಳು ಕೃಷಿ ಕಂಪನಿಗಳ ಒಡೆಯರಾಗುತ್ತಾರೆ. ಅದೇ ಮಾದರಿ ಕಾನೂನಿನ ಮುನ್ನುಡಿಯಲ್ಲಿ ಈ ಕಾನೂನಿನ ಮಹತ್ವ ಕುರಿತು ಹೀಗೆ ಹೇಳಲಾಗಿದೆ. 'ಮೈದಾನವನ್ನು (ಕೃಷಿ ಕ್ಷೇತ್ರವನ್ನು) ಸಮತಟ್ಟಾಗಿಸಿ ಸಾರ್ವಜನಿಕ ಹಾಗೂ ಖಾಸಗಿ ಕ್ಷೇತ್ರದ ಆಟಗಾರರನ್ನು ಆಡಲು ಬಿಡುವುದು.' ಅವರ ಪ್ರಕಾರ ನಮ್ಮ ನೇಗಿಲ ಯೋಗಿಯ ಕಂಪನಿ ಈ ಮೈದಾನದಲ್ಲಿ ಭಾಗವಹಿಸಿ ಆಟವಾಡಿ, ಗೆದ್ದು ಅವನ ಆದಾಯ ದ್ವಿಗುಣಗೊಳ್ಳುತ್ತದೆ. ಅಲ್ಲಿಗೆ ೨೦೨೨ರ ಹೊತ್ತಿಗೆ, ಅಂದರೆ ನಮ್ಮ ೭೫ನೇ ಸ್ವಾತಂತ್ರ್ಯೋತ್ಸವ ಸಂದರ್ಭದಲ್ಲಿ ನಮ್ಮ ರೈತ ಕಾರಿನಿಂದಿಳಿದು, ದೊಡ್ಡ ಕಂಪನಿ ಒಡೆಯನಾಗಿದ್ದರೆ ಹೆಲಿಕಾಪ್ಟರ್‌ನಿಂದಿಳಿದು ಧ್ವಜಾರೋಹಣ ಕಾರ್ಯಕ್ರಮದಲ್ಲಿ ಭಾಗವಹಿಸುತ್ತಾನೆ. ಎಂಥಾ ಸುಂದರ ಕನಸು...! ಈ ಸುಂದರ ಕನಸಿಗೆ ಮುನ್ನುಡಿ ಬರೆದದ್ದು ನಮ್ಮ ಪ್ರಧಾನಿಯವರು ಯೋಜನಾ ಆಯೋಗದ ಬದಲಾಗಿ ರೂಪಿಸಿದ ನೀತಿ ಆಯೋಗ. ನೀತಿ ಆಯೋಗದ ೨೦೧೫ರ ಸಭೆಯಲ್ಲಿ ಒಂದು ಪ್ರಮುಖ ವಿಷಯ ಕಾರ್ಯಸೂಚಿಯಲ್ಲಿತ್ತು. ಕುಸಿಯುತ್ತಿರುವ ಕೃಷಿ ಉತ್ಪಾದಕತೆ ಕುರಿತು ಅಲ್ಲಿನ ಪಂಡಿತರು ಕೇಂದ್ರ ಸರಕಾರಕ್ಕೆ ಕೊಟ್ಟ ಶಿಫಾರಸ್ಸು ಏನೆಂದರೆ ದೇಶದಲ್ಲಿ 'ತುಂಡು ಭೂಮಿ' ಕೃಷಿ ಅಭಿವೃದ್ಧಿಗೆ ಅಡೆತಡೆಯಾಗಿದೆ ಎಂಬುದು. ಅವರ ಪ್ರಕಾರ ಅಭಿವೃದ್ಧಿಗೆ ಅಡ್ಡಿಯಾಗಿರುವ ಈ ತುಂಡು ಭೂಮಿ ಹಿಡುವಳಿಗಳನ್ನು ನಿರ್ನಾಮ ಮಾಡುವ ಸೂಚನೆಯ ಆಧಾರದ ಮೇಲೆಯೇ ಈ ಹೊಸ ಮಾದರಿ ಕಾನೂನು ಸಿದ್ಧವಾಗಿದೆ. ಕೃಷಿ ಕ್ಷೇತ್ರದಲ್ಲಿ ಕಂಪನಿ ಕೃಷಿ, ಒಪ್ಪಂದದ ಕೃಷಿ, ಗುತ್ತಿಗೆ ಕೃಷಿ, ಅಂತಿಮವಾಗಿ ಕಾರ್ಪೊರೇಟ್ ಕೃಷಿಯನ್ನು ಜಾರಿಗೆ ತಂದು ಕೃಷಿಯನ್ನು ಕೈಗಾರಿಕೆಯನ್ನಾಗಿ ಪರಿವರ್ತಿಸುವ ಮಾರ್ಗ ಇದು. ಕೇವಲ ಮಾರುಕಟ್ಟೆ ಮಾತ್ರವಲ್ಲ, ಕೃಷಿ ಉತ್ಪಾದನಾ ಕ್ಷೇತ್ರದಲ್ಲಿಯೂ ಬೃಹತ್ ಕೃಷಿ ಉದ್ದಿಮೆಗಳು ಆಟವಾಡಲು ಸಿದ್ಧಪಡಿಸಿದ ಮೈದಾನವಿದು. ಇಂಥ ನೀತಿಗೆ ಇಂದಿನ ಕೇಂದ್ರ ಸರಕಾರದ ಆಡಳಿತ ಪಕ್ಷವಾದ ಬಿಜೆಪಿಯನ್ನು ಮಾತ್ರ ಹೊಣೆಗಾರರನ್ನಾಗಿ ಮಾಡಿದರೆ ಅದು ಕ್ಷುಲ್ಲಕ ರಾಜಕಾರಣವಾಗುತ್ತದೆ. ೧೯೯೧ರಲ್ಲಿ ಜಾಗತೀಕರಣ, ಉದಾರೀಕರಣ, ಖಾಸಗೀಕರಣದ ನೀತಿಗಳನ್ನು ಜಾರಿಗೆ ತಂದ ಕಾಂಗ್ರೆಸ್ ಪಕ್ಷವೂ ಹೊಣೆ ಹೊರಬೇಕಾಗುತ್ತದೆ. ಅಂದು ಆರಂಭಿಸಲಾದ ಈ ನೀತಿಗಳು ಇಂದು ತೀವ್ರ ವೇಗವನ್ನು ಪಡೆದಿವೆ. ಪಕ್ಷ ಬದಲಾಗಿರಬಹುದು, ನೀತಿ ಒಂದೇ.

ಮೇಲಿನ ಬೆಳವಣಿಗೆಗಳನ್ನು ಹೀಗೆ ನೋಡಬೇಕು ಎಂದು ನನ್ನ ಅನಿಸಿಕೆ. ಕೃಷಿಯನ್ನು, ಕೃಷಿ ಆರ್ಥಿಕತೆಯನ್ನು ಕೃಷಿಕ ಮತ್ತು ದೇಶದ ಆಹಾರ ಉತ್ಪಾದನಾ ವಲಯ ಕೇಂದ್ರಿತವಾಗಿ ನೋಡುವ ಬದಲಾಗಿ ಕೃಷಿಯನ್ನು ಮಾರುಕಟ್ಟೆ ಕೇಂದ್ರಿತವಾಗಿ ನೋಡಲಾಗುತ್ತಿದೆ. ಕೃಷಿಯನ್ನು ಅಭಿವೃದ್ಧಿಪಡಿಸುವ ಪ್ರಕ್ರಿಯೆಯಲ್ಲಿ ಮಾರುಕಟ್ಟೆ ಶಕ್ತಿಗಳು ಪ್ರಧಾನ ಪಾತ್ರ ವಹಿಸುತ್ತವೆ ಮತ್ತು ಅವುಗಳ ಹಿತಾಸಕ್ತಿ ಅಡಗಿರುತ್ತದೆ. ಈ ಬೆಳವಣಿಗೆಯಲ್ಲಿ ಕೃಷಿಕ ಕೃಷಿಯಿಂದ ಹೊರಬೀಳುತ್ತಾನೆ. ಮಾತ್ರವಲ್ಲ, 'ಆಹಾರ ಧಾನ್ಯ' ಮಾರುಕಟ್ಟೆಯ 'ಸರಕಾ'ಗುತ್ತದೆ. ದೇಶದ ಪ್ರಜೆ ಕೇವಲ 'ಗ್ರಾಹಕ'ನಾಗಿ ಪರಿವರ್ತನೆ ಹೊಂದುತ್ತಾನೆ. ಈ ಪ್ರಕ್ರಿಯೆಯಲ್ಲಿ ಸರಕಾರದ ಮಧ್ಯಪ್ರವೇಶ ಇರುವುದಿಲ್ಲ ಮತ್ತು ಕೃಷಿ ಕ್ಷೇತ್ರಕ್ಕೆ ಸಂಬಂಧಿಸಿದ ಸಾರ್ವಜನಿಕ ವಲಯಗಳು ನಾಶವಾಗುತ್ತವೆ. ಈಗಾಗಲೇ ಇತರ ಕ್ಷೇತ್ರಗಳಲ್ಲಿ ಆದಂತೆ ಸಾರ್ವಜನಿಕ ವಲಯವನ್ನು ನಿಷ್ಕ್ರಿಯಗೊಳಿಸಿ ಖಾಸಗಿ ವಲಯವನ್ನು ಬಲಪಡಿಸುತ್ತಿರುವಂತೆ ಕೃಷಿ ಕ್ಷೇತ್ರದಲ್ಲಿಯೂ ಖಾಸಗಿ ವಲಯಕ್ಕೆ ಆದ್ಯತೆ ನೀಡುವ ಹುನ್ನಾರವೇ 'ಫಾರ್ಮರ್ ಪ್ರೊಡ್ಯೂಸರ್ ಕಂಪನಿ' ಸ್ಥಾಪನೆಯ ಹಿಂದಿದೆ.

ಭಾರತದ ಈಗಿನ ಕೃಷಿಯನ್ನು ಮಾರುಕಟ್ಟೆ ದೃಷ್ಟಿಯಿಂದ ನೋಡಿದರೂ ಅಲ್ಲಿ ಕೃಷಿಕ ಮತ್ತು ಮಾರಾಟಗಾರ ಒಬ್ಬನೇ. ನಾವು ಈಗ ಕಾಳಜಿ ವಹಿಸಬೇಕಾದ ಶೇಕಡ ೮೬ರಷ್ಟಿರುವ ಕೃಷಿಕರಲ್ಲಿ ಬಹುತೇಕ ರೈತರು ತಮ್ಮ ಉತ್ಪನ್ನಗಳನ್ನು ಸಂತೆಗಳಲ್ಲಿ, ಜಾತ್ರೆಗಳಲ್ಲಿ, ನಗರ, ಪಟ್ಟಣಗಳ ಬಡಾವಣೆಗಳ ಬೀದಿಗಳಲ್ಲಿ, ತಾವೇ ಹೊತ್ತುಕೊಂಡು ಹೋಗಿ ಮಾರಾಟ ಮಾಡುತ್ತಾರೆ. ಅವರಿಗಿರುವ ಭೂಮಿಯ ಸೈಜಿನಲ್ಲಿ ಬರುವ ಉತ್ಪನ್ನಗಳು ಟ್ರಾಕ್ಟರ್‌ನಲ್ಲಿಯೋ, ಲಾರಿಗಳಲ್ಲಿಯೋ ಕೊಂಡೊಯ್ಯುವಷ್ಟಿರುವುದಿಲ್ಲ. ಹೀಗಾಗಿ ನಮ್ಮ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಉತ್ಪಾದನಾ ಕ್ಷೇತ್ರಕ್ಕೆ ಸಮೀಪವಿರುವ ಸಂತೆಗಳು, ನಗರ – ಪಟ್ಟಣಗಳ ಬಡಾವಣೆಗಳ ಸಂದುಗೊಂದುಗಳೇ ಅವರ ಉತ್ಪನ್ನಗಳ ಮಾರಾಟಕ್ಕೆ ಇರುವ ಮಾರುಕಟ್ಟೆಗಳು, ಹೆಚ್ಚೆಂದರೆ ಪಟ್ಟಣಗಳಲ್ಲಿನ ಭಾಗವಾದರು. ಮಧ್ಯವರ್ತಿ, ವ್ಯಾಪಾರಿಗಳ ಹಿಡಿತದಿಂದ ತಪ್ಪಿಸಲೆಂದೇ ೧೯೫೦ರಲ್ಲಿ ಕಾನೂನಾತ್ಮಕವಾಗಿಯೇ ಆರಂಭಿಸಲಾದ ಕೃಷಿ ಮಾರುಕಟ್ಟೆಗಳಿಗೂ (ಎ.ಪಿ.ಎಂ.ಸಿ.) ಈ ಸಣ್ಣ ಅತಿಸಣ್ಣ ರೈತರು ಬಹುತೇಕ ಅಪರಿಚಿತರೇ. ಇಂಥ ಸ್ಥಿತಿಯಲ್ಲಿ ಸಗಟು ಮಾರುಕಟ್ಟೆಗಳು, ಟರ್ಮಿನಲ್ ಮಾರುಕಟ್ಟೆಗಳು. ಈಗ ಜಾರಿಗೆ ತಂದಿರುವ ಇ–ನಾಮ್ (ವಿದ್ಯುನ್ಮಾನ – ರಾಷ್ಟ್ರೀಯ ಕೃಷಿ ಮಾರುಕಟ್ಟೆ) ಎಲ್ಲವೂ ಅವನಿಗೆ ಅಪರಿಚಿತವೇ. ಹೀಗಿರುವಾಗ ನಮ್ಮ ಆಧುನಿಕ ಕೃಷಿ ತಜ್ಞರು ಒಂದು ಪ್ರಶ್ನೆ ಎತ್ತಬಹುದು: 'ನಮ್ಮ ರೈತರು ಇನ್ನೂ ಬೀದಿ ಬದಿಯ ಸಂತೆಗಳಲ್ಲೇ ಇರಬೇಕೇ?' ಎಂದು. ಖಂಡಿತ ಪರಿವರ್ತನೆ ಬೇಕು.



ಆದರೆ ಆ ಪರಿವರ್ತನೆ ಈ ದೇಶದ ಪ್ರಜೆಗಳೇ ಆಗಿರುವ ಕೃಷಿಕರ, ಅದರಲ್ಲೂ ಹೆಚ್ಚಿನ ಸಂಖ್ಯೆಯಲ್ಲಿರುವ ಸಣ್ಣ ಮತ್ತು ಅತಿ ಸಣ್ಣ ರೈತರನ್ನೂ ಒಳಗೊಳ್ಳುವ ಪರಿವರ್ತನೆ ಆಗಿರಬೇಕು. ಆದರೆ ಈಗ ಹೊಸ ಕಾನೂನುಗಳ ಮತ್ತು ನೀತಿಗಳ ಮೂಲಕ ಆಗುತ್ತಿರುವ ಪರಿವರ್ತನೆಗಳು ಕೃಷಿ ಕ್ಷೇತ್ರದಿಂದ ಕೃಷಿಕನನ್ನು ಹೊರತಳ್ಳಿ ಕೇವಲ ಮಾರುಕಟ್ಟೆ ಪ್ರೇರಿತ, ಮಾರುಕಟ್ಟೆಯನ್ನು ನಿಯಂತ್ರಿಸುವ ಕಂಪನಿಗಳ ಹಿತಾಸಕ್ತಿಗಳನ್ನು ಕಾಪಾಡುವ ಗುರಿಯನ್ನು ಹೊಂದಿವೆ. ಇನ್ನೊಂದು ಕಡೆ ನಮ್ಮ ಕೃಷಿಕರ ಉತ್ಪನ್ನಗಳು ಜನತೆಯ ಉಪಭೋಗಕ್ಕೂ ಅಡ್ಡಿಯಾಗಿ ಕೇವಲ ವ್ಯಾಪಾರಿಗಳು ನಿರ್ಧರಿಸುವ ಮಾರುಕಟ್ಟೆ ಮೌಲ್ಯವನ್ನು ಪಡೆದು ಖರೀದಿಸಲು ಶಕ್ತರಾದ ಗ್ರಾಹಕರಿಗೆ ಮಾತ್ರ ಲಭ್ಯವಾಗುವ ಸರಕುಗಳಾಗಿ ಮಾರ್ಪಡುತ್ತವೆ. ಕೃಷಿ ಹಾಗೂ ಕೃಷಿ ಮಾರುಕಟ್ಟೆಯ ಕಂಪನೀಕರಣ ಮತ್ತು ಖಾಸಗೀಕರಣ ನಿಸರ್ಗ ಮತ್ತು ಸಮಾಜದ ನಡುವಿನ ಸಹಜ ಅಂತರ್ ಸಂಬಂಧಗಳನ್ನು ಕಡಿದುಹಾಕುತ್ತವೆ. ನಮ್ಮ ದೇಶದ ಕೃಷಿ ವ್ಯವಸ್ಥೆಯಲ್ಲಿ ಹಲವಾರು ಪರಿವರ್ತನೆಗಳಾಗಿವೆ. ಅವು ಎಂಥ ಪರಿವರ್ತನೆಗಳು ಎಂಬುದನ್ನು ತಿಳಿಯಲು 'ನಿನ್ನೆಯ ಭಾರತ'ದ ಮೇಲೆ ಒಂದು ಪಕ್ಷಿನೋಟ ಬೀರಬೇಕು.




**ಭಾರತದ ನಿನ್ನೆಗಳು**

ಕೃಷಿ ಮತ್ತು ಕೃಷಿಕನ ಮಧ್ಯೆ ಸಹಜ ಸಂಬಂಧಗಳೂ, ಸಹಜಕೃಷಿ ವಿಧಾನವೂ ಇರುವಾಗ ಕೃಷಿಯ ಪ್ರಧಾನ ಉದ್ದೇಶ ಆಹಾರೋತ್ಪಾದನೆಯಾಗಿತ್ತು. ಆ ಸಂದರ್ಭದ ಕೃಷಿ ಭೂಮಿಯ ಮಾಲೀಕತ್ವದ ವಿಷಯ ಒಂದು ಪ್ರತ್ಯೇಕ ಅಧ್ಯಯನವಾಗುತ್ತದೆ. ಕೃಷಿಯನ್ನು ಕಂಪನೀಕರಣಗೊಳಿಸುವ ಇಂದಿನ ಪ್ರಭುತ್ವಗಳ ಉದ್ದೇಶ ಇಂದಿನದಲ್ಲ. ವ್ಯಾಪಾರಕ್ಕಾಗಿಯೇ ಭಾರತಕ್ಕೆ ಬಂದ ಸಾಮ್ರಾಜ್ಯಶಾಹಿಗಳು ತಮ್ಮ ಲಾಭಕ್ಕಾಗಿ ಕೃಷಿ ಕಂಪನಿ ಮತ್ತು ಎಸ್ಟೇಟುಗಳನ್ನು ಸ್ಥಾಪಿಸಿದರು. ಬ್ರಿಟಿಷರು ಭಾರತದಲ್ಲಿ ಸಾಮ್ರಾಜ್ಯ ಸ್ಥಾಪನೆ ಮತ್ತು ವಿಸ್ತರಣೆ ಮಾಡುವ ಸಂದರ್ಭದಲ್ಲಿ ಸ್ವಾತಂತ್ರ್ಯ ಹೋರಾಟಕ್ಕೂ ಮುಂಚೆಯೇ ದೇಶದ ಗ್ರಾಮೀಣ ಜನರಿಂದ ತೀವ್ರವಾದ ಪ್ರತಿರೋಧಗಳನ್ನು ಎದುರಿಸಿದ್ದಾರೆ. ಆ ಪ್ರತಿರೋಧಗಳು ಮೂರು ವಿಧದಲ್ಲಿವೆ: (೧) ಭೂಮಿಯ ಒಡೆತನ, (೨) ಬೆಳೆ ವಿಧಾನ, (೩) ತೆರಿಗೆ ನೀತಿ.

ಬ್ರಿಟಿಷರು ಬರುವ ಮುಂಚೆಯೇ ಭಾರತದಲ್ಲಿನ ಭೂಮಿ ಸಂಬಂಧಗಳು ನಿರ್ಧಾರವಾಗಿದ್ದವು. ಬಹುತೇಕ ಭೂಮಿ ರಾಜಮಹಾರಾಜರು, ಅವರ ಸಹಾಯಕರಾದ ಸ್ಥಳೀಯ ಆಡಳಿತಗಾರ, ದೇವಸ್ಥಾನಗಳ ನಿಯಂತ್ರಣದಲ್ಲಿತ್ತು. ರೈತ ಅಲ್ಲಿ ಜೀತಗಾರ, ಕೂಲಿಗಾರ ಹೆಚ್ಚೆಂದರೆ ಗೇಣಿದಾರ. ಸ್ವಾತಂತ್ರ್ಯಾನಂತರ ನಡೆದ 'ಉಳುವವನಿಗೆ ಭೂಮಿ' ಎನ್ನುವ ಹೋರಾಟದ ಪರಿಕಲ್ಪನೆ ಆಗ ಇರಲೇ ಇಲ್ಲ. ಆದರೆ ಆದಿವಾಸಿಗಳು ಮಾತ್ರ ತಮ್ಮ ನೆಲಕ್ಕಾಗಿ ಧೀಮಂತ ಹೋರಾಟ ನಡೆಸಿದ ಘಟನೆಗಳು ಸಾಕಷ್ಟಿವೆ. ೧೮ನೇ ಶತಮಾನದ ಕೊನೆಯ ದಶಕಗಳಲ್ಲಿ ಆರಂಭವಾದ ಆದಿವಾಸಿ ದಂಗೆಗಳು ಅರಣ್ಯಗಳ ಮೇಲಿನ ತಮ್ಮ ಹಕ್ಕಿಗಾಗಿ ಸಾಮ್ರಾಜ್ಯಶಾಹಿಗಳ ಅನ್ಯಾಯದ, ಅತಿಕ್ರಮಣದ ವಿರುದ್ಧ ಆರಂಭವಾದವು. ಬಂಗಾಳ ಪ್ರಾಂತದಲ್ಲಿ ಸಂತಾಲರು ತಮ್ಮ ಹಕ್ಕಿಗಾಗಿ ನಡೆಸಿದ ಪ್ರತಿರೋಧದ ತೀವ್ರತೆ ಎಷ್ಟಿತ್ತೆಂದರೆ ಭಾಗಲ್ಪುರದ ಕಲೆಕ್ಟರ್ ಕ್ಲಿವ್‌ಲ್ಯಾಂಡ್‌ನನ್ನು ಆದಿವಾಸಿ ಹೋರಾಟಗಾರರು ಕೊಂದುಹಾಕಿದರು. ಪ್ರತಿಯಾಗಿ ಬ್ರಿಟಿಷರು ೧೭೮೫ರಲ್ಲಿ ಆದಿವಾಸಿಗಳ ನಾಯಕ ತಿಲಕಾ ಮಾಝಿಯನ್ನು ಗಲ್ಲಿಗೇರಿಸಿದರು. ಮುಂದೆ ಭೂ ಒಡೆತನದ ಹಕ್ಕಿಗಾಗಿ ಹಲವಾರು ಆದಿವಾಸಿ ಹೋರಾಟಗಳು ನಡೆದಿವೆ. ಈ ಹೋರಾಟಗಳು ಸಾಮ್ರಾಜ್ಯಶಾಹಿಗಳ ವಾಣಿಜ್ಯೀಕರಣಕ್ಕಾಗಿ ಅರಣ್ಯಗಳ ಸ್ವಾಧೀನ ನೀತಿಯ ವಿರುದ್ಧ ನಡೆದು ಹೋರಾಟಗಳೆಂದೇ ಪರಿಗಣಿಸಬೇಕು.

ವಾಣಿಜ್ಯ ಬೆಳೆ ನೀತಿಯ ವಿರೋಧಿ ಹೋರಾಟಗಳ ದೊಡ್ಡ ಪರಂಪರೆಯೇ ನಮ್ಮಲ್ಲಿದೆ. ಅದು ಮೊದಲು ಆರಂಭವಾದದ್ದು ಬಂಗಾಲ ಪ್ರಾಂತದಲ್ಲಿಯೇ, ಮಾರುಕಟ್ಟೆಗಾಗಿ ನೀಲಿ ಬೆಳೆ ಕಡ್ಡಾಯ ಮಾಡಿದ ಬ್ರಿಟಿಷ್ ಆಡಳಿತದ ವಿರುದ್ಧ ೧೮೫೯ರಲ್ಲಿಯೇ ಆರಂಭವಾದ ರೈತರ ಹೋರಾಟ ವಿವಿಧ ರೀತಿಯ ರೈತ ಚಳುವಳಿಗಳಿಗೆ ಚಾಲನೆ ಒದಗಿಸಿತು. ಹೋರಾಟದ ಪರಿಣಾಮವಾಗಿ ಸಾಮ್ರಾಜ್ಯಶಾಹಿಗಳು ವಾಣಿಜ್ಯ ಬೆಳೆ ನೀಲಿ ಬೆಳೆಯುವ ಕಡ್ಡಾಯದ ನೀತಿಯನ್ನು ಹಿಂತೆಗೆದುಕೊಂಡರು. ಹೋರಾಟದ ತೀವ್ರತೆಗೆ ಹೆದರಿ ಗೇಣಿದಾರರ ಹಕ್ಕನ್ನು ಮಾನ್ಯ ಮಾಡುವ ಕಾನೂನು ತರುವ ಅನಿವಾರ್ಯತೆಗೆ ಬ್ರಿಟಿಷ್ ಸರಕಾರ ಒಳಗಾಯಿತು. ಇಂಥ ಹೋರಾಟಗಳನ್ನು ಮಾರುಕಟ್ಟೆ ಅಥವಾ ಕಂಪನಿ ಕೃಷಿ ನೀತಿಯ ವಿರೋಧಿ ಹೋರಾಟಗಳೆಂದೇ ಪರಿಗಣಿಸಬೇಕು.

ಇತಿಹಾಸದುದ್ದಕ್ಕೂ ರಾಜ-ಮಹಾರಾಜರಿಗೆ, ಸಾಮಂತರಿಗೆ ತೆರಿಗೆ ಕೊಡುತ್ತಲೇ ಬಂದ ಗೇಣಿದಾರರು, ರೈತರು ತಮ್ಮ ಪ್ರತಿರೋಧ ವ್ಯಕ್ತಪಡಿಸುತ್ತಲೇ ಬಂದಿದ್ದಾರೆ. ಬ್ರಿಟಿಷರ ಆಡಳಿತದ ಕಾಲದಲ್ಲಿ ೧೮೩೦ರಲ್ಲಿ ಕರ್ನಾಟಕದಲ್ಲಿ ನಡೆದ ನಗರ ಬಂಡಾಯ ರೈತರ ಸಂಘಟಿತ ಹೋರಾಟದ ಒಂದು ಮಾದರಿ. ಭಾರತದಲ್ಲಿ ಆಗಲೇ ಸರಕಾರದ ತೆರಿಗೆ ನೀತಿ, ಲೇವಾದೇವಿಗಾರರ ಕಿರುಕುಳ, ಭೂಮಾಲೀಕರ ದೌರ್ಜನ್ಯ, ಇವೆಲ್ಲದರ ವಿರುದ್ಧ ರೈತರು ಬಂಡೆದಿದ್ದಾರೆ. ರೈತರು ಸಾಲ ಮಾಡುವ ಅನಿವಾರ್ಯತೆ ಆಗಲೂ ಇತ್ತು. ಆಗಲೇ ಬ್ರಿಟಿಷ್ ಸರಕಾರ ನೇಮಿಸಿದ ರಾಯಲ್ ಕಮಿಟಿ ವರದಿ ಭಾರತದ 'ರೈತರು ಸಾಲದಲ್ಲಿ ಹುಟ್ಟಿ ಸಾಲದಲ್ಲಿ ಬದುಕಿ, ಸಾಲದಲ್ಲಿಯೇ ಸಾಯುತ್ತಾರೆ' ಎಂದು ಹೇಳಿದೆ. ಆ ಪರಿಸ್ಥಿತಿ ಈಗಲೂ ನಿಂತಿಲ್ಲ. ಇಂದು ನಮ್ಮ ದೇಶದಲ್ಲಿ ೧೦೨೨೮೯ ಸಾರ್ವಜನಿಕ ಬ್ಯಾಂಕ್‌ಗಳ ಶಾಖೆಗಳಿದ್ದರೂ ಶೇಕಡ ೭೦ರಷ್ಟು ರೈತರು (ಸಣ್ಣ-ಅತಿಸಣ್ಣ) ಖಾಸಗಿ ಲೇವಾದೇವಿಗಾರರಿಂದಲೇ ಹತ್ತಿರವೇ ಸಾಲ ಪಡೆದಿದ್ದಾರೆ.

ಬ್ರಿಟಿಷ್ ಕಾಲದಲ್ಲೂ ಸಾಲಗಾರರಾಗಿದ್ದ ರೈತರು ಅನ್ಯಾಯದ ತೆರಿಗೆ ವಿರುದ್ಧ ನಿರಂತರ ಹೋರಾಡಿದ್ದಾರೆ. ಮೈಸೂರು ರಾಜ್ಯದ ನಗರ ರೈತ ಬಂಡಾಯ, ಮಹಾರಾಷ್ಟ್ರದಲ್ಲಿ ನಡೆದ ದಖ್ಖನ್ ರೈತ ದಂಗೆಗಳು, ಬಂಗಾಲದ ತೇಬಾಗ್ ಚಳುವಳಿ ಇಂಥ ನೂರಾರು ಚಳುವಳಿಗಳು ನಡೆದಿವೆ. ಇಂದು ನಮ್ಮ ಸರಕಾರಗಳು ತರುತ್ತಿರುವ ಕಾರ್ಪೊರೇಟ್ ಕೃಷಿ ರೈತರ ಭೂ ಒಡೆತನ, ಬೆಳೆ ಆಯ್ಕೆ, ಬೆಲೆ ನಿಗದಿ ಹಕ್ಕನ್ನು ಕಸಿದುಕೊಳ್ಳುವ ಅಪಾಯಗಳಿವೆ. ಯಾಕೆಂದರೆ ಪ್ರಭುತ್ವಗಳು ಕಂಪನಿ ಜೊತೆಗಿವೆ ಕೃಷಿಕನ ಜೊತೆಗಿಲ್ಲ. ಭಾರತ ಸರಕಾರ ಯಾವತ್ತು ರೈತರ ಪರವಾಗಿಲ್ಲ ಎಂಬ ಸಿನಿಕತನ ನನ್ನದಲ್ಲ. ಆರಂಭದ ದಶಕಗಳಲ್ಲಿ ಸ್ವತಂತ್ರ ಭಾರತದ ಪ್ರಭುತ್ವ ಕೈಗಾರಿಕೆಯಷ್ಟೇ ಕೃಷಿಗೂ ಆದ್ಯತೆ ಕೊಟ್ಟಿದೆ.

**ಸ್ವಾತಂತ್ರ್ಯಾನಂತರದ ಮೂರು ದಶಕಗಳು**

ಬ್ರಿಟಿಷ್ ಆಡಳಿತದ ಆರಂಭದಲ್ಲಿ ಸ್ವಯಂಪ್ರೇರಿತವಾಗಿ ನಡೆದ ರೈತ ಹೋರಾಟಗಳು ೧೯೩೬ರಲ್ಲಿ ಅಖಿಲ ಭಾರತ ಕಿಸಾನ ಸಭಾ ಎಂಬ ಸಂಘಟನೆ ಸ್ಥಾಪನೆಯಾಗುವುದರ ಮೂಲಕ ರಾಷ್ಟ್ರೀಯ ಸಂಘಟನಾ ರೂಪ ಪಡೆದವು. ಅಲ್ಲಿಯವರೆಗೆ ಪ್ರತಿರೋಧದ ನೆಲೆಯಿಂದ ನಡೆದ ಹೋರಾಟಗಳು ಪರ್ಯಾಯ ಪ್ರಭುತ್ವದ ಆಶಯಗಳನ್ನು ಹೊಂದಿದವು. ಕೇವಲ ಅನ್ಯಾಯ ಅಕ್ರಮಗಳ ವಿರುದ್ಧ ನ್ಯಾಯಕ್ಕಾಗಿ, ಅವಶ್ಯಕ ಸೌಲಭ್ಯಗಳಿಗಾಗಿ ಮಾತ್ರ ಸೀಮಿತವಾಗದೆ ಉಳುವವನಿಗೆ ಭೂಮಿ ಮತ್ತು ಭಾರತದ ಸ್ವಾತಂತ್ರ್ಯಕ್ಕಾಗಿ ಹೋರಾಟವನ್ನು ಮುಂದುವರೆಸಿದವು. ಕಯ್ಯೂರು ರೈತ ಹೋರಾಟ, ತೆಲಂಗಾಣ ರೈತರ ಸಶಸ್ತ್ರ ಹೋರಾಟ ಮುಂತಾದವು ಕಮ್ಯುನಿಸ್ಟರ ನಾಯಕತ್ವದಲ್ಲಿ, ಅಂಬೇಡ್ಕರ್ ಅವರ ನಾಯಕತ್ವದಲ್ಲಿ ಮಹಾರಾಷ್ಟ್ರದ ಖೋತಿ ವ್ಯವಸ್ಥೆ ವಿರೋಧಿ ಹೋರಾಟ, ಸಮಾಜವಾದಿಗಳ ನಾಯಕತ್ವದಲ್ಲಿ ಕರ್ನಾಟಕದ ಕಾಗೋಡು ಗೇಣಿದಾರರ ಸತ್ಯಾಗ್ರಹ ಇಂಥ ಹಲವಾರು ಚಳುವಳಿಗಳು ಸ್ವತಂತ್ರ ಭಾರತದ ಪ್ರಭುತ್ವ ಕೃಷಿ ಮತ್ತು ಕೃಷಿಕರ ಹಿತಾಸಕ್ತಿಯನ್ನು ಆದ್ಯತೆಯ ಮೇಲೆ ಪರಿಗಣಿಸುವಂತೆ ಮಾಡಿದವು.

ಕೃಷಿ ಅಂದರೆ ಕೇವಲ ಕೃಷಿಕನ ಬದುಕಿನ ಜೀವನೋಪಾಯದ ಮಾರ್ಗವಲ್ಲ.

ಅದು ದೇಶದ ಆಹಾರ ಭದ್ರತೆಯ ಸಂಗತಿ. ಎರಡನೇ ಜಾಗತಿಕ ಮಹಾಯುದ್ಧದ ನಂತರ ದೇಶದ ಹಲವಾರು ಭಾಗದಲ್ಲಿ ಭೀಕರ ಬರಗಾಲ ವ್ಯಾಪಿಸಿದ ಸಂದರ್ಭದಲ್ಲಿಯೇ ಭಾರತ ಸ್ವಾತಂತ್ರ್ಯ ಪಡೆಯಿತು. ಸ್ವತಂತ್ರ ಭಾರತದ ಮುಂದೆ ತಕ್ಷಣದ ಎರಡು ಸಮಸ್ಯೆಗಳಿದ್ದವು. ದೇಶ ವಿಭಜನೆಯಿಂದ ಉಂಟಾದ ಕೋಮು ಗಲಭೆಗಳನ್ನು ನಿಯಂತ್ರಿಸಿ ಶಾಂತಿ ಕಾಪಾಡುವುದು ಮತ್ತು ದೇಶದ ಆಹಾರ ಕೊರತೆಯನ್ನು ನಿವಾರಿಸಿ ಜನರ ಹಸಿವನ್ನು ನೀಗಿಸುವುದು. ಅಂಥ ಸಂದರ್ಭದಲ್ಲಿ ನಮ್ಮ ಸರಕಾರ ಅಮೆರಿಕದಿಂದ ಪಿ.ಎಲ್. ೪೮೦ ಎಂಬ ಯೋಜನೆಯಡಿ ಗೋಧಿಯನ್ನು ತಂದು ಅಲ್ಪ ಪ್ರಮಾಣದಲ್ಲಿ ಹಸಿವನ್ನು ನೀಗಿಸಲು ಯತ್ನಿಸಿತು. ಐವತ್ತರ ದಶಕದಲ್ಲಿ ನಮ್ಮ ದೇಶದಲ್ಲಿನ ಆಹಾರ ಉತ್ಪಾದನೆ ಕೇವಲ ೫೦ ಮಿ. ಟನ್ ಆಗಿತ್ತು. ಕೃಷಿ ಕ್ಷೇತ್ರ ಬ್ರಿಟಿಷರ ಕಾಲದಲ್ಲಿ ಅವರ ಕೈಗಾರಿಕೆಗೆ ಮತ್ತು ವಾಣಿಜ್ಯಕ್ಕೆ ಮಾತ್ರ ಪೂರಕವಾಗಿ ಬೆಳೆದಿತ್ತು. ಸ್ವತಂತ್ರ ಭಾರತದ ಪ್ರಭುತ್ವ ಕೈಗಾರಿಕೆ ಜೊತೆಗೆ ಕೃಷಿಯನ್ನೂ ಅಭಿವೃದ್ಧಿಪಡಿಸುವ ಅವಶ್ಯಕತೆ ಇತ್ತು. ಕೃಷಿ ಅಭಿವೃದ್ಧಿಯೆಂದರೆ ಸರಕಾರ ಕೃಷಿ ಕ್ಷೇತ್ರದಲ್ಲಿ ಮಧ್ಯಪ್ರವೇಶ ಮಾಡಬೇಕು. ಭೂಸುಧಾರಣೆ ಮೂಲಕ ದುಡಿವವರಿಗೆ ಭೂಮಿಯ ಕೊಟ್ಟು ಗೈರು ಭೂಮಾಲೀಕತ್ವವನ್ನು ನಿರ್ನಾಮ ಮಾಡಬೇಕು. ಒಂದರ್ಥದಲ್ಲಿ ಭೂಮಿ ರಾಷ್ಟ್ರೀಕರಣ, ಅಂದರೆ ನಿಜವಾದ ರೈತನಿಗೆ ಭೂಮಿ ಕೊಡುವುದು. ಉಳುವ ರೈತನಿಗೆ ಪೂರಕವಾದ ವಾತಾವರಣ ನಿರ್ಮಾಣ ಮಾಡುವುದು. ಅಂದರೆ: ಬೀಜ, ಮಣ್ಣು ಪರೀಕ್ಷೆ, ವಿದ್ಯುತ್, ನೀರಾವರಿ, ಗೊಬ್ಬರ, ಕೀಟನಾಶಕ, ಕೃಷಿ ಸಲಕರಣೆ, ಆಧುನಿಕ ಯಂತ್ರಜ್ಞಾನ, ಕೃಷಿ ಶಿಕ್ಷಣ, ಸಂಶೋಧನೆ, ಉಗ್ರಾಣ, ಶೈತ್ಯಾಗಾರ, ಮಾರುಕಟ್ಟೆ, ಸಾಲ ಮತ್ತು ವೈಜ್ಞಾನಿಕ ಬೆಲೆ (ಬೆಂಬಲ ಬೆಲೆ ಅಲ್ಲ). ಇಂಥ ಎಲ್ಲ ಸೌಲಭ್ಯಗಳೂ ಸರಕಾರದ ಆದ್ಯತೆಯ ವಿಷಯವಾಗಬೇಕು. ಅದೇ ಸಂದರ್ಭದಲ್ಲಿ ರೈತ ಸಮುದಾಯದ ಆರೋಗ್ಯ, ವಸತಿ, ಶಿಕ್ಷಣ ಮುಂತಾದ ಅವಶ್ಯಕತೆಗಳನ್ನು ಸರಕಾರ ಪೂರೈಸಬೇಕು. ಆಗ ಮಾತ್ರ ಕೃಷಿ ಕ್ಷೇತ್ರ ಅಭಿವೃದ್ಧಿ ಹೊಂದಲು ಸಾಧ್ಯ. ಈ ನಿಟ್ಟಿನಲ್ಲಿ ಭಾರತದ ಪ್ರಭುತ್ವ ಆರಂಭದ ಮೂರು ದಶಕದಲ್ಲಿ ಪ್ರಯತ್ನವನ್ನಂತೂ ಮಾಡಿದೆ.

ಸ್ವತಂತ್ರ ಭಾರತದ ಪ್ರಭುತ್ವದ ಮೊದಲ ಮೂರು ದಶಕಗಳ ಅವಧಿ ಕಲ್ಯಾಣ ರಾಜ್ಯದ ಗುರಿಯನ್ನೇ ಹೊಂದಿತ್ತು ಎಂದು ಹೇಳಬಹುದು. ಕೈಗಾರಿಕಾ ಕ್ಷೇತ್ರದಲ್ಲಿ ಸಾರ್ವಜನಿಕ ವಲಯವನ್ನು ಬಲಪಡಿಸಿದ್ದು ಪ್ರಮುಖ ಸಾಧನೆ. ಹಾಗೇ ಕೃಷಿ ಕ್ಷೇತ್ರದಲ್ಲಿ ಉಳುವವನಿಗೆ ಭೂಮಿ ಕಾನೂನು ತಂದದ್ದು ನಿರೀಕ್ಷಿಸಿದಷ್ಟು ಯಶಸ್ವಿಯಾಗದಿದ್ದರೂ ಅದು ಗಣನೀಯ ಸಾಧನೆಯೆ. ಬರ, ಗೇಣಿ ಸಮಸ್ಯೆ, ಆರ್ಥಿಕ ದುಸ್ಥಿತಿ ಹಲವಾರು ಪ್ರತಿಕೂಲ ವಾತಾವರಣದ ಮಧ್ಯೆಯೂ ೧೯೬೦ರಲ್ಲಿ ಕೃಷಿ ಕ್ಷೇತ್ರ ದೇಶದ ಒಟ್ಟು ಆಂತರಿಕ ಉತ್ಪನ್ನಕ್ಕೆ (ಜಿಡಿಪಿ) ಶೇಕಡ ೫೧.೪ರಷ್ಟು ಕೊಡುಗೆ ಕೊಟ್ಟಿದೆ. (ಇಂದು ಅದು ಶೇಕಡಾ ೧೩ಕ್ಕಿಳಿದಿದೆ). ಪಂಚವಾರ್ಷಿಕ

## ರಾಜಕೀಯ ಪಕ್ಷವೆಂಬ ಮುದಿ ಸೂಳೆಯೂ ಪ್ರಜಾಪ್ರಭುತ್ವವೆಂಬ ಗರತಿತನವೂ



ನೆನಪಿರಕೇನು ಕಮ್ಮಿ ವಯಸ್ಸೇ ?
ಪಾಪ ಅರಳು ಮರಳು !
ಅಷ್ಟು ಕಾಣದೆ ನಿಮಗೆ ?
ಒಮ್ಮೊಮ್ಮೆ ಬೀದಿ ತಿರುಗಿರಬೋದು
ಸೆರಗು ಹಾರಿಸಿ ಕಣ್ಣು ಹೊಡೆದಿರಬೋದು
ಗಂಡನೆಂಬ ಪ್ರಾಣಿ ಇದ್ದಿದ್ದರೆ ಇದೆಲ್ಲ ಏಕಿತ್ತು ?
ಪಾಪ ಹೊಟ್ಟೆಪಾಡು !
ಇಡೀ ಜೀವನ ಪರಗಂಡನ ಜತೆ ನವೆದಳಲ್ಲ
ಅವಳೇನು ಬೇಕಂತ ಮಾಡಿದಳೆ ?
ಕೂತುಣ್ಣುವವರೆ ಎಲ್ಲ ದುಡಿವವರೆ ಇಲ್ಲವಲ್ಲ
ತನ್ನನ್ನೂ ತನ್ನವರನ್ನೂ ಸಂಭಾಳಿಸಿದ್ದೇನು ಸಾಮಾನ್ಯನೆ ?
ಅವಳದೂ ಪಾಪ ಹೇಸದ ಜೀವ ತಾನೆ ?

ಹಿರಿತನದ ಅಧಿಕಾರ ಹೇಳಿಕೇಳಿ ಬಂದೀತೆ ?
ಎಳೆಯರು ದಾರಿ ತಪ್ಪಿದರೆ
ಎಷ್ಟು ಕಳವಳಪಡುತ್ತಾಳೆ ಅಂತೀರಿ ?
ತಪ್ಪು ತಿದ್ದದೆ ನಿದ್ದೆ ಹತ್ತಲೊಲ್ಲದು
ಬಾಳು ಹಸನಾಗಬೇಕಂತ ಭಾರಿ ಚಿಂತೆ
ಎಷ್ಟಿದ್ದರೂ ಅನುಭವಸ್ಥೆಯಲ್ಲವೆ ?
ಚಿಕ್ಕವರು ಚಿಕ್ಕವರಂಗಿರಬೇಕು
ಆಕೆಂಥ ಮುತ್ತೈದೆ ಅಂತ ಯಾರಿಗೆ ಗೊತ್ತಿಲ್ಲ ?
ತನ್ನ ಮುಂದೆ ಚೆಲ್ಲು ಚೆಲ್ಲು ಆಡಿದರೆ
ಸಹಿಸಿಯಾಳು ಹೇಗೆ ?

ಅಷ್ಟೂ ತಿಳಿಯಬೇಡವೆ ಈ ಮಕ್ಕಳಿಗೆ ?
ವಯಸ್ಸು ಬಂದೊಡನೆ ನೆಲ ಕಾಣದೆ ಹೋದರೆ ಹೇಗೆ ?
ಬುದ್ಧಿಯಿಲ್ಲದವು ಬುದ್ಧಿ ಹೇಳಿದರೂ ಕೇಳವು
ಸುಮ್ಮನೆ ಅನ್ನಬಾರದು ಅವಳಿಗೆ
ಅಷ್ಟು ಕಾಳಜಿ ಯಾರು ಮಾಡುತಾರೆ
ಗರತಿ ತರ ಇರಬೇಕಂತ ಅವಳು ಹೇಳದೆ
ದಾರೀಲಿ ಹೋಗೋ ದಾಸಯ್ಯ ಹೇಳುತಾನ ?
ಇದೆಲ್ಲ ಎಲ್ಲರಿಂದ ಆಗೋದಲ್ಲ
ಅವಳೇನು ಅಂತಿಂಥ ಹೆಣ್ಣಲ್ಲ !

**ಶ್ರೀಧರ ಪಿಸ್ಸೆ**
ಪಿಟಿ. ೨ಎಫ್/೨೩ಎ, ೭ ವಾರ್ಡ್. ಹೆಚ್‌ಪಿಸಿ, ಕಮಲಾಪುರ – ೫೮೩ ೧೧೫

ಯೋಜನೆಗಳು ದೇಶದ ಅಭಿವೃದ್ಧಿಗೆ ಪೂರಕವಾದವು. ಈ ಯೋಜನೆಗಳಲ್ಲಿ ಕೃಷಿ ಮತ್ತು ಗ್ರಾಮೀಣ ವಲಯಕ್ಕೆ ಆದ್ಯತೆ ಕೊಡಲಾಗಿತ್ತು. ೬ನೇ ಪಂಚವಾರ್ಷಿಕ ಯೋಜನೆಯಲ್ಲಿ ಯೋಜನಾ ಗಾತ್ರದ ಶೇಕಡಾ ೧೬.೪ರಷ್ಟು ಕೃಷಿಗೆ ವಿನಿಯೋಗಿಸ ಲಾಗಿತ್ತು. (ಇನ್ನೂ ಹೆಚ್ಚಿಸಬೇಕೆಂಬ ಬೇಡಿಕೆ ಆಗಲೂ ಇತ್ತು) ನಂತರದ ವರ್ಷಗಳಲ್ಲಿ ಗ್ರಾಮೀಣವಲಯ ನಿರ್ಲಕ್ಷ್ಯಕ್ಕೊಳಗಾಗಿ ೧೨ನೇ ಪಂಚವಾರ್ಷಿಕ ಯೋಜನೆ ಹೊತ್ತಿಗೆ ಅದು ಶೇಕಡಾ ೪.೭ಕ್ಕಿಳಿದು ಈಗ ಇನ್ನೂ ಕೆಳಕ್ಕೆ ಬಂದಿದೆ.

೧೯೬೯ರ ನಂತರ ಬ್ಯಾಂಕ್ ಮತ್ತು ವಿಮಾದಂಥ ಆರ್ಥಿಕ ವಲಯಗಳನ್ನು ರಾಷ್ಟ್ರೀಕರಿಸಿದ್ದು ಕೃಷಿ ವಲಯಕ್ಕೆ ಅನುಕೂಲವಾಗಿತ್ತು. ಬಡರೈತರಿಗಲ್ಲದಿದ್ದರೂ ಮಧ್ಯಮ ಮತ್ತು ದೊಡ್ಡ ಹಿಡುವಳಿದಾರರಿಗೆ ಸಾಂಸ್ಥಿಕ ಹಣಕಾಸು ನೆರವು ದೊರೆತು ಕೃಷಿ ಕ್ಷೇತ್ರ ಮುಂದಡಿ ಇಡಲು ಸಾಧ್ಯವಾಯಿತು. ಭಾರತ ಸರಕಾರ ರೂಪಿಸಿದ ಪಂಚವಾರ್ಷಿಕ ಯೋಜನೆ ಮತ್ತು ಹಸಿರು ಕ್ರಾಂತಿ ಭಾರತದ ಸ್ವಾವಲಂಬನೆಯೆಡೆಗೆ ಚಲಿಸಲು ಮಹತ್ವದ ಕೊಡುಗೆಗಳು. ಹಸಿರು ಕ್ರಾಂತಿಯ ಕುರಿತು ಭಿನ್ನಮತಗಳೂ ಇವೆ. ಕೃಷಿ ಯೋಜನೆಯ ಅವಧಿಯನ್ನು ಹೀಗೆ ನೋಡಬಹುದು:

| | | |
|---|---|---|
| ಹಸಿರು ಕ್ರಾಂತಿ ಪೂರ್ವದ ಕಾಲ | – | ೧೯೫೦–೧೯೬೦ |
| ಹಸಿರು ಕ್ರಾಂತಿಯ ಕಾಲ | – | ೧೯೬೦–೧೯೭೦ (ಮಧ್ಯ) |
| ಹಸಿರು ಕ್ರಾಂತಿಯ ನಂತರದ ಕಾಲ | – | ೧೯೮೦–೧೯೯೧ |
| ಉದಾರೀಕರಣದ ನಂತರದ ಕಾಲ | – | ೧೯೯೧ರ ನಂತರ |

ಭಾರತದ ಪ್ರಭುತ್ವ ಬಂಡವಾಳಶಾಹಿಪರ ಎಂಬ ವಾದವಿದ್ದರೂ ಎಂಭತ್ತರ ದಶಕದವರೆಗೆ ನಿರೀಕ್ಷಿತವಲ್ಲದಿದ್ದರೂ ತಕ್ಕಮಟ್ಟಿಗೆ ಗ್ರಾಮೀಣ ಅಭಿವೃದ್ಧಿ ಮತ್ತು ಕೃಷಿ ವ್ಯವಸ್ಥೆ ಸುಧಾರಣೆಯ ಪರವಾಗಿತ್ತು. ೧೯೬೯ರಲ್ಲಿ ಆಳುವ ಪಕ್ಷವಾದ ಕಾಂಗ್ರೆಸ್‌ನಲ್ಲಿ ಒಡಕುಂಟಾದಾಗ ಆಳುವ ವರ್ಗ ಸುಧಾರಣಾವಾದಿ ನಿಲುವು ತಳೆಯುವುದು ಅನಿವಾರ್ಯವಾಗಿತ್ತು. ಹಲವಾರು ಜನಪರ ಯೋಜನೆಗಳು ಜಾರಿಯಾದವು. ಎಪ್ಪತ್ತರ ದಶಕದ ಕೊನೆಗೆ ಬದಲಾದ ಆಡಳಿತ ವರ್ಗ ಪ್ರಭುತ್ವವನ್ನು ಬಲಮುಖಿಯಾಗಿ ನಿಲ್ಲಿಸಿತು. ಹಸಿರುಕ್ರಾಂತಿಯ ನಂತರದ ೧೯೮೦ರಿಂದ ೧೯೯೦ ಒಂದು ರೀತಿಯಲ್ಲಿ ಸ್ಥಿತ್ಯಂತರದ, ಬಂಡವಾಳಶಾಹಿ ವ್ಯವಸ್ಥೆ ಮೇಲುಗೈ ಪಡೆದ ಕಾಲ. ಹೊಸ ಆರ್ಥಿಕ ನೀತಿಯ ಹೆಸರಿನಲ್ಲಿ ಉದ್ಯಮ ಮತ್ತು ಉದ್ಯಮಿಗಳ ಹಿತಾಸಕ್ತಿಗೆ ಪೂರಕವಾಗಿ ಭಾರತದ ಪ್ರಭುತ್ವ ವಾಲಿತು. ೧೯೯೧ರ ಉದಾರೀಕರಣದ ನಂತರ ಭಾರತದ ಪ್ರಭುತ್ವ ವಿಶ್ವ ವಾಣಿಜ್ಯ ಸಂಸ್ಥೆಯ ನಿರ್ದೇಶನಕ್ಕೊಳಪಟ್ಟು ಸಂಪೂರ್ಣವಾಗಿ ಕಲ್ಯಾಣ ರಾಜ್ಯದಿಂದ ಮತ್ತೆ ಕಂಪನಿ ರಾಜ್ಯವಾಗಿ ಪರಿವರ್ತನೆಯಾಯಿತು.

ಜಾಗತೀಕರಣ, ಖಾಸಗೀಕರಣ, ಉದಾರೀಕರಣ ಈ ತ್ರಿಕರಣದ ನೀತಿಗಳು ನವಸಾಮ್ರಾಜ್ಯಶಾಹಿ ಶಕ್ತಿಗಳು ಹೆಣೆದ ಬಲೆಗಳು. ಬ್ರಿಟಿಷರು ಹೋದಮೇಲೆ ಬಹುರಾಷ್ಟ್ರೀಯ ಕಂಪನಿಗಳು ಮತ್ತೆ ಭಾರತದ ಪ್ರಭುತ್ವವನ್ನು ನಿಯಂತ್ರಣಕ್ಕೆ ತೆಗೆದುಕೊಂಡವು. ಕಾಂಗ್ರೆಸ್ ಪಕ್ಷ ಸ್ವಾತಂತ್ರ್ಯ ಹೋರಾಟದಲ್ಲಿ ಮುಂಚೂಣಿ ಪಾತ್ರ ವಹಿಸಿದ್ದರೆ, ಅದೇ ಕಾಂಗ್ರೆಸ್ ಪಕ್ಷ ೧೯೯೧ರಲ್ಲಿ ಜಾಗತೀಕರಣದ ನೀತಿಗೆ ಮಣೆ ಹಾಕಿ ಸ್ವಾತಂತ್ರ್ಯ, ಸ್ವಾವಲಂಬನೆಯನ್ನು ನಾಶಮಾಡಿತು. ಕಾಂಗ್ರೆಸ್ ನೀತಿಗಳನ್ನು ಖಂಡಿಸಿ ಇಂದು ಅಧಿಕಾರಕ್ಕೆ ಬಂದ ಬಿಜೆಪಿ ಅದೇ ನೀತಿಗಳನ್ನು ಇನ್ನೂ ತೀವ್ರವಾಗಿ ಜಾರಿ ಮಾಡುತ್ತಿದೆ. ಅಂದು ನರಸಿಂಹರಾವ್, ಮನಮೋಹನ ಸಿಂಗ್ ಅವರಿಂದ ಆರಂಭವಾದ ಭಾರತದ 'ನವಗುಲಾಮಗಿರಿ'ಯ ಪ್ರಭುತ್ವ ಇಂದು ನರೇಂದ್ರ



ಕಾರ್ಪೊರೇಟ್ ಕೃಷಿಯಲ್ಲಿ ಯಾಂತ್ರೀಕರಣ



ಮೋದಿಯವರಿಂದ ವೈಭವೀಕರಿಸಲ್ಪಡುತ್ತಿದೆ. ೧೯೯೧ರಿಂದ ಇಂದಿನವರೆಗೆ, ಅಂದರೆ ಅಂದಿನ ಪ್ರಧಾನಿ ನರಸಿಂಹರಾಯರಿಂದ ಇಂದಿನ ಪ್ರಧಾನಿ ನರೇಂದ್ರ ಮೋದಿಯವರ ವರೆಗಿನ ಆಡಳಿತದಲ್ಲಿ, ನೇಗಿಲಯೋಗಿಯ ಗತಿ ಏನಾಗಿದೆ ಎಂದು ಗಮನಿಸಬೇಕು.

**ಅಳುವಾ ಯೋಗಿಯ ನೋಡಲ್ಲಿ**

ಉದಾರೀಕರಣದ ನೀತಿಯ ಪರಿಣಾಮವಾಗಿ ೧೯೯೫ರಿಂದ ಇಂದಿನವರೆಗೆ ಮೂರೂವರೆ ಲಕ್ಷ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ೧೯೯೭ರಲ್ಲಿ ಬೀಜೋತ್ಪಾದನೆ ಕ್ಷೇತ್ರವನ್ನು ಬಹುರಾಷ್ಟ್ರೀಯ ಕಂಪನಿಗಳಿಗೆ ಮುಕ್ತವಾಗಿಸ ಲಾಯಿತು. ಆ ವರ್ಷ ಭಾರತದಲ್ಲಿ ೧೩೬೨೨ ರೈತರು ಆತ್ಮಹತ್ಯೆ ಮಾಡಿಕೊಂಡರು. ಅದು ಕಾಕತಾಳೀಯವಲ್ಲ. ಆತ್ಮಹತ್ಯೆಯ ವರದಿಗಳು ಮುಂದುವರೆದಿವೆ. ನಮ್ಮ ಈಗಿನ ಪ್ರಧಾನಿ ನರೇಂದ್ರ ಮೋದಿಯವರು ರೈತರ ಸಾಲ ಮನ್ನಾ ಮಾಡುವುದಿಲ್ಲ ಎಂದು ಘೋಷಿಸಿದ್ದಾರೆ. ಆದರೆ ಉದ್ಯಮಿಗಳು ಸಾರ್ವಜನಿಕ ಬ್ಯಾಂಕ್‌ನಲ್ಲಿಟ್ಟ ಜನರ ಹಣವನ್ನು ಸಾಲ ಪಡೆದು ಮರುಪಾವತಿ ಮಾಡದೇ ಇದ್ದಾಗ ಅದನ್ನು ಮನ್ನಾ ಮಾಡುತ್ತಾರೆ, ಅದೂ ಲಕ್ಷ ಕೋಟಿಗಳಲ್ಲಿ. ರೈತ ಬಳಸುವ ಕೃಷಿ ಸಲಕರಣೆಗಳ ಮೇಲೆ, ಉತ್ಪನ್ನಗಳ ಮೇಲೆ ಟ್ಯಾಕ್ಸ್ ಹೆಚ್ಚಿಸುತ್ತಾರೆ. ಕಾರ್ಪೊರೇಟ್ ಕಂಪನಿಗಳಿಗೆ ಐದು ಲಕ್ಷ ಕೋಟಿಯಷ್ಟು ತೆರಿಗೆ ರಿಯಾಯಿತಿ ಕೊಡುತ್ತಾರೆ. ಕೃಷಿ ಕ್ಷೇತ್ರಕ್ಕೆ ನಿಗದಿತವಾದ ೧೦ ಲಕ್ಷ ಕೋಟಿ ಸಾಲದ ಮೊತ್ತದಲ್ಲಿ ಶೇ. ೬೦ರಷ್ಟು ಕೃಷಿ ಉದ್ಯಮಿಗಳಿಗೆ ನಿಯಮ ಬಾಹಿರವಾಗಿ ಕೊಡುತ್ತಾರೆ. ಈ "ಬಡ" ಉದ್ಯಮಿಗಳು ಯಾರೆಂದರೆ ಗೋದ್ರೆಜ್, ಐಟಿಸಿ, ಪೆಪ್ಸಿ, ಟಾಟಾ ಮುಂತಾದವರು. ಮುಂದೆ ಆ ಸಾಲವನ್ನೂ ಮನ್ನಾ ಮಾಡುತ್ತಾರೆ. ಅಮೆರಿಕ ನಾಯಕತ್ವದ ವಿಶ್ವವ್ಯಾಪಾರಿ ಸಂಘಟನೆಯ ಅಪ್ಪಣೆಯಂತೆ ಭಾರತದ ರೈತನಿಗೆ ಸಹಾಯಧನ ಕಡಿಮೆ ಮಾಡುತ್ತಾರೆ. ಈಗ ನಮ್ಮ ರೈತನಿಗೆ ಸಿಗುವ ಸಹಾಯಧನ ತಲಾ ರೂ. ೧೫,೩೯. ಈ ಸಹಾಯಧನವೂ ಕಂಪನಿಗಳ ಪಾಲಾಗುತ್ತದೆ. ಭಾರತದ ರೈತನಿಗೆ ಸಹಾಯಧನ ಕಡಿಮೆ ಮಾಡಲು ಹೇಳುವ ಅಮೆರಿಕ ತನ್ನ ರೈತರಿಗೆ ತಲಾ ೬ ಲಕ್ಷ ೪೧ ಸಾವಿರ ಸಹಾಯಧನ ಕೊಡುತ್ತದೆ. ಯೂರೋಪ್ ದೇಶಗಳಲ್ಲಿ ಈ ಸಹಾಯಧನ ಸರಾಸರಿ ತಲಾ ೧ ಲಕ್ಷ ೩೨ ಸಾವಿರ ಇದೆ. ಭಾರತದ ಬ್ಯಾಂಕುಗಳಲ್ಲಿರುವುದು ಸಾಮಾನ್ಯ ಜನರ ಹಣ. ಆ ಹಣವನ್ನು ಟಾಟಾ, ಅದಾನಿ, ಅಂಬಾನಿ, ಮಲ್ಯ, ನೀರವ್ ಮೋದಿಯಂಥ ಕಾರ್ಪೊರೇಟ್ ಕುಳಗಳು ಸುಲಭವಾಗಿ ಲಪಟಾಯಿಸುತ್ತಾರೆ. ೨೦೧೪ರ ವಿಶ್ವ ಬ್ಯಾಂಕ್ ವರದಿ ಹೇಳುತ್ತದೆ: 'ಭಾರತದಲ್ಲಿ ಶೇಕಡಾ ೭೩ ರೈತರಿಗೆ ಸಾಂಸ್ಥಿಕ ಮೂಲಗಳ ಸಾಲ ಸಿಗುವುದಿಲ್ಲ' ಎಂದು. ಬೆಳೆ ವಿಮೆ ಎನ್ನುವುದೊಂದು ಭ್ರಮೆ. ಪ್ರಧಾನಮಂತ್ರಿ ಫಸಲ್ ಬಿಮಾ ಯೋಜನೆ ವಿಮಾ ಕಂಪನಿಗಳ ಅದರಲ್ಲೂ ಖಾಸಗಿ ವಿಮಾ ಕಂಪನಿಗಳ ತಿಜೋರಿ ತುಂಬಿಸಿದ್ದು ನಮ್ಮ ಕಣ್ಣ ಮುಂದಿದೆ. ಪ್ರೀಮಿಯಂ ತುಂಬಿದ ರೈತರಿಗೆ ಅವರು ಕಟ್ಟಿದಷ್ಟೂ ಹಣ ಬರಲಿಲ್ಲ. ಕೈಗಾರಿಕೆಗಳಿಗೆ ನಿರಂತರ ಹರಿಯುವ ವಿದ್ಯುತ್ ಕೃಷಿಗೆ ಸಿಗುವುದು ಶೇಕಡಾ ೨೧ರಿಂದ ಶೇಕಡಾ ೨೪ ಮಾತ್ರ. ಕಳೆದ ಹತ್ತು ವರ್ಷಗಳಲ್ಲಿ ಗ್ರಾಮೀಣ ಅಭಿವೃದ್ಧಿಗಾಗಿನ ವೆಚ್ಚ ಶೇಕಡಾ ೬೦ ಕುಸಿತಗೊಂಡಿದೆ. ಆತ್ಮಹತ್ಯೆ ಮಾಡಿಕೊಂಡ ಮೂರೂವರೆ ಲಕ್ಷ ರೈತರಲ್ಲಿ ಶೇಕಡಾ ೭೮ ಸಣ್ಣ ಅತಿಸಣ್ಣ ರೈತರು (ಇವರಲ್ಲಿ ಶೇಕಡಾ ೭೦ರಷ್ಟು ಜನ ೩೦ರಿಂದ ೫೦ರ ವಯೋಮಾನದವರು) ಕಾರಣ. ಅವರು ಕೃಷಿಭೂಮಿಯಿಂದ ಹೊರಬೀಳುವ ಅಪಾಯದಲ್ಲಿದ್ದಾರೆ. ರೈತರ ಆತ್ಮಹತ್ಯೆಗೆ

ಕಾರಣಗಳನ್ನು ಕೃಷಿ ಸಾಲದ ಜೊತೆಗೆ ಸಾಮಾಜಿಕ ಸಮಸ್ಯೆಗಳೂ ಇವೆಯೆಂದು ನಮ್ಮ ಪಂಡಿತರು ಹೇಳುತ್ತಾರೆ. ಅಂದರೆ ನಮ್ಮ ರೈತ ಕೃಷಿಯನ್ನು ನಂಬಿ ಸಾಮಾಜಿಕವಾಗಿ ತಲೆಯೆತ್ತಿ ನಿಲ್ಲಲಾಗದಂಥ ಸ್ಥಿತಿಯಲ್ಲಿದ್ದಾನೆ. ಆ ಕಾರಣಕ್ಕೆ ಅವನು ಕೃಷಿಯನ್ನು ತೊರೆಯಲು ಸಿದ್ಧನಾಗಿದ್ದಾನೆ. ಸಾರ್ವಜನಿಕ ಬ್ಯಾಂಕ್‌ಗಳಲ್ಲಿ ಜನರಿಟ್ಟ ಹಣವನ್ನು ಸಾಲವಾಗಿ ಪಡೆದು, ಸಾಲ ಮರುಪಾವತಿಸದೆ ಮೋಸ ಮಾಡಿದ ಅದಾನಿ, ಅಂಬಾನಿಯಂಥವರು ಜಗತ್ತಿನ ಸಿರಿವಂತರ ಪಟ್ಟಿಯಲ್ಲಿದ್ದಾರೆ. ಇಷ್ಟೆಲ್ಲ ಆದರೂ ದೇಶದ ಉದ್ಯೋಗಗಳಲ್ಲಿ ಕೃಷಿಕ್ಷೇತ್ರ ಶೇಕಡಾ ೫೨ರಷ್ಟು ಉದ್ಯೋಗಗಳನ್ನು ಕೊಟ್ಟಿದೆ. ಆದರೆ ಇದ್ದ ಆ ನೆಲವನ್ನೂ ಕಳೆದುಕೊಂಡು ರೈತ ವಲಸೆ ಹೋಗುತ್ತಿದ್ದಾನೆ.

ಭಾರತದ ಕೃಷಿಭೂಮಿ ೧೯೮೦-೮೧ರಲ್ಲಿ ೧೮೫.೦೯ ಮಿಲಿಯನ್ ಹೆಕ್ಟೇರ್ ಇತ್ತು. ಇಂದು ಅದು ೧೫೦ ಮಿಲಿಯನ್ ಹೆಕ್ಟೇರ್‌ಗೆ ಇಳಿದಿದೆ. ಹೆಚ್ಚಿನ ಭೂಮಿ ಉದ್ಯಮಿಗಳಿಗೆ, ನಗರಾಭಿವೃದ್ಧಿಗೆ ಹೋಗಿದೆ. ಒಂದು ಕಡೆ ರೈತ ಭೂಮಿ ಕಳೆದುಕೊಂಡು ಬೀದಿಗೆ ಬರುತ್ತಿದ್ದಾನೆ. ಇನ್ನೊಂದು ಕಡೆ ಕಂಪನಿ ಕೃಷಿಗಾಗಿ ಸಿದ್ಧತೆ ನಡೆದಿದೆ. ಅಂದು ಉಳುವವನಿಗೆ ಭೂಮಿ, ಇಂದು ಆಳುವವನಿಗೆ ಭೂಮಿ. ಆಳುವವನು ಭೂಸ್ವಾಧೀನದ ಮೂಲಕ ಆ ಭೂಮಿಯನ್ನು ಕಂಪನಿಗಳಿಗೆ ಕೊಡುತ್ತಾನೆ. ಅದಕ್ಕಾಗಿ ಮೋದಿಯವರು ಹೊಸ ಭೂಸ್ವಾಧೀನ ಕಾಯ್ದೆಯನ್ನು ಸಿದ್ಧಪಡಿಸಿದ್ದಾರೆ. ಅದನ್ನಿನ್ನೂ ಜಾರಿಗೆ ತರಲಾಗಿಲ್ಲ ಎಂಬ ಬೇಸರ ಇದೆ ಅವರಿಗೆ. ಇದನ್ನೇ ಕಲ್ಯಾಣ ರಾಜ್ಯ ಬದಲಾಗಿ ಕಂಪನಿ ರಾಜ್ಯ ನಿರ್ಮಾಣ ಎನ್ನುವುದು. ಈಗ ಹಾಡಬೇಕಿದೆ.... 'ಅಳುವ ಯೋಗಿಯ ನೋಡಲ್ಲಿ.'

**ನಾಳಿನ ಭಾರತ**

ನಮ್ಮ ನೇಗಿಲ ಯೋಗಿಯ ನೇಗಿಲನ್ನೂ ಕಸಿದು, ಭೂಮಿಯನ್ನು ಕಸಿದು ಅವನನ್ನು 'ಫಾರ್ಮರ್ ಪ್ರೊಡ್ಯೂಸರ್ ಕಂಪನಿ' ಮಾಲೀಕನನ್ನಾಗಿ ಮಾಡಲು ಹೊರಟಿದ್ದಾರೆ ನಮ್ಮ ಪ್ರಧಾನಿಗಳು. ಅವರು ಹೇಳಿದ ಪ್ರಕಾರ ೨೦೨೨ಕ್ಕೆ ನಮ್ಮ ರೈತರ ಆದಾಯ ದ್ವಿಗುಣವಾಗುತ್ತದೆ ಎಂದರೆ ಮುಂದೆ ಕೃಷಿಕ್ಷೇತ್ರಕ್ಕೆ ಬರುವ ಕಾರ್ಪೊರೇಟ್ ಕಂಪನಿಗಳ ಆದಾಯ ದ್ವಿಗುಣ ಎಂದರ್ಥ. ಈಗಾಗಲೇ ಅಂಬಾನಿ ಕೊತ್ತಂಬರಿ, ಕರಿಬೇವು ಮಾರುತ್ತಿದ್ದಾನೆ (ರಿಲಯನ್ಸ್ ಫ್ರೆಶ್) ಐಟಿಸಿ ಕಂಪನಿ ಗೋದಿ ಹಿಟ್ಟು (ಆಶೀರ್ವಾದ) ಮಾರುತ್ತಿದೆ, ಪೆಪ್ಸಿಯವನು ಚಿಪ್ಸ್ ಮಾರುತ್ತಿದ್ದಾನೆ. ಗೋದ್ರೆಜ್, ಕಾರ್ಗಿಲ್, ಮನ್ಸಾಂಟೋ, ವಾಲ್ ಮಾರ್ಟ್.... ಇಂಥ ರೈತರ ದೊಡ್ಡ ಗುಂಪೇ ಸಿದ್ಧವಾಗಿ ನಿಂತಿದೆ, ಭಾರತದಲ್ಲಿ ಒಕ್ಕಲುತನ ಮಾಡಲು. ಕೃಷಿ ಅಭಿವೃದ್ಧಿ ಪಡಿಸಲು ಅವರನ್ನೆಲ್ಲಾ ಆಹ್ವಾನಿಸಿ, ಅಡೆತಡೆ ತೆಗೆದು, ಮೈದಾನ ನೆಲಸಮ ಮಾಡಿ ನಮ್ಮ ನೇಗಿಲಯೋಗಿಯನ್ನು ಅವರೊಡನೆ ಕುಸ್ತಿಯಾಡಲು, ಅಂತರರಾಷ್ಟ್ರೀಯ ಕೃಷಿ ಕ್ರೀಡಾಕೂಟ ನಡೆಸಲು ಅನುವಾಗುವಂತೆ ನಮ್ಮ ಪ್ರಧಾನಿಗಳು ಹೊಸ ಕಾನೂನು ತರುತ್ತಿದ್ದಾರೆ.

ಅಮೇರಿಕದಲ್ಲಿ ಕಾರ್ಪೊರೇಟ್ ಕಂಪನಿಗಳು ಕೃಷಿಕ್ಷೇತ್ರಕ್ಕೆ ನುಗ್ಗುವಾಗ ೧೮೩೦ರಲ್ಲಿಯೇ ಅಲ್ಲಿ ರೈತರ ರಕ್ಷಣೆಗಾಗಿ ಕಾನೂನು ತರಲಾಯಿತು. ಕಾಲಕಾಲಕ್ಕೆ ಹೊಸ ಕಾನೂನು ತರಲಾಗುತ್ತಿದೆ. ಆದರೆ ನಮ್ಮ ದೇಶದಲ್ಲಿ 'ಕಂಪನಿ ಕೃಷಿ'ಯನ್ನು ತರಲು ರೈತನನ್ನು ಭೂಮಿಯಿಂದ ಹೊರದಬ್ಬಲು ಕಾನೂನು ತರಲಾಗುತ್ತಿದೆ. ಅಮೇರಿಕದ ಪ್ರಭುತ್ವ ಜಗತ್ತನ್ನೇ ಲೂಟಿ ಮಾಡಿದರೂ ತನ್ನ ಪ್ರಜೆಗಳಿಗೆ ಹೆದರುತ್ತದೆ. ಲೂಟಿಯ ಒಂದಷ್ಟು ಪಾಲನ್ನು ಚೆಲ್ಲಿ ಅವರನ್ನು ಸಂತೈಸುತ್ತದೆ. ಆದರೆ ನಮ್ಮ ಪ್ರಭುಗಳು ಒಂದು ಬಣ ಹಿಂದುತ್ವದ ಘೋಷಣೆ ಹೇಳಿ ಅಧಿಕಾರ ಹಿಡಿಯುತ್ತದೆ. ಇನ್ನೊಂದು ಬಣ ಸೆಕ್ಯೂಲರಿಸಂ ಹೆಸರು ಹೇಳಿ ಅಧಿಕಾರ ಹಿಡಿಯಲು ಯತ್ನಿಸುತ್ತದೆ ಇವರಿಬ್ಬರ ಗುರಿ ಒಂದೇ, ಕಾರ್ಪೊರೇಟ್ ಕಂಪನಿಗಳ ಗುಲಾಮಗಿರಿ. ಕೆಂಪುಕೋಟೆಯನ್ನು ಕೊಟ್ಟಾಯ್ತು. ಇನ್ನುಳಿದಿರುವುದು ಪಾರ್ಲಿಮೆಂಟ್ ಭವನ. ಇವರನ್ನು ಆಯ್ಕೆಮಾಡುವ ರೈತರಾದಿಯಾಗಿ ಸಮಗ್ರ ಪ್ರಜೆಗಳು ರಾಮಮಂದಿರ ಬೇಕಾ ಬೇಡವಾ, ಮಾಂಸ ತಿನ್ನೋದು ಸರಿನಾ





ತಪ್ಪಾ, ಮೋದಿ ಬೆಸ್ಟಾ, ರಾಹುಲ್ ಬೆಸ್ಟಾ, ಗಂಭೀರ ಚರ್ಚೆಯಲ್ಲಿದ್ದಾರೆ.

**ಅಗ್ರಿ ಬಿಸಿನೆಸ್ ಬದಲು ಅಗ್ರಿಕಲ್ಚರ್**

ರೈತ ಸಮುದಾಯ, ದೇಶದ ಜನತೆ, ಜನಪರ ಹೋರಾಟಗಾರರು, ರಾಜಕೀಯ ಚಿಂತಕರು, ಕೃಷಿ ತಜ್ಞರು, ಅರ್ಥಶಾಸ್ತ್ರಜ್ಞರು, ವಿಜ್ಞಾನಿಗಳು ಗಂಭೀರವಾಗಿ ಚಿಂತಿಸಬೇಕಿದೆ. ಭಾರತ ತನ್ನ ಇತಿಹಾಸದಲ್ಲಿ ಭೀಕರ ಬರಗಾಲಗಳನ್ನು ಕಂಡಿದೆ. ಡೋಗಿ ಬರ, ಸಜ್ಜೆಬರ, ಹಸಿಬರ, ಒಣಬರ ಎಂಥ ಬರಗಾಲ ಬಂದರೂ ನಮ್ಮ ರೈತರು ಬದುಕಲು ಹೋರಾಡಿದ್ದಾರೆ, ವಲಸೆ ಹೋಗಿದ್ದಾರೆ. ಹುಲ್ಲು ತಿಂದಿದ್ದಾರೆ, ಸತ್ತ ಪಕ್ಷಿ, ಪ್ರಾಣಿಗಳನ್ನು, ಅಷ್ಟೇ ಏಕೆ ಹಸಿವಿನಿಂದ ಸತ್ತ ಮನುಷ್ಯರನ್ನೂ ಸಹ ತಿಂದು ಬದುಕಲು ಪ್ರಯತ್ನಿಸಿದ್ದಾರೆ. ೭೦ರ ದಶಕದವರೆಗೂ ನಮ್ಮ ಪೀಳಿಗೆಯವರು ಭೀಕರ ಬರಗಾಲವನ್ನು ನೋಡಿದ್ದೇವೆ. ಅಂಥ ಸಂದರ್ಭದಲ್ಲಿಯೂ ನಮ್ಮ ರೈತರು ಸರಕಾರಗಳ ಸಹಾಯವನ್ನೂ ನಿರೀಕ್ಷಿಸದೆ ಬದುಕಿಗಾಗಿ ಹೋರಾಡಿದ್ದಾರೆ. ಆತ್ಮಹತ್ಯೆ ಮಾಡಿಕೊಂಡಿರಲಿಲ್ಲ. ಆದರೆ ಈಗ ಎರಡೂವರೆ ದಶಕದಲ್ಲಿ ಅಂಥ ಬರಗಾಲಗಳಿಲ್ಲದಿದ್ದರೂ ಮೂರೂವರೆ ಲಕ್ಷ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇದಕ್ಕೆ ಕಾರಣ 'ಅಗ್ರಿಕಲ್ಚರ್' ಎನ್ನುವ ಪದ, ವಿಧಾನ ಹೋಗಿ ಈಗ 'ಅಗ್ರಿ ಬಿಸಿನೆಸ್' ಎಂಬ ಪದ, ವಿಧಾನ ಜಾರಿಯಾಗಿರುವುದು ಮತ್ತು ವಾಣಿಜ್ಯ ನೀತಿ ಕೃಷಿಯ ಪ್ರಮುಖ ನೀತಿಯಾಗಿರುವುದು. 'ಕೃಷಿ ಸಂಸ್ಕೃತಿ' ಸಮಾಜಮುಖಿಯಾಗಿರುತ್ತದೆ, ಜನಪರವಾಗಿರುತ್ತದೆ. 'ಕೃಷಿ ವ್ಯಾಪಾರ' ಮಾರುಕಟ್ಟೆ ಮುಖಿಯಾಗಿರುತ್ತದೆ. ಉದ್ಯಮಿಗಳ ಪರವಾಗಿರುತ್ತದೆ. ಕೃಷಿ ವ್ಯಾಪಾರ ಕೃಷಿಕನ ಬದುಕಿನ ಒಂದು ಭಾಗವೇ ಹೊರತು ವ್ಯಾಪಾರವೇ ಕೃಷಿಕನ ಬದುಕಿನ ಗುರಿಯಲ್ಲ. ಕೃಷಿ ವೈಜ್ಞಾನಿಕ, ತಾಂತ್ರಿಕ, ಹೊಸ ಸಂಶೋಧನೆಗಳ ಪರಿಣಾಮವಾಗಿ ಕೈಗಾರಿಕೆಗಳ ರೀತಿ ಬೆಳೆಯಲೇಬೇಕು, ನಿಜ. ಆದರೆ ಅದನ್ನು ಬೆಳೆಸುವವನು ನಮ್ಮ ರೈತನೇ ಆಗಬೇಕು. ದೇಶ, ವಿದೇಶದ ಬಹುರಾಷ್ಟ್ರೀಯ ಕಂಪನಿಗಳಲ್ಲ.

ನಮ್ಮ ರೈತರು ಜಾತಿ, ಧರ್ಮ, ಕಾರ್ಪೊರೇಟ್ ಕಂಪನಿಗಳ ಪರವಾಗಿರುವ ರಾಜಕೀಯ ಪಕ್ಷಗಳನ್ನು ಧಿಕ್ಕರಿಸಿ 'ಅಗ್ರಿಕಲ್ಚರ್' (ಕೃಷಿ ಸಂಸ್ಕೃತಿ) ಉಳಿಸಬೇಕಿದೆ. ಆ ಮೂಲಕ ನಮ್ಮ ನೇಗಿಲಯೋಗಿ ಬೆಳೆಯಬೇಕಿದೆ. ಈ ಕೆಲಸವನ್ನು ಸಂತಾಲ ಆದಿವಾಸಿಗಳು, ನೀಲಿ ಬೆಳೆಗಾರರು, ರೈತ ಬಂಡಾಯಗಾರರು ಆರಂಭಿಸಿದ ದಾಖಲೆ ನಮ್ಮ ಇತಿಹಾಸದಲ್ಲಿಯೇ ಇದೆ. ಅವರು ಮಾಡಿದ ತ್ಯಾಗ – ಬಲಿದಾನಗಳನ್ನು ನೆನೆಯಬೇಕು. ನಾವು ಅವರಿಗಿಂತ 'ಬುದ್ಧಿವಂತರು' ಎಂದು ಕೊಂಡಿದ್ದೇವೆ. ಹಾಗಂದುಕೊಂಡಿದ್ದರೆ ನಿಂತ ನೆಲ ಕುಸಿಯುತ್ತಿರುವುದನ್ನು ಅರ್ಥಮಾಡಿಕೊಳ್ಳಬೇಕು. ಅವರಿಗಿದ್ದ ಕನಿಷ್ಠ ತಿಳುವಳಿಕೆಯನ್ನಾದರೂ ನಾವು ಪಡೆಯಬೇಕು.

**ಡಾ॥ ಸಿದ್ದನಗೌಡ ಪಾಟೀಲ**
ನಂ. ೧೫, ಎಂಬೆಸಿ ಸೆಂಟರ್
ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್
ಬೆಂಗಳೂರು – ೫೬೦ ೦೦೧




# ಸ್ವಾತಂತ್ರ್ಯ ಯೋಧನ ಮರಣ

**ಒ**ಂದು ವಾರದಿಂದ ಬಿಡದ ಮಳೆ. ಸೂರ್ಯನ ಮುಖವನ್ನೇ ಕಾಣದ ದಿನಗಳು. ಬಹುಶಃ ನಾನು ನಗರದಿಂದ ಹಳ್ಳಿಗೆ ಬಂದ ಹತ್ತು ವರ್ಷಗಳಲ್ಲಿ ಎಂದೂ ಕಾಣದಂಥ ಮಳೆ ಈ ವರ್ಷ ಬೀಳುತ್ತಿದೆ. ಬಿರು ಬಿಸಿಲಿಗೆ ಒಣಗಿ ಹೋಗಿದ್ದ ಭೂಮಿ ತಂಪಾಗಿದೆ. ಹಿತವಾದ ಮಣ್ಣಿನ ವಾಸನೆ. ಬಾಲ್ಯ ನೆನಪಾಯಿತು. ಹಳ್ಳಿಗೆ ಬಂದ ಮೇಲೆ ಕರುಳಬಳ್ಳಿಯ ಕೂಡಿದ ಸಂತಸ. ಆದರೆ ಹೆಂಡತಿ ಮಕ್ಕಳಿಗೆ ಅದು ಖುಷಿಯ ವಿಷಯವಾಗಿರಲಿಲ್ಲ. ಆದರೂ ಅನಿವಾರ್ಯ. ನಾನು ಸ್ವಲ್ಪ ಹಠಮಾರಿ. ಅಪ್ಪ ಯಾವುದಾದರೂ ಸರಕಾರಿ ನೌಕರಿ ಮಾಡು ಎಂದಾಗ ತಿರಸ್ಕರಿಸಿ ನಗರದಲ್ಲಿ ಒಂದು ದಿನಪತ್ರಿಕೆ ಮಾಡುವ ಸಾಹಸ ಮಾಡಿದೆ. ಪತ್ರಿಕೆಯಿಂದ ಸಂಪಾದನೆಯಿರಲಿಲ್ಲವಾದರೂ ಸಂತಸವಿತ್ತು. ಹೊಟ್ಟೆ ಬಟ್ಟೆಗೆ ಕೊರತೆಯಿರಲಿಲ್ಲ. ಹೀಗೇ ನಗರ – ಹಳ್ಳಿಯ ಬದುಕನ್ನು ಹೋಲಿಸುತ್ತ ಅಂಗಳದಲ್ಲಿ ಕುಳಿತು ಮಳೆ ಮೋಡಗಳ ಆಟ ನೋಡುತ್ತಿರುವಾಗಲೇ ಮಗ ಮೊಬೈಲ್ ಹಿಡಿದು ಓಡಿ ಬಂದ. ಯಾವುದೋ ಹೊಸ ನಂಬರು. ಆನ್ ಮಾಡಿದೆ. ಆಕಡೆಯಿಂದ 'ರಾಜೂ...' ಹೆಣ್ಣು ಧ್ವನಿ. 'ಹೌದು ನಾನೇ'. ಆಕಡೆಯ ಧ್ವನಿ ನಡುಗಲಾರಂಭಿಸಿತು. 'ಯಾಕೋ ಮಗನೆ ಮರ್ತೇ ಬಿಟ್ಯಾ...' ಪರಿಚಿತ ಧ್ವನಿ. ಹೌದು ಅವರೇ ಗಂಗಮ್ಮ. 'ಹೇಳಿಮಾ...' ಅಳಲಾರಂಭಿಸಿದರು. ಕರುಳೇ ಬಾಯಿಗೆ ಬಂದಂಥ ಅಳು. ಸುಮ್ಮನಿದ್ದೆ. ಬೀಳುತ್ತಿರುವ ಮಳೆಹನಿಗಳು ಅವರ ಕಣ್ಣೀರಿನಂತೆ ಭಾಸವಾದವು. ಆದರೂ ನನಗೆ ಮಾತನಾಡುವ ಮನಸಾಗಲಿಲ್ಲ. ಕೊನೆಗೆ ಅವರೇ ಹೇಳಿದರು 'ರಾಜೂ ನಾನಿನ್ನ ಬಾಳದಿನಾ ಬದುಕೂದಿಲ್ಲ. ಒಂದಸಲ, ಒಂದೇ ಒಂದ ಸಲ ಬಂದು ಹೋಗು. ಒಂದಸಲಾ ನಿನ್ನ ನೋಡಿ ಕಣ್ಣ ಮುಚ್ತೇನಿ. ಸಾಯಿಬ್ರು ಒಂದು ಪುಸ್ತಕಾ ನಿನ್ನ ಹೆಸರೀಗಿ ಬರದಿಟ್ಟು ಹೋಗ್ಯಾರಾ, ಇತ್ತೀಚಿಗಿ ಸಿಕ್ತು. ನಿನ್ನ ಫೋನ್ ನಂಬರ್ ಸಿಗಲಾರ್ದಕ ತಿಳಸಿರಲಿಲ್ಲ. ಒಂದಸಲಾ ಬಂದ ಹೋಗ ಮಗನೆ. ನಾನೂ ಸಾಯಿಬ್ರ ಪಾದಾ ಸೇರೂ ಕಾಲ ಬಂದೈತಿ.' ಮತ್ತೆ ಅಳು. ದುಃಖದ ಆಳ ತೀವ್ರವಾಗಿತ್ತು. ನನಗೂ ಸಂಕಟ ಆಯ್ತು. 'ಸರಿ ಗಂಗಮ್ಮಾ ಬರ್ತೀನಿ' ಅಂತ ಹೇಳಿ ಫೋನ್ ಕಟ್ ಮಾಡಿದೆ.

ಕಸಿವಿಸಿ, ಸಂಕಟ ಏಕಕಾಲಕ್ಕೆ ಆರಂಭವಾದವು. ಯಾವುದು ಸರಿ, ಯಾವುದು ತಪ್ಪು, ನಂಬಿಕೆ, ಅಪನಂಬಿಕೆ, ಎಲ್ಲವನ್ನೂ ತೊರೆದು ಹಳ್ಳಿಗೆ ಬಂದು ದಶಕವೇ ಕಳೆಯಿತು. ಆದರೆ ಮತ್ತೆ ಆ ಸೆಳೆತ, ನಾನು ಮಾಡಿದ್ದು ಸರಿಯೇ, ತಪ್ಪೇ ಊಹೂಂ... ಒಂದೂ ಅರ್ಥವಾಗುತ್ತಿಲ್ಲ. ಆದರೂ ಬಾಪೂಜಿ... ಹೌದು, ದೇಶ ಗಾಂಧೀಜಿಯವರನ್ನು ಬಾಪೂಜಿ ಎಂದು ಕರೆದರೆ ನಾನು ಸ್ವಾತಂತ್ರ್ಯ ಯೋಧ ಬಸವರಾಜಪ್ಪನವರನ್ನು ಬಾಪೂಜಿ ಎನ್ನುತ್ತಿದ್ದೆ. ನನ್ನ ಪತ್ರಿಕೆಯಲ್ಲಿ ಬಾಪೂಜಿಯವರ ಹೆಸರಿಲ್ಲದ, ಸುದ್ದಿ ಇಲ್ಲದ ದಿನಗಳೇ ವಿರಳ. ಅವರ ಬದುಕೂ ಹಾಗಿತ್ತು. ಅವರು ನನ್ನ ಆದರ್ಶವಾಗಿದ್ದರು. ನಾನು

**ಶ್ರೀಸುಮಿತ್ರಾಸುತ ಅಗಸಬಾಳ**

ಗಂಗಮ್ಮ ಬಂದಾಗಿನಿಂದ ಬಾಪೂಜಿ ಆರೋಗ್ಯ ಸುಧಾರಿಸಿತು, ಹೆಚ್ಚು ಕ್ರಿಯಾಶೀಲರಾದರು. ಜನರ ಹೋರಾಟಗಳಲ್ಲಿ ಭಾಗವಹಿಸುವುದು, ಸರಕಾರಗಳನ್ನು ತರಾಟೆಗೆ ತೆಗೆದುಕೊಳ್ಳುವುದು, ದಿನಚರಿಯಾಯಿತು. ಸರಕಾರಗಳು ಮುಜುಗರಕ್ಕೊಳಗಾದವು. ಬಾಪೂಜಿಯವರ ಮೇಲೆ ಕೆಂಗಣ್ಣು ಬೀರಿದವು. ಆದರೆ 'ಕಟ್ಟಕಡೆಯ ಮನುಷ್ಯನಿಗೆ ಸ್ವಾತಂತ್ರ್ಯ' ತಲುಪಿಸುವ ಬಾಪೂಜಿ ಗುರಿ ಅಚಲವಾಗಿತ್ತು. ಚಲೇಜಾವ್ ಚಳುವಳಿ ಮಾಡಿದ ಅವರಿಗೆ ಸರಕಾರಗಳು ಮತ್ತೆ ಶ್ರೀಮಂತ ದೇಶಗಳ ಗುಲಾಮರಾಗುತ್ತಿರುವ ನೀತಿ ಸರಿ ಬರಲಿಲ್ಲ. ಅವರ ಟೀಕೆ ತೀಕ್ಷ್ಣವಾಗುತ್ತಲೇ ಹೋಯಿತು. ಸರಕಾರ ಬದಲಾದರೂ, ಯಾವ ಪಕ್ಷ ಬಂದರೂ ನೀತಿಯೊಂದೇ, ಬಾಪೂಜಿ ಸಂಘರ್ಷ ನಿರಂತರವಾಗಿತ್ತು. ದಣಿವರಿಯದ ಜೀವ.



ಅವರ ಅಂತರಾಳದ ಶಿಷ್ಯನಾಗಿದ್ದೆ. ಅವರ ಪ್ರೀತಿಯ ರಾಜಣ್ಣನಾಗಿದ್ದೆ. ವ್ಯವಸ್ಥೆಯ ವಿರುದ್ಧದ ನನ್ನ ಸಿಟ್ಟು ಆಕ್ರೋಶಗಳನ್ನು ತಾತ್ವೀಕರಿಸಿ ನನ್ನೊಳಗಿನ ನನ್ನನ್ನು ಜಾಗೃತಗೊಳಿಸಿದ ಫಿಲಾಸಫರ್ ಆಗಿದ್ದರು ಬಾಪೂಜಿ. ಆದರೆ... ಕೊನೆಯ ದಿನಗಳು ಹಾಗೇಕೆ... ಅವರೊಳಗೊಂದು ಸ್ವಾರ್ಥವಿತ್ತೇ? ಅಥವಾ ನಾನೇ ಅವರು ಹೀಗೇ ಇರಬೇಕೆಂದು ನಿರೀಕ್ಷಿಸಿದೆನೇ? ಅವರೂ ಮನುಷ್ಯರಲ್ಲವೇ? ಬಯಕೆಗಳು ಸಹಜವಲ್ಲವೇ?... ಆದರೂ... ಹತ್ತು ವರ್ಷದ ನಂತರ ಮತ್ತೆ ತಲೆಸುತ್ತತೊಡಗಿತು.

ಬಸವರಾಜು, ಅಂದರೆ ನನ್ನ ಬಾಪೂಜಿ ಶಾಲಾ ಬಾಲಕನಾಗಿದ್ದಾಗಲೇ ಸ್ವಾತಂತ್ರ್ಯ ಚಳುವಳಿಗೆ ಧುಮುಕಿದವರು. ಚಲೇಜಾವ್ ಚಳುವಳಿ ಅವರ ಬದುಕಿಗೊಂದು ತಿರುವು. ಸ್ವಾತಂತ್ರ್ಯ ಹೋರಾಟಗಾರರು ಊರ ಮುಂದೆ ಧ್ವಜ ಸ್ತಂಭ ನೆಟ್ಟು ತ್ರಿವರ್ಣ ಧ್ವಜ ಏರಿಸುವಾಗ ಮೇಲಕ್ಕೆ ಹೋದ ಧ್ವಜ ಗಂಟು ಹಾಕಿಕೊಂಡು ಬಿಚ್ಚಲಿಲ್ಲ. ಅದೆಲ್ಲಿದ್ದನೋ ಈ ಬಾಲಕ ಬಸವರಾಜ ಸರಸರನೇ ಕಂಬ ಹತ್ತಿ ಗಂಟು ಬಿಚ್ಚಿ ಅಲ್ಲಿಂದಲೇ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿ' ಎಂದು ಕೂಗಿದ. ಧ್ವಜದಲ್ಲಿ ಕಟ್ಟಿದ ಹೂಗಳು ಅವನ ತಲೆ ಮೇಲಿದ್ದವು. ಅಷ್ಟರಲ್ಲಿ ಪೊಲೀಸರು ಬಂದು ಲಾಠಿ ಚಾರ್ಜ್ ಮಾಡಿ ಜನರನ್ನು ಓಡಿಸಿ ಧುರೀಣರನ್ನು ವಶಕ್ಕೆ ಪಡೆದರು. ಕಂಬದ ತುದಿಯಲ್ಲಿದ್ದ ಬಸವರಾಜ ಇಡೀ ಊರಿಗೆ ಕೇಳುವ ಹಾಗೆ 'ಬ್ರಿಟಿಷ್ ನಾಯಿಗಳಿಗೆ ಧಿಕ್ಕಾರ' ಎಂದು ಅಲ್ಲಿಂದಲೇ ಕೂಗಿದ್ದ. ಪೊಲೀಸರು ಅವನನ್ನು ಕೆಳಗಿಳಿಸಲು ಹರಸಾಹಸ ಪಟ್ಟರು. ಮೂರುತಾಸು ಕಂಬದ ತುದಿಯಲ್ಲಿ ತ್ರಿವರ್ಣ ಧ್ವಜ ಹಿಡಿದು ಕೂಗುತ್ತಿದ್ದ ಬಾಲಕನನ್ನು ಕೆಳಗಿಳಿಸಲು ಪೊಲೀಸರು ಹಿರಿಯ ಸ್ವಾತಂತ್ರ್ಯ ಹೋರಾಟಗಾರರನ್ನೇ ಕರೆಸಬೇಕಾಯಿತು. ಹಿರಿಯರ ಮನವಿಗೆ ಓಗೊಟ್ಟ ಬಾಲಕ ಭೂಮಿಗೆ ಬಂದ. ಹಿರಿಯ ಸ್ವಾತಂತ್ರ್ಯ ಹೋರಾಟಗಾರರೊಡನೆ ಈ ಬಾಲಕನೂ ಬಂಧನಕ್ಕೊಳಗಾದ. ಈ ಸುದ್ದಿ ಅಂದಿನ ದಿನ ಪತ್ರಿಕೆಗಳಲ್ಲಿ ನಾಡಿನಾದ್ಯಂತ ಹರಡಿತ್ತು. ನನ್ನ ಪತ್ರಿಕೆಯಲ್ಲಿ ನಾನು ಪುನರ್ ಮುದ್ರಿಸಿದ್ದೆ.

ಬಸವರಾಜ ಪುಟ್ಟ ಬಾಲಕ ಎಂದು ಬಿಡುಗಡೆ ಮಾಡಿದ್ದರೂ ಇವನು ಸ್ವಾತಂತ್ರ್ಯ ಹೋರಾಟವನ್ನು ಬಿಡಲಿಲ್ಲ. ಅಂದು ಶಾಲೆ ಬಿಟ್ಟವನು ಮತ್ತೆ ಶಾಲೆ ಸೇರಲಿಲ್ಲ. ಸ್ವಾತಂತ್ರ್ಯ ಹೋರಾಟಗಾರರ ಕಣ್ಮಣಿಯಾಗಿ ಬೆಳೆದ. ದೇಶಕ್ಕೆ ಸ್ವಾತಂತ್ರ್ಯ ಬಂದಾಗ ಬಸು ಹದಿನೇಳರ ಯುವಕ. ತಾನು ಚಲೇಜಾವ್ ಚಳುವಳಿಯಲ್ಲಿ ತ್ರಿವರ್ಣ ಧ್ವಜ ಹಾರಿಸಿ ಪೊಲೀಸರಿಂದ ಏಟು ತಿಂದರೆ ಇಂದು ದೇಶದ ಜನವೇ ಎಲ್ಲೆಡೆ ತ್ರಿವರ್ಣ ಧ್ವಜ ಹಾರಿಸುತ್ತಿದ್ದಾರೆ. ಅಂದು ನನ್ನನ್ನು ಹೊಡೆದು, ಬಂಧಿಸಿದ ಪೊಲೀಸರು ಇಂದು ಆ ಧ್ವಜಕ್ಕೆ ನಮಿಸುತ್ತಿದ್ದಾರೆ ಎಂದು ಸಂಭ್ರಮಿಸಿದ. ರೈತ ಕುಟುಂಬದ ಈ ಹುಡುಗನ ಕನಸು ಸುಂದರವಾಗಿತ್ತು. ಸ್ವಾತಂತ್ರ್ಯ ಎಂದರೆ ಹಸಿವಿಲ್ಲದ, ಬಡತನವಿಲ್ಲದ, ನಿರುದ್ಯೋಗವಿಲ್ಲದ, ಅಸಹಾಯಕರಿಲ್ಲದ ಸ್ವಾಭಿಮಾನದ ದೇಶ ಅವನ ಕನಸಿನಲ್ಲಿತ್ತು. ಒಂದು ದಿನ ಪತ್ರಿಕೆಯಲ್ಲಿನ ಸುದ್ದಿ ನೋಡಿದ. 'ಬಿಳಿಯ ಧಣಿಗಳ ಬದಲು ಕರಿಯ ಧಣಿಗಳಿಗೆ ಅಧಿಕಾರ. ಯಾರಿಗೆ ಬಂತು ಸ್ವಾತಂತ್ರ್ಯ'. ಬಸು ಆತಂಕಗೊಂಡ. ಅವನೊಳಗಿನ ಹೋರಾಟಗಾರ ತೃಪ್ತನಾಗಿರಲಿಲ್ಲ. ದಿಲ್ಲಿಗೆ ಬಂದ ಸ್ವಾತಂತ್ರ್ಯ ಹಳ್ಳಿಗೆ ಬರಬೇಕೆಂದು ಹೋರಾಟದ ದಾರಿ ಹಿಡಿದ. ಆ ದಾರಿ ಎಷ್ಟು ದೂರವಿತ್ತೆಂದರೆ ಅವರ ಇಡೀ ಬದುಕು ಸವೆಸಬೇಕಾಯಿತು. ಅವರ ಬದುಕಿನ ಪಯಣದ ಕೊನೆಯ ದಶಕದಲ್ಲಿ ನನಗೆ ಗುರುವಾದರು ಬಾಪೂಜಿ.

ಎತ್ತರದ ನಿಲುವು, ತೀಕ್ಷ್ಣವಾದ ಕಣ್ಣುಗಳು, ಸದಾ ಮುಗುಳ್ನಗೆ, ಎರಡು ಮಾತಿನಲ್ಲಿಯೆ ಎದುರಿಗಿರುವವರನ್ನು ಬರಸೆಳೆವ ವ್ಯಕ್ತಿತ್ವ. ಹೆಚ್ಚಿನ ವಿದ್ಯಾಭ್ಯಾಸ ಇಲ್ಲದಿದ್ದರೂ ಸ್ವಯಂ ಅಧ್ಯಯನ ಅವರ ವ್ಯಕ್ತಿತ್ವವನ್ನು ಪರಿಪೂರ್ಣಗೊಳಿಸಿತ್ತು. 'ಸಿಕ್ಕ ಸ್ವಾತಂತ್ರ್ಯವನ್ನು ಕಟ್ಟ ಕಡೆಯ ವ್ಯಕ್ತಿಗೆ ತಲುಪಿಸುವುದು ನಮ್ಮ ಗುರಿಯಾಗಬೇಕು' ಎಂದು ನೂರಾರು ಸಲ ಅವರು ಹೇಳಿದ್ದನ್ನು ಕೇಳಿದ್ದೇನೆ.

ನನ್ನ ಪತ್ರಿಕೆ ಆರಂಭವಾದ ದಿನಗಳು. ಅವರ ಸಂದರ್ಶನಕ್ಕಾಗಿ ಅವರ ಹಳ್ಳಿಗೆ ಹೋದಾಗ ದಿಗಿಲುಗೊಂಡಿದ್ದೆ. ಹಳೆಯಕಾಲದ ಮುರುಕಲು ಮನೆ, ಮದುವೆಯಾಗದ ಒಂಟಿ ಜೀವ. ಆಗ ಅವರಿಗೆ ಸುಮಾರು ಎಪ್ಪತ್ತರ ವಯಸ್ಸು. ಗಟ್ಟಿದೇಹ, ನಿರ್ಭಿಡೆಯ ಮಾತು. ಅವರ ಕತೆಯನ್ನು ಅವರಿಗಿಂತ ಅವರೂರಿನ ಜನ ಹೇಳಿದ್ದೇ ಹೆಚ್ಚು. ಸ್ವಾತಂತ್ರ್ಯ ಹೋರಾಟದ ಪಿಂಚಣಿಯನ್ನೂ ಪಡೆದಿರದಿದ್ದ ಈ ಅಜ್ಜನಿಗೆ ಊರವರೇ ಸೇರಿ ಜಿಲ್ಲಾಧಿಕಾರಿಗೆ ಮನವಿಕೊಟ್ಟು ಪಿಂಚಣಿ ಕೊಡಿಸಿದ್ದನ್ನು ಹಳ್ಳಿ ಜನ ಹೇಳಿದಾಗ ನಾನು ತೀರ್ಮಾನಿಸಿದ್ದೆ ಇವರು ನನ್ನ ಬಾಪೂಜಿ.

ಪ್ರತಿವರ್ಷ ಆಗಸ್ಟ್ ಹದಿನೈದರಂದು ಬಾಪೂಜಿ ಮನೆಗೆ ಹೋಗಿ ಕರೆತಂದು ಹಾರ, ಶಾಲು ಹಾಕಿ ಪತ್ರಿಕೆಗಳಲ್ಲಿ ಫೋಟೋ ಹಾಕಿಸಿಕೊಂಡರೆ ಮತ್ತೆ ಅವರ ನೆನಪಾಗುವುದು ಮುಂದಿನ ಸ್ವಾತಂತ್ರ್ಯದ ದಿನವೇ. ಆದರೆ ಬಾಪೂಜಿ ಸಂದರ್ಶನ ನನ್ನ ಪತ್ರಿಕೆಯಲ್ಲಿ ಪ್ರಕಟವಾದ ನಂತರ ವಾತಾವರಣ ಬದಲಾಯಿತು. ಅಲ್ಲಿಯವರೆಗೆ ಹಳ್ಳಿಯ ಜನರ ಕುಂದುಕೊರತೆ ನಿವಾರಿಸಲು ತಾಲೂಕು, ಜಿಲ್ಲಾಧಿಕಾರಿಗಳ ಆಫೀಸಿಗೆ ಮನವಿ ಹಿಡಿದು ಬರುತ್ತಿದ್ದ ಬಾಪೂಜಿ ಈಗ ನಗರದ ಎಲ್ಲ ಹೋರಾಟಗಳಿಗೆ ಆಹ್ವಾನಿತರಾದರು. ಹೋರಾಟದ ಸಂಕೇತವಾದರು. ನಗರದ ಹೋರಾಟಗಾರರೆಲ್ಲ ಸೇರಿ ಬಾಪೂಜಿಗೆ ನಗರದಲ್ಲೊಂದು ಸೈಟ್‌ಕೊಡಿಸಲು ಯಶಸ್ವಿಯಾದೆವು. ಮನೆಯೂ ಸಿದ್ಧವಾಯಿತು. ನಗರಕ್ಕೆ ಬರಲೊಪ್ಪದ ಬಾಪೂಜಿಯನ್ನು ಒತ್ತಾಯದಿಂದ ಕರೆತಂದು ನಗರ ಸೇರಿಸಿದೆವು. ಅಂದಿನಿಂದ ಬಾಪೂಜಿ ನನ್ನ ಬಂಧ ತಂದೆ ಮಗನ ಸಂಬಂಧ.

ಅದೊಂದು ಸಂಜೆ ಬಾಪೂಜಿಯವರ ಮನೆಯಲ್ಲಿ ಮಾತನಾಡುತ್ತ ಕುಳಿತಾಗ ಬಾಪೂಜಿಯವರ ಪರಿಚಯಸ್ಥರೊಬ್ಬರು ಬಂದರು. ಅವರ ಜೊತೆ ಅರವತ್ತರ ಆಸುಪಾಸಿನ ಮಹಿಳೆ. ಬಾಪೂಜಿ ಅವರನ್ನು ಸ್ವಾಗತಿಸಿದರು. ಮಾತು ಮುಗಿಯುವಾಗ ಆ ಹಿರಿಯರು ಹೇಳಿದರು 'ಇವಳು ಗಂಗಮ್ಮ, ವಿಧವೆ. ಇದ್ದೊಬ್ಬ ಮಗ ದೂರ ಹೋಗಿದ್ದಾನೆ. ಅಸಹಾಯಕಳು ನಿಮ್ಮ ಮನೆಯಲ್ಲಿ ಅಡುಗೆ, ಮನೆ ಕೆಲಸ ಮಾಡಿಕೊಂಡಿರಲಿ.' ಬಾಪೂಜಿ ಚಿಂತನೆಯಲ್ಲಿ ಮುಳುಗಿದರು. ನಾನು ಗಂಗಮ್ಮಳತ್ತ ನೋಡಿದೆ. ಹಳ್ಳಿ ಮಹಿಳೆ. ದುಡಿದ ದೇಹ, ವಯಸ್ಸಿಗಿಂತಲೂ ಮುಪ್ಪಾದ ಆಕೃತಿ. ಮತ್ತೊಮ್ಮೆ ಗಂಗಮ್ಮನ ಜೊತೆ ಬಂದ ಹಿರಿಯರು ಅಂಗಲಾಚಿದರು. ಬಾಪೂಜಿ ಸಮ್ಮತಿಸಿದರು. ಅಮಾಯಕ ಗಂಗಮ್ಮ ಕಣ್ಣೀರು ಸುರಿಸುತ್ತಲೇ ಬಾಪೂಜಿ ಕಾಲಿಗೆರಗಿದಳು.

ಗಂಗಮ್ಮ ಬಂದಾಗಿನಿಂದ ಬಾಪೂಜಿ ಆರೋಗ್ಯ ಸುಧಾರಿಸಿತು, ಹೆಚ್ಚು ಕ್ರಿಯಾಶೀಲರಾದರು. ಜನರ ಹೋರಾಟಗಳಲ್ಲಿ ಭಾಗವಹಿಸುವುದು, ಸರಕಾರ ಗಳನ್ನು ತರಾಟೆಗೆ ತೆಗೆದುಕೊಳ್ಳುವುದು, ದಿನಚರಿಯಾಯಿತು. ಸರಕಾರಗಳು ಮುಜುಗರಕ್ಕೊಳಗಾದವು. ಬಾಪೂಜಿಯವರ ಮೇಲೆ ಕೆಂಗಣ್ಣು ಬೀರಿದವು. ಆದರೆ 'ಕಟ್ಟಕಡೆಯ ಮನುಷ್ಯನಿಗೆ ಸ್ವಾತಂತ್ರ್ಯ' ತಲುಪಿಸುವ ಬಾಪೂಜಿ ಗುರಿ ಅಚಲವಾಗಿತ್ತು. ಚಲೇಜಾವ್ ಚಳುವಳಿ ಮಾಡಿದ ಅವರಿಗೆ ಸರಕಾರಗಳು ಮತ್ತೆ ಶ್ರೀಮಂತ ದೇಶಗಳ ಗುಲಾಮರಾಗುತ್ತಿರುವ ನೀತಿ ಸರಿ ಬರಲಿಲ್ಲ. ಅವರ ಟೀಕೆ ತೀಕ್ಷ್ಣವಾಗುತ್ತಲೇ ಹೋಯಿತು. ಸರಕಾರ ಬದಲಾದರೂ, ಯಾವ ಪಕ್ಷ ಬಂದರೂ ನೀತಿಯೊಂದೇ, ಬಾಪೂಜಿ ಸಂಘರ್ಷ ನಿರಂತರವಾಗಿತ್ತು. ದಣಿವರಿಯದ ಜೀವ.

ಕಾರ್ಪೊರೇಟ್ ಕಂಪನಿಗಳ ಪತ್ರಿಕೆಗಳ ಹಾವಳಿಯಿಂದಾಗಿ ಸ್ಥಳೀಯ ಪತ್ರಿಕೆಗಳು ಸಂಕಷ್ಟದಲ್ಲಿದ್ದವು. ನನ್ನ ದಿನಪತ್ರಿಕೆಗಾಗಿ ಹೆಚ್ಚಿನ ಶ್ರಮಬೇಕಿತ್ತು. ಬಾಪೂಜಿಯವರ ಮನೆಗೆ ಹೋಗುವುದು ಕಡಿಮೆಯಾಗಿತ್ತು. ಗಂಗಮ್ಮ ಅವರನ್ನು ಕಾಳಜಿಯಿಂದ ಮಗುವಿನಂತೆ ನೋಡಿಕೊಳ್ಳುತ್ತಿರುವುದು ನನ್ನ ಗಮನಕ್ಕೆ ಬಂದಿತ್ತು. ಹೀಗಾಗಿ ಬಾಪೂಜಿಯವರ ಕಡೆಗೆ ಗಮನ ಕಡಿಮೆಯಾಗಿತ್ತು. ಅದೊಂದು ಮಧ್ಯರಾತ್ರಿ ಆಘಾತಕಾರಿಯಾದ ಸುದ್ದಿಯನ್ನು ಇನ್ನೊಂದು ಪತ್ರಿಕೆಯ ಸಂಪಾದಕ ಫೋನ್ ಮಾಡಿ ತಿಳಿಸಿದ. ರಾತ್ರಿಯ ಕಡುಗತ್ತಲಲ್ಲಿ ಸಿಡಿಲು ಬಡಿದಂತಾಯಿತು. 'ಬಾಪೂಜಿ ಗಂಗಮ್ಮ ಮದುವೆಯಾಗಿದ್ದಾರೆ.' ನನ್ನ ಉಸಿರಾಟ ಏರುಪೇರಾಯಿತು. ಸುಳ್ಳು ಸುದ್ದಿ ಸರಕಾರದ ಪರವಾಗಿರುವ ಪತ್ರಿಕೆಗಳ ಪಿತೂರಿ ಅಂದುಕೊಂಡೆ. ಬಾಪೂಜಿಯ ಚಾರಿತ್ರ್ಯ ಹರಣ ಮಾಡುವ ಷಡ್ಯಂತ್ರ ನಡೆದಿದೆ ಎಂದುಕೊಂಡು, ಬಾಪೂಜಿಯವರಿಗೆ ಹೇಳಿದರೆ ನೊಂದುಕೊಳ್ಳುತ್ತಾರೆ. ಪಾಪ ಹಳ್ಳಿಯ ಮುಗ್ಧ ಹೆಣ್ಣು ಮಗಳು ಗಂಗಮ್ಮ ಇಂಥ ಸುದ್ದಿ ಕೇಳಿದರೆ ಆತ್ಮಹತ್ಯೆ ಮಾಡಿಕೊಂಡಾಳು. ಬೆಳಿಗ್ಗೆ ಮನೆಗೆ ಹೋಗಿ ಹೇಳಿದರಾಯಿತೆಂದು ರಾತ್ರಿಯಿಡೀ ನಿದ್ರೆಬಾರದೆ ಒದ್ದಾಡಿದೆ.

ಬೆಳಗಾಗುತ್ತಲೇ ಎದ್ದು ಬಾಪೂಜಿ ಮನೆಗೆ ಹೋಗಲು ಸಿದ್ಧವಾಗಿ ಬಾಗಿಲು ತೆಗೆದೆ. ಬಾಗಿಲಲ್ಲಿ ದಿನಪತ್ರಿಕೆಗಳು. ಮುಖಪುಟದಲ್ಲಿಯೇ ಬಾಪೂಜಿ – ಗಂಗಮ್ಮರ ಫೋಟೋ ಸಮೇತ ಸುದ್ದಿ. ಕುಸಿದು ಕುಳಿತೆ. ಸಾವರಿಸಿಕೊಂಡು ಬಾಪೂಜಿ ಮನೆಗೆ ಓಡಿದೆ. ಗಂಗಮ್ಮ ಬಾಗಿಲು ತೆಗೆದು ತಲೆ ತಗ್ಗಿಸಿ ಒಳಗೆ ಹೋದಳು. ಬಾಪೂಜಿ ಕೊಠಡಿಯಲ್ಲಿ ಮಲಗಿದ್ದರು. ಓಡಿ ಹೋಗಿ ಅವರ ಮೈಮುಟ್ಟಿ ಎಬ್ಬಿಸಿದೆ. ಅವರ ಮೈ ಸುಡುತ್ತಿತ್ತು, ಜ್ವರ. ಎದ್ದು ಕುಳಿತು ಜ್ವರದ ನೋವಿನಲ್ಲಿಯೂ ನಗೆಬೀರಿ ನನ್ನ ಕೈಯಲ್ಲಿನ ಪತ್ರಿಕೆ ನೋಡಿ ನಿಧಾನವಾಗಿ ಇಸಿದುಕೊಂಡರು. ತಮ್ಮ ಫೋಟೋ ನೋಡಿ ನಸುನಕ್ಕರು. ನಾನು ನನ್ನ ಏದುಸಿರು ಬಿಗಿ ಹಿಡಿದು 'ಹೆದರಬೇಡಿ, ಇದು ಸರಕಾರದ ಪರ ಪತ್ರಿಕೆಯ ಪಿತೂರಿ, ನಿಮ್ಮ ಬಾಯಿ ಮುಚ್ಚಿಸಲು...' ಎಂದು

ಹೇಳುತ್ತಿದ್ದಂತೆಯೇ ನನ್ನನ್ನು ತಡೆದ ಬಾಪೂಜಿ 'ರಾಜಣ್ಣ ಕ್ಷಮಿಸು ಆ ಸುದ್ದಿ ಸುಳ್ಳಲ್ಲ ಸತ್ಯ' ಎಂದು ಪಕ್ಕದ ಟೇಬಲ್ ಮೇಲಿದ್ದ ಒಂದು ಹಾಳೆಯನ್ನು ನನ್ನ ಕೈಗಿತ್ತರು. ಅದು ಮದುವೆ ನೋಂದಣಿ ಪತ್ರ. ನಾನು ನಿಂತ ನೆಲ ಕಂಪಿಸಿತು.



ಬಸ್‌ನಲ್ಲಿ ಕುಳಿತಾಗಲೂ ನನ್ನ ಹೊಯ್ದಾಟ ನಿಲ್ಲಲಿಲ್ಲ. ಗಂಗಮ್ಮ ಒಂದು ಫೋನ್ ಮಾಡಿದರೆ ನಾನೇಕೆ ಹೋಗಬೇಕು. ಆದರೆ ಒಂದು ಪಾಪಪ್ರಜ್ಞೆ ನನ್ನನ್ನು ಕಾಡುತ್ತಿತ್ತು. ಅವತ್ತು ಬಾಪೂಜಿ ಮದುವೆ ನೋಂದಣಿ ಪತ್ರ ನೋಡಿ ಒಂದು ಮಾತನಾಡದೇ ಓಡಿ ಬಂದವನು ಮತ್ತೆ ಜೀವಂತವಾಗಿ ಅವರ ಮುಖ ನೋಡಲಿಲ್ಲ. ಅದಾದ ಎರಡು ತಿಂಗಳಲ್ಲಿಯೇ ಬಾಪೂಜಿ ನಿಧನರಾದರು ಅದಕ್ಕೆ ಮುಂಚೆ ಅವರು ಫೋನ್ ಮಾಡಿ ಬರಹೇಳಿದರು. ನಾನು ಹೋಗಲಿಲ್ಲ. ಒಂದು ಬಾರಿ ನನ್ನ ಪತ್ರಿಕೆಯ ಆಫೀಸಿಗೇ ಬಂದರೂ ಇಲ್ಲ ಎಂದು ಹೇಳಿಸಿ ಕಳಿಸಿದೆ. ಪತ್ರಿಕೆಗಳು ಅವರ ಕುರಿತು ಕೀಳಾಗಿ ಬರೆದವು. ನನ್ನನ್ನು ತಲೆಹಿಡುಕ ಎಂದು ಬರೆದವು. ನಾನು ನನ್ನ ಪತ್ರಿಕೆಯಲ್ಲಿ ಏನನ್ನೂ ಬರೆಯದೆ, ಬರೆಯಲಾಗದೆ ಒದ್ದಾಡಿದೆ. ಅಂದೇ ಪತ್ರಿಕೋದ್ಯಮ ಸಾಕು ಎಂದು ನಿರ್ಧರಿಸಿದ್ದೆ. ಅವರ ಸಾವಿನ ಸುದ್ದಿ ಬಂದಾಗ ದೇಹವನ್ನು ಆಸ್ಪತ್ರೆಗೇ ಹೋಗಿ ನೋಡಿ ಬಂದಿದ್ದೆ. ದೇಹವನ್ನು ಆಸ್ಪತ್ರೆಗೆ ದಾನ ಮಾಡಿದ್ದರು. ಗಂಗಮ್ಮ ಕಣ್ಣೀರು ಸುರಿಸುತ್ತ ನನ್ನ ಹತ್ತಿರ ಬಂದಿದ್ದಳು. ಮುಖ ತಿರುವಿ ಹೋಗಿದ್ದೆ. ಈ ಹತ್ತು ವರ್ಷದಲ್ಲಿ ಹಲವಾರು ಸಲ ಅನ್ನಿಸಿದೆ; ಒಂದು ಸಲ ಅವರ ಮುಂದೆ ನಿಂತು 'ಯಾಕೆ ಇಂಥ ಕೆಲಸ ಮಾಡಿದಿರಿ, ನಿಮ್ಮ ಮಗನಂತಿದ್ದ ನನ್ನಿಂದಲೂ ಯಾಕೆ ವಿಷಯ ಮುಚ್ಚಿಟ್ಟಿರಿ' ಎಂದು ಕೇಳಬೇಕಾಗಿತ್ತು ಅಂತ.

ಬಾಪೂಜಿ ಮನೆಯ ಗೇಟು ತೆಗೆದು ಅಂಗಳದಲ್ಲಿ ಕಾಲಿಟ್ಟೆ. ಗಂಗಮ್ಮ ಓಡಿ ಬಂದು ನನ್ನ ಎರಡೂ ಕೈಹಿಡಿದು ಜೋರಾಗಿ ಅಳತೊಡಗಿದಳು. ನಾನೇನು ಸಮಾಧಾನ ಮಾಡಲಿಲ್ಲ. ಅವಳು ಅಳುವ ಧ್ವನಿ ಕೇಳಿ ಮನೆಯೊಳಗಿಂದ ನಾಲ್ಕೈದು ಜನ ವೃದ್ಧರು ಹೊರಬಂದು ನೋಡತೊಡಗಿದ್ದರು. ನಾನು ಕೈ ಬಿಡಿಸಿಕೊಂಡು ಅಂಗಳದ ಕಟ್ಟೆಯ ಮೇಲೆ ಕುಳಿತೆ. ಗಂಗಮ್ಮ 'ಒಳಗೆ ಬಾ ಮಗನೆ' ಎಂದರೂ ಕೇಳಿಸಿಕೊಳ್ಳದೆ 'ಬಾಪೂಜಿ' ಏನೋ ಪುಸ್ತಕ ಕೊಟ್ಟಿದ್ದಾರೆ ಅಂದ್ರೆಲ್ಲ ತಂದುಕೊಡಿ ಇಲ್ಲೇ ಕೂತಿರ್ತೀನಿ' ಎಂದೆ ಸ್ವಲ್ಪ ಬಿರುಸಾಗಿ. ಗಂಗಮ್ಮ ಒಳಹೋಗಿ ಒಂದು ಪ್ಯಾಕ್ ಮಾಡಿದ ಕವರ್ ತಂದುಕೊಟ್ಟಳು. ಅದರ ಮೇಲೆ ನನ್ನ ಹೆಸರು ಬರೆದಿತ್ತು. 'ಇಷ್ಟು ವರ್ಷ ಅದು ಅವರ ಪುಸ್ತಕಗಳ ನಡುವೇ ಇತ್ತು. ನನಗೆ ಓದಾಕೂ ಬರೂದಿಲ್ಲ. ನಿನ್ನ ಹೆಸರು ಅಂತ ಗೊತ್ತಾಗಲಿಲ್ಲ...' ಗಂಗಮ್ಮನ ಮಾತು ತಡೆದು ಕವರ್ ಒಡೆದೆ, ಒಳಗೆ ಬಾಪೂಜಿ ಡೈರಿ.

**ಪುಟ-೧ :** ಇಂದು ಜ್ವರ ಜಾಸ್ತಿ ಆಯ್ತು. ಆಸ್ಪತ್ರೆಗೆ ಹೋದೆ ಪರಿಚಯದ ಡಾಕ್ಟರ್ ಹಲವಾರು ಪರೀಕ್ಷೆ ಮಾಡಿ ಎರಡುದಿನ ಬಿಟ್ಟು ಬರಲು ಹೇಳಿದರು.

**ಪುಟ-೨ :** ಮತ್ತೇ ಡಾಕ್ಟರ್ ಹತ್ತಿರ ಹೋದಾಗ ಬ್ಲಡ್ ಕ್ಯಾನ್ಸರ್ ಎಂದು ಹೇಳಿದರು... ಎಷ್ಟು ದಿನ ಬದುಕಬಹುದು ಎಂದು ಕೇಳಿದೆ. ಉಲ್ಬಣವಾಗಿದೆ ಹೇಳೋಕಾಗಲ್ಲ ಎಂದರು. ಇರುವಷ್ಟು ದಿನ ಟ್ರೀಟ್‌ಮೆಂಟ್ ಕೊಡಿ. ದಯವಿಟ್ಟು ಯಾರಿಗೂ ಹೇಳಬೇಡಿ ಅಂತ ಮನವಿ ಮಾಡಿಕೊಂಡೆ, ಅವರು ಭರವಸೆಕೊಟ್ಟರು.

**ಪುಟ-೩ :** ಜ್ವರ ಸುಡುತ್ತಿತ್ತು ಗಂಗಾ ತಲೆಗೆ ತಣ್ಣೀರ ಪಟ್ಟಿ ಹಾಕಿ ಆರೈಕೆ ಮಾಡುತ್ತಿದ್ದಳು. ತಾಯಿ, ಮಹಾತಾಯಿ ಅವಳ ತೊಡೆ ಮೇಲೆ ತಲೆ ಇಟ್ಟು ಮಲಗಿದೆ. 'ಗಂಗಮ್ಮ ನನಗ ಎಪ್ಪತ್ತೈದು ದಾಟಿತು' ಅಂದೆ 'ಸುಮ್ನಿರ್ರಿ ಸಾಹೆಬ್ರ ನೀವು ನೂರು ವರ್ಷದಾಟ್ತೀರಿ' ಅಂದ್ಲು. ಅವತ್ತ ರಾತ್ರಿ ಒಂದು ನಿರ್ಧಾರ ಮಾಡಿದೆ.

**ಪುಟ-೪ :** ಇವತ್ತು ನೇರವಾಗಿ ಗಂಗಮ್ಮಗ ಹೇಳಿದೆ. 'ನೀನು ನನ್ನನ್ನು ಮಗನ್ ಥರಾ ನೋಡ್ಕೊತಿ. ನಿನ್ನ ಬಗ್ಗೆ ನನಗ ಗೌರವ ಅದ. ಕೆಟ್ಟಭಾವನೆಯಿಂದ ಕೇಳ್ತಾಯಿಲ್ಲ. ನೇರವಾಗಿ ಕೇಳ್ತೀನಿ ನಾವು ಮದುವಿ ಆಗೂನೂ' ಬೆಚ್ಚಿ ಬಿದ್ಲು ಗಂಗಮ್ಮ. ಪಾಪ ಆ ಮುಗ್ಧೆಗೆ ದೊಡ್ಡ ಆಘಾತ. ಗಂಗಮ್ಮ ಗಂಗಾ ನದಿ ಆದ್ಲು. ಎರಡು ದಿನ ಮೌನ.

**ಪುಟ-೫ :** 'ಗಂಗಮ್ಮ ನಾನು ದುರುದ್ದೇಶದಿಂದ ಕೇಳ್ತಾಯಿಲ್ಲ. ನಾವು ಗಂಡಾ ಹೆಣ್ತಿ ಥರಾ ಇರೂದು ಬ್ಯಾಡಾ' ಅಂದೆ. ಅವಳು ನನ್ನ ಪಾದಾ ಹಿಡಿದು 'ಮತ್ತ ಇಂಥ ವಿಚಾರ ಯಾಕ್ರಿ ಸಾಯಿಬ್ರ' ಅಂದ್ಲು. ನಾ ಆಕೀಗಿ ಒಂದು ಸುಳ್ಳ ಹೇಳ್ದೆ. 'ಜನರ ಬಾಯಿ ಸರಿ ಇಲ್ಲ ಏನೇನೋ ಕೆಟ್ಟದ ಮಾತಾಡ್ತಾರಾ ನನ್ನ ಹೆಸರ ಹಾಳಾಗ್ತದ, ನೀ ಬಿಟ್ಟು ಹೋದರ ನನ್ನ ನೋಡವರ ಯಾರು? ಅದಕ ಜನರ ಬಾಯಿ ಮುಚ್ಚಿಸೋಕ ಮದುವಿ ಆಗೂನು' ಅಂದೆ. ಗಂಗಮ್ಮ ಇನ್ನೂ ಬೆಚ್ಚಿ ' ಈ ವಯಸ್‌ನ್ಯಾಗ್ರಿ ಸಾಯಬ್ರ?' ಅಂದ್ಲು.

'ಹ್ಞೂಂ ಮದುವಿ ಮಾಡಕೊಂಡು ಜೊತೆಗಿದ್ರ ಸ್ವಲ್ಪದಿನಾ ಮಾತಾಡಿ ಸುಮ್ಮನಾಗತಾರಾ ಇಲ್ಲಾಂದ್ರ...' ಸುಮ್ಮನಾದಳು ಗಂಗಮ್ಮ.

**ಪುಟ-೬ :** ಗಂಗಮ್ಮ ಗೊಂದಲದೊಳಗ ಇದ್ದಳು. ನಾನು ಮತ್ತ ಕೇಳಿದ್ದಕ್ಕ 'ಸಾಹೇಬ್ರ ನನಗ ಏನೂ ತಿಳಿವಂಗಿಲ್ಲ. ಆದ್ರ ನಾ ಸಾಯೂತನಾ ನಿಮ್ಮ ಸೇವಾ ಮಾಡ್ಬೇಕು.' ನಿಜವಾಗಿಯೂ ಗಂಗಮ್ಮ ಹೆದರಕೊಂಡಿದ್ಲು. ನಾನು ಹೇಳಿದೆ 'ರಾಜಣ್ಣನಿಗೂ ಈಗ ಹೇಳೂದು ಬ್ಯಾಡ ಮದುವಿ ಆದಮ್ಯಾಲ ಹೇಳೂನು. ನಾವಿಬ್ರ ಹೋಗಿ ಮದುವಿ ಆಗೂನು ರಿಜಿಸ್ಟ್ರಾರ್ ಆಫೀಸ್‌ನ್ಯಾಗ. ಪತ್ರಿಕೆಗಳು ಕೆಟ್ಟದಾಗಿ ಬರೀತಾವು, ಜನಾ ಕೆಟ್ಟದಾಗಿ ಮಾತಾಡ್ತಾರಂತ ರಾಜಣ್ಣ ಬ್ಯಾಡ ಅನಬಹುದು' ಇನ್ನೂ ಗೊಂದಲಕ ಬಿದ್ಲು ಗಂಗಮ್ಮ.

**ಪುಟ-೭ :** ನಾನು ಗಂಗಾನ್ನ ಮದುವೆ ಆದ ಕಾರಣ ಬೇರೆ. ನಾನು ಇನ್ನು ಒಂದೆರಡು ತಿಂಗಳು ಮಾತ್ರ ಬದುಕಬಹುದು. 'ಸ್ವತಂತ್ರ ಭಾರತದಲ್ಲಿ ಕಟ್ಟಕಡೇ ಮನುಷ್ಯನೂ ನೆಮ್ಮದಿಯಿಂದ ಇರಬೇಕು' ಅನ್ನೊ ನನ್ನ ಕನಸು ಈಡೇರಲಿಲ್ಲ. ಆದ್ರ ಒಬ್ಬ ಅನಾಥ ವಿಧವೆ ಗಂಗಮ್ಮನಿಗಾದ್ರೂ ನನ್ನ ಸ್ವಾತಂತ್ರ್ಯ ಹೋರಾಟದ ಪ್ರತಿಫಲ ದೊರೀಲಿ, ನಾನು ಸತ್ತ ಮೇಲೆ ಜನ ಕಟ್ಟಿಸಿಕೊಟ್ಟ ಈ ಮನೆ, ಸರಕಾರ ನನಗ ಕೊಡೋ ಪಿಂಚಣಿ ಗಂಗಮ್ಮಗ ಹೋಗ್ಬೇಕು. ಅವಳು ನಾನು ಸಾಯೂದ್ರಾಗ ನನ್ನ ಹೆಣ್ತಿ ಆದ್ರ ಮಾತ್ರ ನನ್ನ ಸಣ್ಣ ಕನಸು, ಕೊನೆ ಆಸೆ ನೆರವೇರ್ತದ. ಮುಂದೆ ನಿಜವಾದ ಸ್ವಾತಂತ್ರ್ಯ ಪಡಿಯೂ ಶಕ್ತಿ ಈ ದೇಶದ ಅಸಹಾಯಕ ಜನರಿಗೆ ಬರಲಿ.

**ಪುಟ-೮ :** ಈ ಮದುವೆಯ ಪರಿಣಾಮ ಏನೂ ಅಂತ ನನಗ ಗೊತ್ತು. ರಾಜಣ್ಣ ನನ್ನ ಕ್ಷಮಿಸ್ತಾನ ಮತ್ತು ನಾನು ಸತ್ತ ಮೇಲೆ ನನ್ನ ಮದುವಿ ಉದ್ದೇಶವನ್ನು ಪೂರ್ತಿ ಮಾಡ್ತಾನ....

ಬಾಪೂಜಿ ಡೈರಿ ಇನ್ನೂ ಮುಗಿದಿರಲಿಲ್ಲ. ನನ್ನ ಎದೆ ಬಡಿತ ಮಿತಿ ಮೀರತಾ ಇತ್ತು. ಉಸಿರು ಬಿರುಗಾಳಿ ಆಗ್ತಿತ್ತು. ಹತ್ತು ವರ್ಷ ಯಾವುದೋ ಮೂಲೆಯಲ್ಲಿದ್ದ ಸಣ್ಣ ಪ್ರಮಾಣದ ಪಾಪಪ್ರಜ್ಞೆ ಅಪರಾಧಿಭಾವವಾಗಿ ಆಕಾಶವನ್ನೇ ಆವರಿಸಿತ್ತು. ಓಡಿ ಹೋಗಿ ಗಂಗಮ್ಮನ ಪಾದ ಹಿಡಿದೆ. ಕಣ್ಣೀರು, ಮಾತು ಯಾವುದೂ ಬರ್ತಿಲ್ಲ. ಗಂಗಮ್ಮ ನನ್ನನ್ನು ಎಬ್ಬಿಸಿ ಕಟ್ಟೆ ಮೇಲಿ ಕೂರಿಸಿ ಬೆನ್ನ ನೇವರ್ಸಿದ್ಲು. ಅವಳ ತೊಡಿ ಮೇಲೆ ಮಲಗ್ದೆ. ಅಮಾಯಕ ಗಂಗಮ್ಮ ಮಲಗಿಸಿಕೊಂಡ್ಲು ಬಾಪೂಜಿಯನ್ನ ಮಲಗಿಸಿಕೊಂಡಂಗೆ. ಸ್ವಲ್ಪ ಹೊತ್ತು ಮೌನ. ಗಂಗಮ್ಮ ಹೇಳಿದ್ಲು 'ನನ್ನದೊಂದು ಮಾತ ನಡಿಸಿಕೊಡು ಮಗಾ... ಈ ಮನಿ ವಯಸ್ಸಾದ ಅಸಹಾಯಕರಿಗೆ ನೆರಳ ಆಗಬೇಕು. ಈಗಾಗ್ಲೇ ನಾಲ್ಕೈದು ಜನಾ ನನ್ನ ಜೊತಿ ಅದಾರ. ನೀನು ಇದನ್ನ 'ಬಾಪೂಜಿ ಆಶ್ರಮ' ಅಂತ ಬೆಳೆಸಬೇಕು.' ನನ್ನ ಪಾಪಪ್ರಜ್ಞೆ ದಟ್ಟವಾದ ಮೋಡದಲ್ಲಿ ಸೇರಿ ಸುರಿದ ರಭಸದ ಮಳೆ ಇಡೀ ಭೂಮಿಯನ್ನ ತೋಯಿಸ್ತು. ಆದ್ರೂ ನನ್ನ ಎದೆಯ ಜ್ವಾಲಾಮುಖಿ ತಂಪಾಗಲಿಲ್ಲ. ನಾನು ಭೂಮಿಯ ಮೇಲಿರುವೇನೋ, ಭೂಗೋಲವೇ ನನ್ನೆದೆಯ ಮೇಲೆ ಕೂತಿದೆಯೋ ಅರ್ಥವಾಗದ ಸ್ಥಿತಿ.


**ಶ್ರೀಸುಮಿತ್ರಾಸುತ ಅಗಸಬಾಳ**

ನಂ.೧೬೭ – ೧೬೮, ೧೧ನೇ ಮುಖ್ಯರಸ್ತೆ, ೩ನೇ ಫೇಸ್

ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು – ೫೬೦ ೦೫೮

# ಸಿಟ್ಟಾದರು ರಾಯರು!



ಪ್ರೊ॥ ಜಿ. ಕೆ. ಗೋವಿಂದರಾವ್

೧೯೯೨ ಡಿಸೆಂಬರ್ ೬.
ಬೆಂಗಳೂರಿನ ಮಿಥಿಕ್ ಸೊಸೈಟಿ ಸಭಾಂಗಣದಲ್ಲಿ ವಿಚಾರ ಸಂಕಿರಣವನ್ನು ಹಮ್ಮಿಕೊಳ್ಳಲಾಗಿತ್ತು.

ಆಗ 'ಸಮಕಾಲೀನ ಅಧ್ಯಯನ ವೇದಿಕೆ' ಆಶ್ರಯದಲ್ಲಿ ತಿಂಗಳಿಗೊಮ್ಮೆ, ಜನರಲ್ಲಿ ಜಾಗೃತಿ ಉಂಟುಮಾಡುವ ಉದ್ದೇಶದ ವಿಚಾರ ಸಂಕಿರಣಗಳು ನಡೆಯುತ್ತಿದ್ದವು. ಸರಕಾರದ ಜನವಿರೋಧಿ ನೀತಿಯನ್ನು ಖಂಡಿಸುವ, ಟೀಕಿಸುವ, ಸಮಾಜದ ಸ್ವಾಸ್ಥ್ಯವನ್ನು ಕೆಡಿಸಲು ಚಟುವಟಿಕೆ ನಡೆಸುವ ಶಕ್ತಿಗಳ ವಿರುದ್ಧ ಜನಾಭಿಪ್ರಾಯ ಮೂಡಿಸುವ ಉದ್ದೇಶದ ಅಂಥ ವಿಚಾರ ಸಂಕಿರಣಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಜನರು ಭಾಗವಹಿಸುತ್ತಿದ್ದರು.

'ಶಿಕ್ಷಣದಲ್ಲಿ ಧರ್ಮ ಮತ್ತು ರಾಜಕೀಯ', 'ಡಂಕೆಲ್ ಪ್ರಸ್ತಾಪ', 'ಹೊಸಗನ್ನಡ ಸಾಹಿತ್ಯ ಮತ್ತು ವೈಚಾರಿಕತೆ', 'ಕೋಮು ಸೌಹಾರ್ದ', 'ಮರೆತು ಹೋದ ಚರಿತ್ರೆ ಒಂದು ನೆನಪು', 'ಕ್ಯಾಪಿಟೇಶನ್ ಶುಲ್ಕ', 'ಪರಿಸರ ಸಂರಕ್ಷಣೆ' – ಇತ್ಯಾದಿ ವಿಷಯಗಳ ಬಗ್ಗೆ ನಡೆಯುತ್ತಿದ್ದ ವಿಚಾರ ಸಂಕಿರಣಗಳು ಹೆಚ್ಚು ಜನರನ್ನು ಆಕರ್ಷಿಸುತ್ತಿದ್ದುದು ಸಹಜವೇ ಆಗಿತ್ತು.

'ಹಿಂದು' ಪತ್ರಿಕೆಯ ಸಂಪಾದಕರಾಗಿದ್ದ ಎನ್. ರಾಮ್ ಅಂದಿನ ಸಮಾರಂಭಕ್ಕೆ ಮುಖ್ಯ ಅತಿಥಿಯಾಗಿದ್ದರು. ರೈತ ನಾಯಕ ಪ್ರೊ॥ ಎಂ. ಡಿ. ನಂಜುಂಡ ಸ್ವಾಮಿ, ಡಾ॥ ಶರಣ ಕುಮಾರ ಅಂಗಡಿ, ಡಾ॥ ಪ್ರಕಾಶ್ ರಾವ್ ಮತ್ತು ಇತರೆ ಐದಾರು ಮಂದಿ ಭಾಷಣಕಾರರಿದ್ದರು.

ನಾನು ನವಕರ್ನಾಟಕ ಸಂಸ್ಥೆ ಸೇರಿ ಎರಡು ವರ್ಷವಾಗಿತ್ತು. ಆಗಾಗ ನಡೆಯುತ್ತಿದ್ದ ಪುಸ್ತಕ ಲೋಕಾರ್ಪಣೆ, ವಿಚಾರ ಸಂಕಿರಣ – ಮುಂತಾದ ಕಾರ್ಯಕ್ರಮಗಳ ಫೋಟೋ ತೆಗೆಯುವ ಮೂಲಕ ಮತ್ತೊಂದು ಲೋಕದ ಪರಿಚಯ ಮಾಡಿಕೊಳ್ಳ ತೊಡಗಿದ್ದೆ. ಆಗ ನನ್ನಲ್ಲಿದ್ದುದು ಬರಿಯ ನಾರ್ಮಲ್ ಲೆನ್ಸ್ ಮಾತ್ರ. ಹಾಗಾಗಿ, ವ್ಯಕ್ತಿಗಳ ಕ್ಲೋಸ್‌ಅಪ್ ಫೋಟೋ ಕ್ಲಿಕ್ಕಿಸುವಾಗ ಅವರ ಸಮೀಪಕ್ಕೆ ಹೋಗುವುದು ಅನಿವಾರ್ಯವಾಗಿತ್ತು.

ಮುಂದಿನ ಭಾಷಣಕಾರರು ಪ್ರೊ॥ ಜಿ. ಕೆ. ಗೋವಿಂದ ರಾವ್. ಮೈಕಿನ ಮುಂದೆ ಬಂದು ನಿಂತರು. ನಾನೂ ತಯಾರಾದೆ. ಸಾಹಿತ್ಯದ ಮೂಲಕ ಅವರ ಪರಿಚಯ ವಾಗಿತ್ತಲ್ಲದೆ, ನನಗೆ ಅವರ ನೇರ ಪರಿಚಯವಿರಲಿಲ್ಲ. ಸುಮಾರು ಇಪ್ಪತ್ತೈದು ವರ್ಷ ನೆರೆ ರಾಜ್ಯದಲ್ಲಿದ್ದ ಕಾರಣ, ಕರ್ನಾಟಕದ ಹೆಚ್ಚಿನ ಸಾಹಿತಿಗಳ ಪರಿಚಯ ಮಾಡಿಕೊಳ್ಳುವ ಸಂದರ್ಭ ಒದಗಿಬಂದಿರಲಿಲ್ಲ. ಆದರೆ ಸಾಹಿತ್ಯ ಲೋಕದ ಚಟುವಟಿಕೆಗಳನ್ನು ಅಲ್ಲಿದ್ದೇ ಗಮನಿಸುತ್ತಿದ್ದೆ. ಪ್ರಜಾವಾಣಿಯಲ್ಲಿ ಧಾರಾವಾಹಿಯಾಗಿ ಪ್ರಕಟವಾದ ಅವರ 'ಈಶ್ವರ ಅಲ್ಲಾ' – ಕಾದಂಬರಿ ಯನ್ನು ಗಮನವಿಟ್ಟು ಓದಿದ್ದೆ. ಅನೇಕ ವಿಷಯಗಳಲ್ಲಿ ಅವರ ನಿಲುವು ಸ್ಪಷ್ಟವಾಗಿರುತ್ತಿತ್ತು. ನಿಷ್ಠುರ ಸ್ವಭಾವದ ವ್ಯಕ್ತಿಯೆಂದು ತಿಳಿದಿದ್ದೆ. ಹೇಳ ಬೇಕಾದ್ದನ್ನು ಯಾವ ಬಿಸಾತೂ ಇಲ್ಲದೆ ಹೇಳುವುದು ಅವರ ಜಾಯಮಾನ.



*ಮತ್ತೊಂದು ಸಂದರ್ಭದಲ್ಲಿ ತೆಗೆದ ಚಿತ್ರ. ಮುಂದಿನ ಸಾಲು ಎಡದಿಂದ ಕೋಚೆ ಅವರ ಜೊತೆ ಮಾತಾಡುತ್ತಿರುವವರು ನಾಗರಾಜ, ಎಚ್. ಎಸ್. ದೊರೆಸ್ವಾಮಿ, ಜಿ. ಕೆ. ಗೋವಿಂದರಾವ್, ಕೆ. ಎಸ್. ಪಾರ್ಥಸಾರಥಿ, ಹಿಂದಿನ ಸಾಲು ಎಡದಿಂದ ಶೇಷನಾರಾಯಣ, ಚಿ. ಶ್ರೀನಿವಾಸರಾಜು, ಕ. ವೆಂ. ರಾಜಗೋಪಾಲ.*

ಆಗ ಸಾಹಿತ್ಯ ವಲಯದಲ್ಲಿ 'ಆ್ಯಂಗ್ರಿ ಯಂಗ್ ಮ್ಯಾನ್' ಎಂಬ ಮಾತು ಬಳಕೆಯಲ್ಲಿತ್ತು. ಅವರ ಬರಹಗಳಲ್ಲಿ ವ್ಯಕ್ತವಾಗುತ್ತಿದ್ದ ವಿಷಯಗಳ ಆಧಾರದ ಮೇಲೆ ಹೇಳುವುದಾದರೆ ಅವರನ್ನು 'ಆ್ಯಂಗ್ರಿ ಯಂಗ್ ಮ್ಯಾನ್' ಲೆಕ್ಕಕ್ಕೆ ಸೇರಿಸಬಹುದು. ಅವರು ಸೇಂಟ್ ಜೋಸೆಫ್ ಕಾಮರ್ಸ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ, ಜೊತೆಗೆ ರಂಗಭೂಮಿಯ ಆಸಕ್ತಿಯಿಂದ ವಿದ್ಯಾರ್ಥಿ ಗಳು ಅದರಲ್ಲಿ ತೊಡಗು ವಂತೆ ಮಾಡಿ, ಶಿಷ್ಯರು ತಪ್ಪಿದಾಗ ಮಿತಿಮೀರಿ ಸಿಡುಕಾಡಿದರೂ, ಅವರ ಮಧ್ಯೆ ಅಚ್ಚುಮೆಚ್ಚಿನ ಮೇಷ್ಟ್ರಾಗಿದ್ದಾರೆಂದು ಕೇಳಿದ್ದೆ! ಆ ವೇಳೆಗೆ ಸಿನಿಮಾಗಳಲ್ಲಿ ಕಾಣಿಸಿಕೊಂಡಿದ್ದರು. ಅನಂತರ ಟಿ. ವಿ. ಧಾರಾವಾಹಿಗಳಲ್ಲಿ ಅಭಿನಯಿಸಿದ್ದರು.

ಒಂದು ಗಂಭೀರ ಪೋಸ್‌ಗಾಗಿ ಕಾಯುತ್ತ ನಾನು ನಿರೀಕ್ಷೆಗಿಂತ ಹೆಚ್ಚು ಹೊತ್ತು ಅವರ ಮುಂದೆ ನಿಂತಿದ್ದೆನೆಂದು ಕಾಣಿಸುತ್ತದೆ! ಅದು ನೆಗೆಟಿವ್ ಫಿಲ್ಮ್‌ನ ಕಾಲ. ಮನಸೋ ಇಚ್ಛೆ ಕ್ಲಿಕ್ಕಿಸುವಂತಿರಲಿಲ್ಲ. ಅಲ್ಲದೆ ಫೋಟೋ ತೆಗೆಯಲಿರುವ ವ್ಯಕ್ತಿ ಕಣ್ಣು ಮುಚ್ಚಬಾರದು ಎಂದು ಎಚ್ಚರ ವಹಿಸಬೇಕಾಗುತ್ತಿತ್ತು. ಹಾಗಾಗಿ ವಿಳಂಬವಾಗಿತ್ತು. ಅವರು ಯಾರ ಮೇಲೋ ಕೋಪಿಸಿಕೊಂಡಿದ್ದಂತಿತ್ತು. ಸಿಟ್ಟಿನಿಂದ ಕುದಿಯತೊಡಗಿದ್ದಂತಿತ್ತು. ಅವರು ಭಾಷಣ ನಿಲ್ಲಿಸಿ ನನ್ನತ್ತ ತಿರುಗಿ "ಕಿರಿಕಿರಿಯಾಗುತ್ತೆ, ಫೋಟೋ ತಕ್ಕೊಂಡು ಹೋಗ್ರಿ ಅತ್ಲಾಗೆ!" ಎಂದು ಸಿಡುಕಿದರು. ಪ್ರಾಯಶಃ ಅವರು ನನಗೆ ಜೋರು ಮಾಡಿದ ಕ್ಷಣದಲ್ಲೇ ನಾನು ಕ್ಲಿಕ್ಕಿಸಿದೆನೆಂದು ಕಾಣಿಸುತ್ತದೆ! ಸಭೆಯಲ್ಲಿ ನಗುವಿನ ಅಲೆ. ಈ ಅನಿರೀಕ್ಷಿತ ವಿದ್ಯಮಾನದಿಂದ ನನ್ನ ಮುಖದಲ್ಲಿ ಪೆಚ್ಚುಕಳೆ ಮೂಡಿದ್ದಿರಬಹುದು. 'ಅಪ್ಪಾ, ಫೋಟೋಗ್ರಾಫರ್ ಆಯಿತಪ್ಪಾ ನಿನಗೆ ತಕ್ಕ ಶಾಸ್ತಿ!' ಎಂದುಕೊಂಡೆ.

ಕಾರ್ಯಕಲಾಪಗಳು ಮುಂದುವರಿದವು. ಸಮಯ ಸರಿದಂತೆ, ವೇದಿಕೆಯ ಮೇಲಿದ್ದ ಭಾಷಣಕಾರರಿಗೆ 'ಹಿಂದು' ಸಂಪಾದಕ ಎನ್. ರಾಮ್‌ರ ಮೂಲಕ, ತಿಳಿದ ಮಾಹಿತಿ, ಬೇರೆ ಮೂಲಗಳಿಂದ ಸಭಿಕರ ಕಿವಿಗೂ ಬಿದ್ದಿತು. ಎಲ್ಲರ ಮುಖದಲ್ಲೂ ತಳಮಳ, 'ಅರೇ ಇದೇನಾಯಿತು!' ಎಂಬ ಕಳವಳದ, ಅಸಹಾಯಕತೆಯ ಭಾವ.

ಅಂದು ಅಯೋಧ್ಯೆಯಲ್ಲಿ ಕರಸೇವಕರು ಬಾಬರಿ ಮಸೀದಿಯನ್ನು ಧ್ವಂಸ ಮಾಡಿದ ಸುದ್ದಿ, ಸಭೆಯಲ್ಲಿ ಕಳವಳದ ವಾತಾವರಣ ಮೂಡಲು ಕಾರಣವಾಗಿತ್ತು.

ಪ್ರೊ॥ ಜಿ. ಕೆ. ಗೋವಿಂದರಾವ್ ನನ್ನ ಮೇಲೆ ಸಿಡುಕಾಡಲು ಆ ವಿಷಯ ಕಾರಣವಾಗಿರಬಹುದೆಂದು ಭಾವಿಸಿದೆ. ಸುಮಾರು ೨೫ ವರ್ಷಗಳಷ್ಟು ಹಿಂದಿನ ಘಟನೆ. ಸಭೆಯಲ್ಲಿ ನನ್ನ ಮೇಲೆ ಸಿಡುಕಾಡಿ ದವರಿಗಾಗಲಿ, ಅದನ್ನು ಕೇಳಿ ತತ್‌ಕ್ಷಣ ಗೊಳ್ಳೆಂದು ನಕ್ಕವರಿಗಾಗಲಿ ಇದು ನೆನಪಿನಲ್ಲಿರಲು ಸಾಧ್ಯವಿಲ್ಲ.

ಅನಂತರ ಪುಸ್ತಕ ಲೋಕಾರ್ಪಣೆ, ವಿಚಾರ ಗೋಷ್ಠಿಗಳು. ಇತ್ಯಾದಿ ಬೇರೆ ಬೇರೆ ಸಂದರ್ಭಗಳಲ್ಲಿ ಅವರನ್ನು ಭೇಟಿ ಮಾಡಿದ್ದೇನೆ. ನನ್ನತ್ತ ಮುಗುಳ್ನಕ್ಕಿದ್ದಾರೆ. 'ಏನ್ ಸಾರ್, ಅಂದು ಹಾಗೆ ಜೋರು ಮಾಡಿದಿರಲ್ಲ!' ಎಂದು ಅವರನ್ನು ಕೇಳಲಿಲ್ಲ. ಅನೇಕ ಸಂದರ್ಭಗಳಲ್ಲಿ ಅವರ ಫೋಟೋ ತೆಗೆದಿದ್ದೇನೆ. ಆದರೆ ನನ್ನ ನೆನಪಿನಲ್ಲಿ ಉಳಿದಿರುವುದು, ನಾನು ಮೆಚ್ಚುವುದು, ಅವರು ಸಿಡುಕಾಡಿದ ದಿನದ ಆ ಭಂಗಿಯನ್ನು!

**ಪರಂಜ್ಯೋತಿ**
ನಂ.೧೦, ೧ನೇ ಮಹಡಿ, ೨೧–ಬಿ ಕ್ರಾಸ್
ರಾಮದೇವಾಲಯ ರಸ್ತೆ, ಈಜಿಪುರ, ವಿವೇಕನಗರ ಅಂಚೆ
ಬೆಂಗಳೂರು – ೫೬೦ ೦೪೭



# ನಾಗರಹೊಳೆ ರಾಷ್ಟ್ರೀಯ ಉದ್ಯಾನವನ ಮತ್ತು ಆದಿವಾಸಿಗಳ ಅತಂತ್ರ ಬದುಕು

ಸ್ವಾತಂತ್ರ್ಯೋತ್ತರ ಅರಣ್ಯ ಆಡಳಿತ, ರಾಷ್ಟ್ರೀಯ ಉದ್ಯಾನ, ಸಂರಕ್ಷಿತ ಅರಣ್ಯ ಅಭಯಾರಣ್ಯ ಎಂಬ ಪರಿಕಲ್ಪನೆಗಳೇ ಅನೇಕ ವೈರುಧ್ಯಗಳನ್ನು ತಮ್ಮಲ್ಲಿಟ್ಟುಕೊಂಡಿವೆ. ಈ ಎಲ್ಲಾ ಪರಿಕಲ್ಪನೆಗಳ ಹಿಂದೆ ಅತ್ಯಂತ ಸ್ಪಷ್ಟವಾದ ವಸಾಹತುಶಾಹಿಗಳ ದುರುದ್ದೇಶಗಳು ಇವೆ. ಸರ್ಕಾರ ರೂಪಿಸಿದ ರಾಷ್ಟ್ರೀಯ ಉದ್ಯಾನವನ ಮತ್ತು ಅಭಯಾರಣ್ಯಗಳು ಎರಡು ಪ್ರಮುಖ ಅಂಶಗಳಿಗೆ ಅವಕಾಶವನ್ನು ನೀಡುತ್ತವೆ. ಅವುಗಳೆಂದರೆ ಮೊದಲನೆಯದು, ಅರಣ್ಯಗಳು ಭೂಮಿಯ ವಾತಾವರಣವನ್ನು ಕಾಪಾಡುತ್ತವೆ. ಅದಕ್ಕಾಗಿ ಅವುಗಳನ್ನು ಕಾಪಾಡಬೇಕು ಮತ್ತು ಕೊನೆಯದು, ವನ್ಯಮೃಗಗಳು ನಾಶವಾಗುತ್ತಿವೆ. ಆದರೆ ರಾಷ್ಟ್ರೀಯ ಉದ್ಯಾನಗಳ ಹೃದಯ ಭಾಗದಲ್ಲಿ ಗಣಿಗಾರಿಕೆಗೆ ಮತ್ತು ಬೃಹತ್ ಡ್ಯಾಂಗಳನ್ನು ಕಟ್ಟಲು ಸಾವಿರಾರು ಎಕರೆ ಪ್ರದೇಶವನ್ನು ಹೇಳದೆ ಕೇಳದೆ ಬಲಿಕೊಟ್ಟಿರುವ ಅನೇಕ ಉದಾಹರಣೆಗಳು ನಮ್ಮೆಲ್ಲರ ಕಣ್ಣೆದುರಿಗೆ ನಡೆದುಹೋಗಿವೆ. ಸಂರಕ್ಷಿತ ಅರಣ್ಯಗಳಲ್ಲಿ ಬಂಡವಾಳಶಾಹಿಗಳು ಹೋಟೆಲ್ ಉದ್ಯಮವನ್ನು ಸ್ಥಾಪಿಸಲು ಭೂಮಿ ಕೇಳಿದಾಕ್ಷಣ ಬಿಟ್ಟುಕೊಡುವ ಧಾರಾಳ ಗುಣವನ್ನು ನಮ್ಮ ಸರ್ಕಾರಗಳು ಪ್ರದರ್ಶಿಸುತ್ತಿರುವುದು ಉತ್ತಮ ಉದಾಹರಣೆಯಾಗಿದೆ. ಯಾವುದಾದರೂ ಉದ್ಯಾನವನದ ಮಧ್ಯೆ ಕಾರ್ಖಾನೆ ಸ್ಥಾಪಿಸಲೆಂದು ಉದ್ದೇಶಿಸಿಬಿಟ್ಟರೆ ಸಕಾಲ ಸೌಕರ್ಯವನ್ನು ನೀಡಲು ಸರ್ಕಾರಗಳು ಮುಂದಾದ ಘಟನೆಗಳು ಜರುಗಿಹೋಗಿವೆ. ಇಂತಹ ಅರಣ್ಯ ನೀತಿಯೇ ಸ್ವಾತಂತ್ರ್ಯೋತ್ತರ ಭಾರತದಲ್ಲೂ ಮುಂದುವರಿಯಿತು. ವಸಾಹತು ಆಡಳಿತ ತೊಲಗಿದರೂ, ವಸಾಹತುಶಾಹಿ ಧೋರಣೆಗಳು ಮಾತ್ರ ವಿರೂಪ ಮತ್ತು ಅಮಾನವೀಯ ಕಾಯ್ದೆಗಳ ರೂಪದಲ್ಲಿ ಕಾಲಕಾಲಕ್ಕೆ ಜೀವಂತವಾಗಿಡುತ್ತಲೇ ಬಂದಿವೆ.

ಅರಣ್ಯಗಳನ್ನು ಅನೇಕ ಕಾರಣಗಳಿಗಾಗಿ ರಕ್ಷಿಸಬೇಕೆಂಬ ಉದ್ದೇಶದಿಂದ ಸರ್ಕಾರ ಇಲಾಖೆಯೊಂದನ್ನು ರೂಪಿಸಿದೆ. ದೇಶದ ಗೃಹ ಮತ್ತು ರಕ್ಷಣಾ ಸಚಿವಾಲಯದಷ್ಟೇ ಪ್ರಬಲವಾದ ಇಲಾಖೆಯಾಗಿ ಅರಣ್ಯ ಇಲಾಖೆ ಪರಿಗಣಿಸಲ್ಪಟ್ಟಿದೆ. ಅರಣ್ಯ ಇಲಾಖೆಗೆ ಸಂಬಂಧಪಟ್ಟ ಕಾಯ್ದೆ ಕಾನೂನುಗಳು ವಸಾಹತು ಆಡಳಿತ ರಚಿಸಿದ ಅರಣ್ಯ ನೀತಿಗೆ ಪೂರಕವಾಗಿಯೇ ಇವೆ. ಸ್ವಾತಂತ್ರ್ಯೋತ್ತರ ಭಾರತ ಸರ್ಕಾರ ವಸಾಹತುಶಾಹಿ ಕಾನೂನುಗಳನ್ನೇ ಸ್ವಲ್ಪ ಬದಲಿಸಿ ಜಾರಿಗೆ ತಂದಿತು. ಅದರಲ್ಲೂ, ವಸಾಹತು ಆಡಳಿತವು ಅರಣ್ಯದಲ್ಲಿನ ಆದಿವಾಸಿ ಸಮುದಾಯಗಳ ಕುರಿತು ಹೆಚ್ಚಾಗಿ ಬಿಗಿ ನಿಲುವನ್ನೇ ತಾಳಿತು ಮತ್ತು ಆದಿವಾಸಿಗಳನ್ನು ವ್ಯವಸ್ಥಿತವಾಗಿ ಅವರ ವಾಸಸ್ಥಾನಗಳಿಂದ ಹೊರಹಾಕಬೇಕಾಗಿತ್ತು. ಆದರೆ, ವಸಾಹತು ಆಡಳಿತಕ್ಕೆ ಪ್ರಬಲ ಪ್ರತಿರೋಧ ಒಡ್ಡುತ್ತಿದ್ದ ಆದಿವಾಸಿಗಳ ಆತ್ಮವಿಶ್ವಾಸ ನಾಶವಾಗಿ, ಅವರ ಸಾಂಘಿಕ ಬದುಕು ವಿಘಟಿತವಾಗಬೇಕೆಂಬುದು ವಸಾಹತು ಆಡಳಿತದ ಪರಮ ಉದ್ದೇಶವಾಗಿತ್ತು ಎಂದು ಎ. ಎಸ್. ಪ್ರಭಾಕರ್‌ರವರು ಹೇಳುತ್ತಾರೆ. ಅರಣ್ಯದಲ್ಲಿ ವಾಸಿಸುವ ಬಹುತೇಕ ಜನ ಆದಿವಾಸಿ ಸಮುದಾಯಗಳಿಗೆ ಸೇರಿದವರು. ಇವರು ಕೇವಲ ಅರಣ್ಯವಾಸಿಗಳು ಮಾತ್ರವಲ್ಲ, ಆ ಅರಣ್ಯದ ಜೊತೆ ಜೊತೆಯಲ್ಲೇ ತಮ್ಮ ಬದುಕುಗಳನ್ನು ರೂಪಿಸಿಕೊಳ್ಳುತ್ತಾ, ಇನ್ನೊಂದೆಡೆ ಅರಣ್ಯದ ಪರಿಸರವನ್ನು ಕಾಪಾಡುತ್ತಾ ಕಾಡುಗಳ್ಳರಿಂದ, ಕಾಡ್ಗಿಚ್ಚುಗಳಿಂದ, ಬೆಲೆ ಬಾಳುವ ಅರಣ್ಯದ ಸಂಪತ್ತನ್ನು ಕಾಯ್ದುಕೊಂಡು ಬಂದಿದ್ದಾರೆ. ಅರಣ್ಯ ಮತ್ತು ಆದಿವಾಸಿಗಳ ಈ ಸಹಬಾಳ್ವೆಗೆ ಕುತ್ತು ಎರಗಿದ್ದು ವಸಾಹತು ಆಡಳಿತದ ಸಂದರ್ಭದಲ್ಲಿ. ಕಂಪನಿಯ ಆದಾಯವನ್ನು ಹೆಚ್ಚಿಸುವ ಆರ್ಥಿಕ ಮೂಲವಾಗಿ ಅರಣ್ಯ ಪರಿಗಣಿಸಲ್ಪಟ್ಟಿತು. ಈ ಭೂಗೋಳದ

**ಮೇಜರ್ ರಾಘವ. ಬಿ.**





ವಾತಾವರಣವನ್ನು ಸಮತೋಲನಗೊಳಿಸುವ ಮತ್ತು ಮನುಷ್ಯನ ಬದುಕನ್ನು ಹಸನುಮಾಡುವ ಒಂದು ಜೈವಿಕ ಪ್ರಕ್ರಿಯೆ ಎಂದು ಅರಣ್ಯವನ್ನು ವಸಾಹತು ಆಡಳಿತ ಪರಿಗಣಿಸಲೇ ಇಲ್ಲ.

**ಸ್ವಾತಂತ್ರ್ಯೋತ್ತರ ಸರ್ಕಾರದ ಅರಣ್ಯ ನೀತಿ ಮತ್ತು ಆದಿವಾಸಿಗಳು**

ಆದಿವಾಸಿಗಳ ಅಸ್ತಿತ್ವದ ಕುರಿತು ಹಲವು ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು ಮತ್ತು ರಾಜಕಾರಣಿಗಳು ವಿವಿಧ ರೀತಿಯಲ್ಲಿ ಪ್ರತಿಕ್ರಿಯಿಸಿದ್ದಾರೆ. ಆದಿವಾಸಿಗಳು ಅರಣ್ಯದಲ್ಲಿರಬೇಕೆ? ಬೇಡವೇ? ಅರಣ್ಯದ ಉಪ ಉತ್ಪನ್ನಗಳನ್ನು ಯಾರು ಸಂಗ್ರಹಿಸಬೇಕು? ಅರಣ್ಯ ಮತ್ತು ಆದಿವಾಸಿಗಳ ಸಂಬಂಧದ ಸ್ವರೂಪವೇನು? ಆದಿವಾಸಿಗಳ ಅಭಿವೃದ್ಧಿಯನ್ನು ಸಾಧಿಸುವ ಬಗೆ ಯಾವುದು? ಆದಿವಾಸಿಗಳು ಅರಣ್ಯದ ಆಚೆಗಿನ ನಾಗರಿಕತೆಗೆ ಸೇರಬೇಕೆ? ಅವರ ಸಂಸ್ಕೃತಿಯ ಗತಿ ಏನು? ಎಂಬ ಈ ಎಲ್ಲ ಪ್ರಶ್ನೆಗಳ ಸಂಕೀರ್ಣ ವರ್ತುಲದಲ್ಲಿ ಆದಿವಾಸಿಗಳ ಅಭಿಪ್ರಾಯಗಳೇ ಗೈರುಹಾಜರಾಗಿಬಿಟ್ಟಿವೆ. ಆದಿವಾಸಿಗಳು ತಮ್ಮ ಅಸ್ತಿತ್ವದ ಕುರಿತು ಏನನ್ನು ಯೋಚಿಸುತ್ತಿದ್ದಾರೆ ಎಂಬ ಪ್ರಶ್ನೆಯನ್ನು ಯಾರೂ ಕೇಳಿಕೊಂಡಿಲ್ಲವೆಂದೇ ರೂಪುಗೊಳ್ಳುತ್ತವೆ. ಆದರೆ ತಮ್ಮ ಉದ್ಧಾರದ ಕುರಿತು 'ಅವರ' (ಆದಿವಾಸಿಗಳ) ನಿಲುವುಗಳೇನು ಎಂಬುದು ಬಹು ಮುಖ್ಯ ಪ್ರಶ್ನೆಯಾಗಬೇಕು; ಆದರೆ 'ಅಭಿವೃದ್ಧಿ' ಮತ್ತು 'ರಾಷ್ಟ್ರದ ಹಿತಾಸಕ್ತಿ' ಎನ್ನುವ ಘೋಷಣೆಗಳು ಮಾತ್ರ ಕಣ್ಣಿಗೆ ಬಟ್ಟೆಕಟ್ಟಿಕೊಂಡು ಘೋಷಿಸಿದ್ದವು. ಅರಣ್ಯ ಮತ್ತು ಆದಿವಾಸಿಗಳನ್ನು ಜೊತೆಯಲ್ಲೇ ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಯೋಜನೆಗಳನ್ನು ರೂಪಿಸಲು ಅನೇಕ ಆಯೋಗಗಳನ್ನು ಭಾರತ ಸರ್ಕಾರ ನೇಮಿಸಿತು ಆದರೆ ಅವು ನಿರೀಕ್ಷಿತ ಪ್ರಮಾಣದಲ್ಲಿ ಯಶಸ್ವಿಯಾಗಲಿಲ್ಲ.

**ನಾಗರಹೊಳೆ ರಾಷ್ಟ್ರೀಯ ಅಭಯಾರಣ್ಯ**

ಭಾರತದ ರಾಷ್ಟ್ರೀಯ ಉದ್ಯಾನಗಳಲ್ಲಿ ನಾಗರಹೊಳೆ ಅಭಯಾರಣ್ಯವೂ ಒಂದು. ಇದು ಮೈಸೂರು ಮತ್ತು ಕೊಡಗು ಜಿಲ್ಲೆಗಳಿಗೆ ಸೇರಿದ್ದು, ಈ ಅಭಯಾರಣ್ಯವೂ ೧೯೫೫ರಲ್ಲಿ ವನ್ಯಜೀವಿಗಳ ಧಾಮವೆಂದು ಘೋಷಿಸಲ್ಪಟ್ಟಿತು. ಮುಂದೆ ಇದನ್ನು ೧೯೭೫ರಲ್ಲಿ ರಾಷ್ಟ್ರೀಯ ಉದ್ಯಾನವನ್ನಾಗಿ ಘೋಷಿಸಲಾಯಿತು. ಆನಂತರ ರಾಷ್ಟ್ರೀಯ ಉದ್ಯಾನವನಕ್ಕೆ ಬೇಕಾಗುವ ಭೂ ಸ್ವಾಧೀನ ಸಂದರ್ಭದಲ್ಲಿ ಹಕ್ಕು ಪತ್ರ ದಾಖಲೆಗಳಿರುವ ಭೂಮಿ ಮತ್ತು ಆಸ್ತಿಗಳಿಗೆ ಮಾತ್ರ ಆದ್ಯತೆ ನೀಡಲಾಯಿತು. ಹೀಗಾಗಿ ಈ ಉದ್ಯಾನವನ ಸುಮಾರು ೫೭೧ ಚ.ಕಿ.ಮೀ. ವಿಸ್ತೀರ್ಣ ಹೊಂದಿದೆ; ಈ ಉದ್ಯಾನವನವು ಮೈಸೂರಿನಿಂದ ಸುಮಾರು ೯೬ ಕಿ.ಮೀ. ದೂರದಲ್ಲಿದ್ದು, ಸಮುದ್ರ ಮಟ್ಟಕ್ಕಿಂತ ಸುಮಾರು ೭೫೦ ಮೀ. ಎತ್ತರದಲ್ಲಿದೆ. ಇದರ ಸರಾಸರಿ ಮಳೆ ೧೬೫ ಸೆ.ಮೀ.ನಷ್ಟಿದೆ. ಆದರೆ, ಆದಿವಾಸಿಗಳು ಯಾವುದೇ ದಾಖಲೆ ಹೊಂದದೆ ಇರುವುದರಿಂದ ಅವರ ಸ್ವಾಧೀನದಲ್ಲಿರುವ ಭೂಮಿ ಮತ್ತು ಆಸ್ತಿಯನ್ನು ವಶಪಡಿಸಿಕೊಳ್ಳಲಾಯಿತು ಹಾಗೂ ಹೆಚ್ಚಿನವರನ್ನು ಉದ್ಯಾನವನದಿಂದ ಬಲವಂತವಾಗಿ ಹೊರನಡೆಯುವಂತೆ ಮಾಡಲಾಯಿತು. ಆದ್ದರಿಂದ ಉದ್ಯಾನವನದ ನಿರ್ಮಾಣದ ವೇಳೆ ಭೂಮಿಯ ಹಕ್ಕುಗಳ ನಿರ್ಲಕ್ಷ್ಯವು ಅವರ ಜೀವನದ ಮೇಲೆ ಪ್ರಮುಖವಾದ ಪ್ರಭಾವವನ್ನು ಬೀರಿದೆ. ನಂತರದಲ್ಲಿ ೧೯೮೭ರಲ್ಲಿ ಉದ್ಯಾನವನದ ವಿಸ್ತೀರ್ಣವನ್ನು ಹೆಚ್ಚಿಸಲಾಯಿತು. ನಾಗರಹೊಳೆ ಉದ್ಯಾನವನವು ಏಪ್ರಿಲ್ ಮತ್ತು ಮೇ ತಿಂಗಳಲ್ಲಿ ಹೆಚ್ಚಿನ ತಾಪವಿದ್ದು, ಮಳೆಗಾಲದಲ್ಲಿ ಹಚ್ಚ ಹಸಿರಿನಿಂದ ಕೂಡಿರುತ್ತದೆ. ಕಾಡಿನೊಳಗೆ ಹಾವಿನಂತೆ ಹೊರಳಿ ಹರಿಯುವ ನಾಗರಹೊಳೆ ಹೆಸರೇ ಈ ಕಾಡಿಗೂ ಅನ್ವಯವಾಗಿದೆ.

ನಾಗರಹೊಳೆ ರಾಜೀವ್ ಗಾಂಧಿ ಉದ್ಯಾನವು ಕರ್ನಾಟಕ ಬಂಡೀಪುರ ರಾಷ್ಟ್ರೀಯ ಉದ್ಯಾನ ಹಾಗೂ ಕೇರಳದ ವೈನಾಡ್ ಅಭಯಾರಣ್ಯಕ್ಕೆ ಹೊಂದಿಕೊಂಡಂತಿದೆ. ಈ ಮೂರು ಅರಣ್ಯ ಪ್ರದೇಶಗಳೊಡನೆ ತಮಿಳುನಾಡಿನ ಮುದ್ದುಮಲೈ ಅರಣ್ಯ ಹಾಗೂ ಕೇರಳದ ಸೈಲೆಂಟ್ ವ್ಯಾಲಿ ರಾಷ್ಟ್ರೀಯ ಉದ್ಯಾನವೂ ಸೇರಿ ಸಂಯುಕ್ತವಾಗಿ ನೀಲಗಿರಿ ಸಂರಕ್ಷಿತ ಜೈವಿಕಗೋಳ ಎನಿಸಿದೆ. ದಕ್ಷಿಣ ಭಾರತದಲ್ಲಿ ಇರುವ ಬಹುತೇಕ ವನ್ಯಜೀವಿಗಳ ಪ್ರಾಣಿ ಸಮೂಹ ಇಲ್ಲಿದೆ. ಈ ರಾಷ್ಟ್ರೀಯ ಉದ್ಯಾನವನದಲ್ಲಿ ವಿವಿಧ ತಳಿಯ ಜಿಂಕೆಗಳು, ವನ ವೃಷಭ, ಆನೆ, ಹುಲಿ, ಚಿರತೆಗಳಲ್ಲದೆ, ಕೆನ್ನಾಯಿ, ಕಡವೆ, ಕಾಡುಹಂದಿ, ಕಾಡುಕುರಿ, ಕರಡಿ, ಕಾಡೆಮ್ಮೆ, ಕೊರ ಹಂದಿ, ಕಾಡುಪಾಪ, ನರಿ, ಮುಳ್ಳುಹಂದಿ, ಮಲಬಾರ್ ಅಳಿಲು, ಪಟ್ಟೆ ಕಿರುಬ ಹಾಗೂ ನಾಲ್ಕು ಕೊಂಬಿನ ಜಿಂಕೆ (ಕೊಂಡುಕುರಿ) ಇಲ್ಲಿವೆ. ಎಲೆ ಉದುರುವ ತೇವದ ಕಾಡುಗಳೂ, ಒಣಕಾಡುಗಳೂ ನಾಗರಹೊಳೆ ಉದ್ಯಾನವನವನ್ನು ಆವರಿಸಿವೆ. ಈ ಕಾಡುಗಳಲ್ಲಿ ೨೫೦ಕ್ಕೂ ಹೆಚ್ಚು ಬಗೆಯ ಪಕ್ಷಿಗಳ ತಾಣ, ಬಕ ಕೊಕ್ಕರೆ, ಬೆಳ್ಳಕ್ಕಿ, ಬಾತು, ಹದ್ದು, ಗಿಡುಗ, ಗವುಜಗ, ನವಿಲು, ಬಾಲಾಡಿ, ಗದ್ದೆ ಗೊರವ, ಮರಕುಟಿಗ, ಸೂರಕ್ಕಿ, ಉಲಿಯಕ್ಕಿ, ಹರಟೆ ಮಲ್ಲ, ಗೂಬೆ ಮೊದಲಾದ ಅಸಂಖ್ಯ ಪಕ್ಷಿಗಳು ಇವೆ. ಮೊಸಳೆ, ನಕ್ಷತ್ರದಾಮೆ, ಕೆರೆಹಾವು, ಮಂಡಲ ಹಾವು, ಹೆಬ್ಬಾವುಗಳಂಥ ಉರಗ ಸರೀಸೃಪಗಳೂ ಇಲ್ಲಿ ಕಂಡುಬರುತ್ತವೆ.

೧೯೭೨ರ ಕಾಯಿದೆಯ ಪ್ರಕಾರ ಸಂರಕ್ಷಿತ ಪ್ರದೇಶಕ್ಕೆ ಅಭಯಾರಣ್ಯಗಳನ್ನು ವನ್ಯಮೃಗಗಳು ಮತ್ತು ರಾಷ್ಟ್ರೀಯ ಉದ್ಯಾನಗಳನ್ನು ಈ ಸಂರಕ್ಷಿತ ಪ್ರದೇಶಕ್ಕೆ ಸೇರಿಸಲಾಯಿತು. ಈಗ ಒಟ್ಟು ದೇಶದಲ್ಲಿ ೪೫೦ ಅಭಯಾರಣ್ಯಗಳಿವೆಯೆಂದು ಗುರುತಿಸಲಾಗಿದೆ. ಇವುಗಳಲ್ಲಿ ೨೫೦ ಅಭಯಾರಣ್ಯಗಳೆಂದು ಮತ್ತು ೬೫ ರಾಷ್ಟ್ರೀಯ ಉದ್ಯಾನಗಳೆಂದು ಗುರುತಿಸಲಾಗಿದೆ, ಈ ಪ್ರದೇಶಗಳಲ್ಲಿ ಜನರ ವಾಸ ಮತ್ತು ಓಡಾಟವನ್ನು ಸಂಪೂರ್ಣವಾಗಿ ನಿಷಿದ್ಧ ಎಂದು ನಿರ್ದೇಶನ ನೀಡಲಾಗಿದೆ. ಈ ನೀಲಗಿರಿ ಗೋಳದಲ್ಲಿ ಕೊಡಗು ಜಿಲ್ಲೆಗಳ ಕೆಲವು ತಾಲ್ಲೂಕುಗಳೂ ಸೇರಿಕೊಂಡಿವೆ. ಮುಂದೆ, ಭಾರತ ಸರಕಾರ ೧೯೮೮ರಲ್ಲಿ ರಾಷ್ಟ್ರೀಯ ಅರಣ್ಯ ಸಂರಕ್ಷಣಾ ಕಾಯ್ದೆ ಜಾರಿಗೆ ತಂದಿತು. ಅದರಲ್ಲಿ ಅರಣ್ಯ, ಜೀವವೈವಿಧ್ಯವನ್ನು ಸಂಗ್ರಹಿಸುವುದರ ಜೊತೆಗೆ ಅರಣ್ಯವಾಸಿಗಳ ಅರಣ್ಯದೊಂದಿಗಿನ ಸಂಬಂಧವನ್ನು, ಅರಣ್ಯವಾಸಿಗಳ ಹಕ್ಕುಗಳು ಮತ್ತು ಜೀವನೋಪಾಯಕ್ಕೆ ಅರಣ್ಯದ ಪ್ರಾಮುಖ್ಯತೆಯನ್ನು ಎತ್ತಿಹಿಡಿಯಲಾಗಿದೆ. ಈ ಕಾನೂನು ಜಾರಿಗೆ ಬಂದ ನಂತರ ಆದಿವಾಸಿಗಳನ್ನು ಬಲವಂತದಿಂದ ಹೊರಗೆ ಹಾಕುವ ಕ್ರಮವನ್ನು ಕೈಬಿಡಲಾಯಿತು. ಆದರೂ ಅರಣ್ಯ ಸಿಬ್ಬಂದಿಗಳು ಆದಿವಾಸಿಗಳ ಚಲನವಲನ ಚಟುವಟಿಕೆಗಳನ್ನು ನಿರ್ಬಂಧಿಸಿರುವುದರಿಂದ ಅವರ ಜೀವನ ಕಷ್ಟಕರವಾಗಿದೆ. ಹಾಗೂ ಯಾವ ಸುಧಾರಣೆಯೂ ಆಗಲಿಲ್ಲ. ಈಗಲೂ ಆದಿವಾಸಿಗಳು ಅರಣ್ಯ ಇಲಾಖೆಗೆ ಕೆಲಸ ಮಾಡುವ ಇನ್ನೊಂದು ಜೀವನೋಪಾಯವನ್ನು ಕಂಡುಕೊಂಡರು. ಈ ಕೆಲಸವು ಕಾಡಿನ ಆನೆಗಳನ್ನು ಹಿಡಿದು ಪಳಗಿಸುವುದು. ಕಾಡ್ಗಿಚ್ಚನ್ನು ನಿಯಂತ್ರಿಸುವುದು, ರಸ್ತೆಗಳನ್ನು ತೆರವುಗೊಳಿಸುವುದು, ಗಿಡಗಳನ್ನು ನೆಡುವುದು, ಇತ್ಯಾದಿಗಳನ್ನು ಒಳಗೊಂಡಿದೆ. ಆದಿವಾಸಿಗಳು ತಮ್ಮ

ದೈನಂದಿನ ಅಗತ್ಯತೆಗಳಿಗಾಗಿ ಅರಣ್ಯದೊಳಗೆ ತುಂಬ ದೂರ ಹೋಗುವಂತಿಲ್ಲ. ಹಾಗೆಯೇ ಪ್ರಾಣಿಗಳಿಗೆ ಸಾಂಕ್ರಾಮಿಕ ರೋಗದ ಕಾರಣ ನೀಡಿ ಅರಣ್ಯದೊಳಗೆ ಬೆಳೆ ಬೆಳೆಸುವಂತಿಲ್ಲ, ಜಾನುವಾರು, ನಾಯಿಗಳನ್ನು ಸಾಕುವಂತಿಲ್ಲ, ಅರಣ್ಯದೊಳಗೆ ಬೇಟೆಯಾಡುವಂತಿಲ್ಲ. ಮನೆಗಳ ಸಣ್ಣಪುಟ್ಟ ದುರಸ್ತಿ ಮಾಡುವಂತಿಲ್ಲ ಹಾಗೂ ಹೊಸ ಮನೆ ಕಟ್ಟಡ ನಿರ್ಮಾಣ, ಬಾವಿ ಅಗೆಯುವುದನ್ನು ನಿಷೇಧಿಸಲಾಗಿದೆ. ಆದಿವಾಸಿಗಳ ಮುಖ್ಯ ಆಹಾರಗಳಾದ ಅಣಬೆ, ಹಣ್ಣು, ಗೆಡ್ಡೆ, ತರಕಾರಿಗಳಂತಹ ಅರಣ್ಯ ಉತ್ಪನ್ನಗಳ ಸಂಗ್ರಹಣೆಯನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ. ಆದಿವಾಸಿಗಳು ಅನುಸರಿಸುವ ಸಾಂಪ್ರದಾಯಿಕ ನೃತ್ಯ, ಸಂಗೀತ (ಶಬ್ದಮಾಲಿನ್ಯದ ಕಾರಣ)ಗಳನ್ನು ಅರಣ್ಯದೊಳಗೆ ನಿಷೇಧಿಸಲಾಗಿದೆ. ಹಿಂದೆ ಆದಿವಾಸಿಗಳಿಗೆ ಸಿಗುತ್ತಿದ್ದ ದೈನಂದಿನ ವಸ್ತುಗಳನ್ನು ಈಗ ಅಂಗಡಿಗಳಿಂದ ಹಣ ಕೊಟ್ಟು ಖರೀದಿಸಬೇಕಾಗಿದೆ. ಸದಾ ಅರಣ್ಯ ಇಲಾಖೆ ಹಾಗೂ ಕಾಡುಪ್ರಾಣಿಗಳ ಭಯದಿಂದ ಬದುಕುತ್ತಿರುವ ಈ ಆದಿವಾಸಿಗಳು ತಮ್ಮ ಅಸ್ತಿತ್ವಕ್ಕಾಗಿ ಹಲವಾರು ಶತಮಾನಗಳಿಂದ ಕಾಯುತ್ತಿದ್ದಾರೆ. ಈಗ ಆಧುನಿಕವಾಗಿ ರಾಷ್ಟ್ರೀಯ ಉದ್ಯಾನವನ ನಿರ್ಮಾಣ ಹಂತದಲ್ಲಿ ಆದಿವಾಸಿಗಳಿಗೆ ಬೇಕಾಗುವ ಅವಶ್ಯಕತೆಗಳನ್ನು ಗಣನೆಗೆ ತೆಗೆದುಕೊಂಡಿಲ್ಲ. ಉದ್ಯಾನವನದೊಳಗೆ ಅವರ ಚಟುವಟಿಕೆಗಳನ್ನು ನಿರ್ಬಂಧಿಸಲಾಗಿದೆ. ಅದರ ಪರಿಣಾಮವಾಗಿ ಆದಿವಾಸಿಗಳು ಸಾಮಾಜಿಕ ಹಾಗೂ ಆರ್ಥಿಕ ಬೆಳವಣಿಗೆಯಲ್ಲಿ ಹಿಂದುಳಿದಿದ್ದಾರೆ. ಈ ರಾಷ್ಟ್ರೀಯ ಉದ್ಯಾನವನವನ್ನು ಕೋರ್ ಝೋನ್, ಬಫರ್ ಝೋನ್, ಅಡ್ಮಿನಿಸ್ಟ್ರೇಟಿವ್ ಝೋನ್, ಸಫಾರಿ ಝೋನ್ ಮತ್ತು ಪೆರಿಫೆರಿ ಝೋನ್ ಎಂಬ ಐದು ವಲಯಗಳಾಗಿ ವಿಂಗಡಿಸಲಾಗಿದೆ. ಇದಲ್ಲದೆ ವಲಯ ಅರಣ್ಯಾಧಿಕಾರಿ ಎಂ. ಶಿವಪ್ಪ ಹೇಳುವಂತೆ ಆದಿವಾಸಿಗಳು ನೆಲೆಸುವ ಹಾಡಿ, ಪುನರ್ ವಸತಿ ಕಾರ್ಯಕ್ರಮ, ಮಾನವ ಮತ್ತು ವನ್ಯಪ್ರಾಣಿಗಳ ಸಂಘರ್ಷ ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳು ಇಂತಿವೆ : ಕಾಂಕ್ರೀಟ್ ಸ್ಪೈಕ್ ಪಿಲ್ಲರ್ಸ್, ಸೋಲಾರ್ ಫೆನ್ಸಿಂಗ್, ಫ್ರೋಪ್ ಟ್ರೆಂಚಸ್, ಐರನ್ ಸ್ಪೈಕ್ ಪಿಲ್ಲರ್ಸ್ ಇತ್ಯಾದಿ.

ಪ್ರಸ್ತುತದ ಈ ಉದ್ಯಾನವನಗಳು ಮತ್ತು ರಕ್ಷಿತಾರಣ್ಯಗಳು ಬ್ರಿಟಿಷ್ ಆಡಳಿತ ಮತ್ತು ಪ್ರಿನ್ಸ್‌ಲಿ ಸ್ಟೇಟ್‌ಗಳಲ್ಲಿ ಸ್ಥಾಪನೆಯಾದವು. ಈ ರಕ್ಷಿತ ಅರಣ್ಯವನ್ನು ಕೇಂದ್ರೀಕರಿಸಿಕೊಂಡು ಹಲವಾರು ಸಂಶೋಧಕರು ಕಾರ್ಯನಿರತರಾಗಿದ್ದಾರೆ. ಅವರುಗಳಲ್ಲಿ ಮುಖ್ಯರೆಂದರೆ ರಂಜೀತ್ ಗುಹ (೧೯೮೯), ಗಾಡ್ಗೀಲ್ ಮತ್ತು ಗುಹ (೧೯೯೨) ಪ್ರಮುಖರು. ಇವರು ಭಾರತದ ಅರಣ್ಯ ಕಾಯ್ದೆ ೧೮೭೮ ಮತ್ತು ಅರಣ್ಯ ಕಾಯ್ದೆ ೧೯೨೭ಗಳ ಅನ್ವಯ ಸ್ಥಾಪನೆಯಾದ ಕಾಯ್ದಿರಿಸಿದ ಮತ್ತು ರಕ್ಷಿತ ಅರಣ್ಯಗಳ ಕುರಿತಂತೆ ಸಾಕಷ್ಟು ಚರ್ಚೆಗಳು ಮತ್ತು ಸಂವಾದಗಳ ಮೂಲಕ ಅರಣ್ಯ ಮತ್ತು ಅದರ ಅವಶ್ಯಕತೆಯ ಕುರಿತಂತೆ ಮಾಹಿತಿ ನೀಡಿದ್ದಾರೆ. ಅರಣ್ಯ ಇಲಾಖೆಗಳನ್ನು ಸ್ಥಾಪಿಸುವ ಮೂಲಕ ಸರ್ಕಾರ ಅರಣ್ಯದ ಸಂರಕ್ಷಣೆ ಮತ್ತು ಟಿಂಬರ್ ಮಾಫಿಯಾವನ್ನು ತಡೆಗಟ್ಟುವ ನೆಲೆಯಲ್ಲಿ ಸಕ್ರಿಯವಾಗಿ ಕಾರ್ಯ ನಿರ್ವಹಿಸಿತು. ಅರಣ್ಯ ರಕ್ಷಣೆ, ಅದರ ನಿರ್ವಹಣೆ, ಅರಣ್ಯದಲ್ಲಿ ತೋಟಗಾರಿಕೆ ಪ್ರಮುಖವಾದ ಯೋಜನೆಗಳನ್ನು ಅನುಷ್ಠಾನಗೊಳಿಸಿತು. ಅರಣ್ಯ ಆಡಳಿತಕ್ಕೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರ ಅನುಷ್ಠಾನಗೊಳಿಸಿದ ಕಾಯಿದೆಗಳನ್ನು ರಾಜ್ಯ ಸರ್ಕಾರ ಸಕಾಲದಲ್ಲಿ ನಿರ್ವಹಿಸುವಂತೆ ಕ್ರಮ ಕೈಗೊಂಡಿತು. ಆದರೆ ಇವುಗಳ ರಕ್ಷಣೆಯ ಹೊಣೆ ಹೊತ್ತ ಸರ್ಕಾರ ವಸಾಹತು ಚಿಂತನೆ ಮತ್ತು ಸಿದ್ಧಾಂತವನ್ನು ಹೆಚ್ಚಾಗಿ ಅಳವಡಿಸಿಕೊಂಡಿತ್ತು. ಹೀಗಾಗಿ ಅದು ಹಲವು ಗೊಂದಲಗಳಿಗೆ ಕಾರಣವಾಯಿತು. ಆದರೂ ಒಂದು ನಿರ್ದಿಷ್ಟವಾದ ದಿಕ್ಕಿನ ಒಳಗೆ ಕೊಂಡೊಯ್ಯುವ ಕೆಲಸ ಮಾತ್ರ ಭರದಿಂದ ಸಾಗಿತ್ತು. ವನ್ಯಜೀವಿಗಳ ಸಂರಕ್ಷಣೆಯ ಹಿತದೃಷ್ಟಿಯಿಂದ ಹೆಚ್ಚು ಗಾಢವಾಗಿ ಆಲೋಚಿಸಿತು ಮತ್ತು ಉನ್ನತ ಕ್ರಮವನ್ನು ಕೈಗೊಂಡಿತ್ತು.

ನಾಗರಹೊಳೆ ರಕ್ಷಿತ ಅರಣ್ಯವು ಪ್ರಸ್ತುತ ಮಹತ್ವಪೂರ್ಣ ಸಂಶೋಧನೆಯ ಅಧ್ಯಯನ ವಿಭಾಗವಾಗಿದೆ. ಏಕೆಂದರೆ ಜನಸಂಖ್ಯೆ ಬೆಳವಣಿಗೆಯಿಂದ ನಾಗರಹೊಳೆ ಮತ್ತು ಅದರ ಸುತ್ತಲಿನ ಪ್ರದೇಶದಲ್ಲಿ ಸಮಸ್ಯೆಗಳು ಅಧಿಕವಾಗುತ್ತವೆ. ಹೀಗಾಗಿ ರಕ್ಷಿತ ಅರಣ್ಯಕ್ಕೆ ಧಕ್ಕೆಯಾಗುವುದು ವನ್ಯಜೀವಿಗಳ ಬೆಳವಣಿಗೆಯ ಮೇಲೆ ಪ್ರಭಾವ ಬೀರುತ್ತದೆ. ಮುಖ್ಯವಾಗಿ ರಾಷ್ಟ್ರೀಯ ಉದ್ಯಾನವನಗಳ ಮೇಲೆ ಸ್ಥಳೀಯರ ಹಸ್ತಕ್ಷೇಪ ಹೆಚ್ಚಾಗುತ್ತದೆ. ಇದರಿಂದ ಉದ್ಯಾನವನಗಳ ನಿಯಂತ್ರಣವು ಕಷ್ಟಸಾಧ್ಯವಾಗುತ್ತದೆ. ಆದರೆ ಈ ಚರ್ಚೆ ಅಥವಾ ಸಂವಾದಗಳು ಈ ಭಾಗಕ್ಕೆ ಹೊಸದಲ್ಲ. ಆದರೂ ಕಾಲದಿಂದ ಕಾಲಕ್ಕೆ ಆಗುವ ಪರಿವರ್ತನೆಯಿಂದಾಗಿ ಇವುಗಳ ಅಧ್ಯಯನ ಬಹಳ ಮಹತ್ವಪೂರ್ಣ ಮತ್ತು ಆಸಕ್ತಿಯ ಕೇಂದ್ರಬಿಂದುವಾಗಿದೆ. ಏಕೆಂದರೆ ಸ್ಥಳೀಯ ಆದಿವಾಸಿಗಳು ಉದ್ಯಾನವನಗಳನ್ನು ಹೆಚ್ಚಾಗಿ ಉಪಯೋಗಿಸುತ್ತಿದ್ದುದರಿಂದ ಅದನ್ನು ನಿಯಂತ್ರಿಸುವ ಸಲುವಾಗಿ ಹೊಸ ಯೋಜನೆಯೊಂದನ್ನು ಅನುಷ್ಠಾನಕ್ಕೆ ತರಲಾಯಿತು. ಮುಖ್ಯವಾಗಿ ನಾಗರಹೊಳೆ ಅಂಚಿನಲ್ಲಿ ಜನಭರಿತ ಸಮುದಾಯಗಳು ಉದ್ಯಾನವನವನ್ನು ನಂಬಿ ಬದುಕುತ್ತಿದ್ದವು. ಈ ಜನಸಂಖ್ಯೆಯೂ ೧೯೯೧ರ ಜನಗಣತಿಯ ಪ್ರಕಾರ ಸುಮಾರು ೧,೦೬,೦೦೦. ಇವರು ಅರಣ್ಯದಲ್ಲಿ ವಾಸಿಸುವುದರ ಜೊತೆಗೆ ಉತ್ಪಾದನೆಯಲ್ಲಿ ತೊಡಗಿದ್ದರು. ಈ ಸಂದರ್ಭದಲ್ಲಿ ಉದ್ಯಾನವನವನ್ನೇ ಹೆಚ್ಚಾಗಿ ನಂಬಿದ ಈ ಸಮುದಾಯಗಳು ಹುಲ್ಲು, ಉರಿಸಲು ಉರುವಲು (ಸೌದೆ), ಹಣ್ಣುಹಂಪಲು ಮತ್ತು ಮರಗಿಡಗಳ ಮೇಲೆ ಹೆಚ್ಚಾಗಿ ಅವಲಂಬಿತರಾಗಿದ್ದರು. ಅದರೊಂದಿಗೆ ಈ ಉದ್ಯಾನವನದಲ್ಲಿ ಆಗಾಗ ಕಂಡುಬರುತ್ತಿದ್ದ ತೇಗ ಮತ್ತು ಶ್ರೀಗಂಧ ಮರಗಳ ಅಕ್ರಮ ಸಾಗಾಟದಿಂದಾಗಿ ಅರಣ್ಯ ಇಲಾಖೆಗೆ ಅವುಗಳ ನಿಯಂತ್ರಣ ಕಷ್ಟಸಾಧ್ಯವಾಗಿತ್ತು. ಅದರೊಂದಿಗೆ ವನ್ಯಜೀವಿಗಳ ಅಕಾಲಿಕ ಮರಣ ಮತ್ತು ವನ್ಯಜೀವಿಗಳನ್ನು ಬೇಟೆಯಾಡುವುದರಿಂದಾಗಿ ಸರ್ಕಾರಕ್ಕೆ ಇವುಗಳ ನಿಯಂತ್ರಣ ಬಹುದೊಡ್ಡ ಸಮಸ್ಯೆಯಾಗಿತ್ತು. ಜೊತೆಗೆ, ನಾಗರಹೊಳೆ ಅಭಯಾರಣ್ಯಕ್ಕೆ ವಲಸೆ ಬರುವವರ ಸಂಖ್ಯೆ ಅಧಿಕವಾಯಿತು. ಮತ್ತೊಂದೆಡೆ ಪ್ರವಾಸ ಹಾಗೂ ಸರ್ಕಾರದ ಇನ್ನಿತರ ಯೋಜನೆಗಳು ಈ ಉದ್ಯಾನವನದ ಮೇಲೆ ಪರಿಣಾಮವನ್ನು ಬೀರಲು ಸಾಧ್ಯವಾಯಿತು. ಹೀಗಾಗಿ ಅವುಗಳಲ್ಲಿ ಸುಧಾರಣೆ ಮತ್ತು ನಿಯಂತ್ರಣ ಅತ್ಯಂತ ಅವಶ್ಯಕತೆಯಿಂದ ಕೂಡಿತ್ತು. ಆದರೆ, ಕರ್ನಾಟಕ ಸರ್ಕಾರಕ್ಕೆ ಅರಣ್ಯ ಸಂರಕ್ಷಕರ ಗುಂಪು ನಾಗರಹೊಳೆ ಭಾಗದಲ್ಲಿ ಜನರ ಹಕ್ಕುಗಳ ಕುರಿತಂತೆ ಬಹಳ ಗಂಭೀರವಾದ ಪ್ರಶ್ನೆಗಳನ್ನು ಎತ್ತಿದ್ದವು. ಹಾಗೆಯೇ ಸರ್ಕಾರದ ನಿಯಮಗಳನ್ನು ವಿರೋಧಿಸಿ ತಮ್ಮ ಪ್ರತಿಭಟನೆಗಳನ್ನು ತೋರ್ಪಡಿಸಿದ್ದವು. ಮುಖ್ಯವಾಗಿ ನಾಗರಹೊಳೆಯಲ್ಲಿ ಪ್ರಾರಂಭವಾಗುತ್ತಿದ್ದ ವಾಣಿಜ್ಯೋದ್ಯಮಗಳು ಮತ್ತು ಕೈಗಾರಿಕೆಗಳ ಕುರಿತಂತೆ ಬಲವಾಗಿ ವಿರೋಧಿಸಿದ್ದರು. ಆದರೆ ಸ್ಥಳೀಯ ರಾಜಕಾರಣದಿಂದಾಗಿ ಪ್ರಾರಂಭವಾದ ಅಣೆಕಟ್ಟು ಮತ್ತು ಗಣಿಗಾರಿಕೆ ಮುಖ್ಯವಾಗಿ ಡಿನೋಟಿಫಿಕೇಷನ್‌ಗಳ ವಿರುದ್ಧ ತಮ್ಮ ಹೋರಾಟವನ್ನು ಮಂಡಿಸಿದ್ದರು.

ಪ್ರವಾಸೋದ್ಯಮದ ಬೆಳವಣಿಗೆ ಹಾಗೂ ನಾಗರಹೊಳೆಯ ಭಾಗದಲ್ಲಿ ಸ್ಥಾಪನೆಯಾಗುತ್ತಿದ್ದ 'ತಾಜ್ ಹೋಟೆಲ್ ಸಂಸ್ಥೆಯ' ವಿರುದ್ಧ ಎನ್.ಜಿ.ಒ.ಗಳು ತಮ್ಮ ವಾದವನ್ನು ನ್ಯಾಯಾಲಯದ ಮೂಲಕ ಮಂಡಿಸಿದ್ದರು. ಹೀಗಾಗಿ ಒಂದು ಸಮತೋಲನ ಚರ್ಚೆ ಪ್ರಾರಂಭವಾಗಿ ಉದ್ಯಾನವನ ಹಾಗೂ ಅರಣ್ಯಗಳನ್ನು ಶಾಸನಾತ್ಮಕವಾಗಿ ರಾಜ್ಯ ಸರ್ಕಾರ ನಿಯಂತ್ರಣ ಮತ್ತು ಭಾಗವಹಿಸುವಿಕೆಗೆ ಸಂಬಂಧಿಸಿದಂತೆ ಚರ್ಚೆಗಳು ಪ್ರಾರಂಭವಾದವು. ಸರ್ಕಾರ ಸ್ಥಳೀಯರ ಭಾಗವಹಿಸುವಿಕೆಯನ್ನು ಖಂಡಿಸಿತು. ಇದರಿಂದಾಗಿ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ನಡುವೆ ಸಂವಾದಗಳು ಪ್ರಾರಂಭವಾದವು. ಈ ಸಂವಾದವು ಮುಖ್ಯವಾಗಿ ಸ್ಥಳೀಯರ ಭಾಗವಹಿಸುವಿಕೆ ಮತ್ತು ಭಾಗವಹಿಸದಂತೆ ಚರ್ಚೆಯನ್ನು ಪ್ರಾರಂಭಿಸಲಾಗಿತ್ತು. ಮುಖ್ಯವಾಗಿ, ನಾಗರಹೊಳೆಯ ಕುರಿತಂತೆ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ ಜೊತೆಗೆ ಸರ್ಕಾರೇತರ ಸಂಘಟನೆಗಳು ನಾಗರಹೊಳೆ ಉದ್ಯಾನವನದ ರಕ್ಷಣೆಗೆ ಸಂಬಂಧಿಸಿದಂತೆ ಒಂದು ಚರ್ಚೆ ಪ್ರಾರಂಭವಾಯಿತು. ಎನ್.ಜಿ.ಒ.ಗಳು ಭಾರತದ ಪರಿಸರ ನಿಯಮದ ಪರವಾಗಿ ತಮ್ಮ ವಾದವನ್ನು ಪ್ರಾರಂಭಿಸಿದ್ದರು. ಇವರು ನಾಗರಹೊಳೆ ಅರಣ್ಯದಲ್ಲಿ ಇರುವ ಆದಿವಾಸಿಗಳು ಮತ್ತು ಹಳ್ಳಿಗಳನ್ನು ಹಾಗೂ ಅದರ ಹಕ್ಕುಗಳನ್ನು ಕೇಂದ್ರೀಕರಿಸಿಕೊಂಡು ಸರ್ಕಾರ ನಿರ್ಬಂಧ ಹೇರುತ್ತಿರುವ ಉದ್ಯಾನವನ ಅಥವಾ ಅರಣ್ಯ ನಿವಾಸಿಗಳ ಪರವಾಗಿ ಸರ್ಕಾರದ ವಿರುದ್ಧ ಸವಾಲನ್ನು ಹಾಕುತ್ತಾರೆ. ಹಾಗೆಯೇ ಒಂದು ಸಣ್ಣ ಪ್ರಮಾಣದಲ್ಲಿ ಅರಣ್ಯವನ್ನು ಉಪಯೋಗಿಸಲು ಅವಕಾಶ ನೀಡುವಂತೆ ಸರ್ಕಾರದ ಮೂಲಕ

**ಜನನಿ**

ಕಂದನ ಹಸಿವ
ಮಾಯ ಮಾಡುವಳು
ಎದೆ ಹಾಲಿಂದ;
ಲಾಲಿ ಹಾಡಿ
ಪ್ರೀತಿ ತೋರುವಳು
ಎದೆ ಆಳದಿಂದ.

**ಡಾ॥ ವಿ. ಪುಗಳೇಂದಿ**
ಸಿರುಗುಪ್ಪ

ವಿನಂತಿಸಿಕೊಳ್ಳುತ್ತಾರೆ. ಎನ್.ಜಿ.ಓ.ಗಳು ಅರಣ್ಯ ಸಂರಕ್ಷಣೆಯ ಕುರಿತಂತೆ ತಮ್ಮ ವಿವಿಧ ಉದ್ದೇಶಗಳು, ಗಾತ್ರ, ವ್ಯಾಪ್ತಿ ಮತ್ತು ಐತಿಹಾಸಿಕತೆಯನ್ನು ವಿವರಿಸುವ ಮೂಲಕ ಆದಿವಾಸಿಗಳು ಈ ಭಾಗದ ಮೂಲ ನಿವಾಸಿಗಳು; ಹೀಗಾಗಿ ಅವರ ಹಕ್ಕುಗಳ ರಕ್ಷಣೆಯ ಕುರಿತು ಪ್ರತಿಪಾದಿಸುತ್ತಾರೆ. ಅರಣ್ಯ ವಲಯದ ಕಟ್ಟುನಿಟ್ಟು ನಿಯಂತ್ರಣ ಮತ್ತು ಭಾಗವಹಿಸುವಿಕೆಯ ಕುರಿತು ತಮ್ಮ ವಿವಿಧ ಅಭಿಪ್ರಾಯವನ್ನು ಮಂಡಿಸುತ್ತಾರೆ. ಈ ಎನ್.ಜಿ.ಓ.ಗಳು ತಮ್ಮ ಸಂಘ ಸಂಸ್ಥೆಗಳ ಮೂಲಕ ರಕ್ಷಿತ ವಲಯದಲ್ಲಿನ ಸ್ಥಳೀಯ ನಿವಾಸಿಗಳ ಮೇಲೆ ಪ್ರಭಾವ ಬೀರುತ್ತಾರೆ. ಹೀಗಾಗಿ ಈ ಅಂತರರಾಷ್ಟ್ರೀಯ ಎನ್.ಜಿ.ಓ.ಗಳು ಸಾಮಾಜಿಕ ಚಳುವಳಿಯನ್ನು ಸೃಷ್ಟಿಸಿದರು. ಆ ಮೂಲಕ ದಲಿತರು ಮತ್ತು ಬುಡಕಟ್ಟುಗಳನ್ನು ಉತ್ತೇಜಿಸಿದ್ದರು. ಹಾಗೆಯೇ ನಾಗರಹೊಳೆ ಅಭಯಾರಣ್ಯವನ್ನು ಕೇಂದ್ರೀಕರಿಸಿ ಹೇಳುವುದಾದರೆ ಅದರ ಸಂಘಟನಾತ್ಮಕ ಉದ್ದೇಶಗಳು, ವ್ಯಕ್ತಿತ್ವ ಮತ್ತು ಆ ಪರಿಸರ ಇತಿಹಾಸ ಹಾಗೂ ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳ ಭಾಗವಹಿಸುವಿಕೆಯನ್ನು ಆಳವಾಗಿ ವಿವರಿಸುತ್ತಾರೆ.

ಪರಿಸರ ಅರಣ್ಯವಾಸಿ, ಪರಿಸರ ಮತ್ತು ನಮ್ಮ ಬದುಕು ಎಂದು ಜೀವಿಸುತ್ತಿರುವ ಆದಿವಾಸಿ ಸಮುದಾಯವು ಪ್ರಕೃತಿ ಮತ್ತು ಸಂಸ್ಕೃತಿಯನ್ನು ಪ್ರತ್ಯೇಕತೆಯಾಗಿ ಪರಿಗಣಿಸಲು ಒಪ್ಪಿಕೊಳ್ಳುವುದಿಲ್ಲ ಎಂಬುದನ್ನು ನಾವು ಗಮನಿಸಬಹುದು. ಸಾಮಾನ್ಯವಾಗಿ ಸಂರಕ್ಷಣಾ ನೀತಿಗಳಿಂದ ಮೂಲ ನಿವಾಸಿಗಳನ್ನು (ಆದಿವಾಸಿಗಳನ್ನು) ಪ್ರತ್ಯೇಕಿಸಲಾಗುತ್ತದೆ. ಸ್ಥಳೀಯ ನಿವಾಸಿಗಳನ್ನು ಮೂಲೆಗುಂಪು ಮಾಡಿ ಸಂರಕ್ಷಣಾ ಪ್ರದೇಶವನ್ನು ಸ್ಥಾಪಿಸುವುದು ಅತ್ಯಂತ ಕೆಟ್ಟ ವಿಚಾರವಾಗಿರುತ್ತದೆ. ಹೀಗಾಗಿ ಗ್ರಾಮೀಣ ಪ್ರದೇಶಗಳ ವಲಸಿಗರು ಅರಣ್ಯ ಪ್ರದೇಶ ಮತ್ತು ಸಂಪನ್ಮೂಲ ಬಳಕೆಗಳ ಮೇಲೆ, ಕಾಯ್ದೆ, ಕಾನೂನು ಮತ್ತು ಖಾಸಗೀಕರಣಗಳ ಮೂಲಕ ಅವರನ್ನು ನಿರ್ಬಂಧಿಸಲಾಗಿದೆ. ಪರಿಣಾಮವಾಗಿ ಭೂಮಿಯ ಉಪಯೋಗ ಆಚರಣಾ ವಿಧಾನಗಳಾದ ಕಟ್ಟಿಗೆ ಸಂಗ್ರಹಣೆ ಮತ್ತು ಬೇಟೆ ಅಪರಾಧಗಳಾದವು. ಸಂರಕ್ಷಣಾ ಪ್ರದೇಶಗಳಲ್ಲಿ ಅನಾದಿ ಕಾಲದಿಂದಲೂ ನೆಲೆಸಿರುವ ಆದಿವಾಸಿಗಳ ಜೀವನಶೈಲಿಯ ಮೇಲೆ ಹೊಸ ಆರ್ಥಿಕ ಚಟುವಟಿಕೆಗಳಾದ ಉದ್ಯಾನವನ ಮತ್ತು ವನ್ಯಜೀವಿಗಳ ವೀಕ್ಷಣಾ ಪ್ರವಾಸ ಬೇರೆಯೇ ಚಿತ್ರಣವನ್ನು ನೀಡುತ್ತಿವೆ. ಹೀಗಾಗಿ ಅವರು ಸನ್ನಿವೇಶಕ್ಕೆ ತಕ್ಕಂತೆ ಒಗ್ಗಿಕೊಳ್ಳುವುದು ಕಷ್ಟಕರವಾಯಿತು ಹಾಗೂ ಬದುಕಿನ ಅನಿವಾರ್ಯತೆಗೆ ಹೊಸ ಆರ್ಥಿಕ ಚಟುವಟಿಕೆಗಳಿಗೆ ಹೊಂದಿಕೊಳ್ಳಬೇಕಾಯಿತು. ಸಂರಕ್ಷಣಾ ನಿಯಂತ್ರಣ ಅಧಿಕಾರವು ಮೂಲ ನಿವಾಸಿಗಳ ಅವಕಾಶವನ್ನು ಕಡಿಮೆ ಮಾಡತೊಡಗಿದವು. ಇಂತಹ ಸಂರಕ್ಷಣಾ ಯೋಜನೆಗಳು ಸ್ಥಳೀಯ ನಿವಾಸಿಗಳ ಮೇಲೆ ಧನಾತ್ಮಕ ಪರಿಣಾಮದ ಬದಲು ಋಣಾತ್ಮಕವಾದ ಪರಿಣಾಮವನ್ನು ಬೀರಲು ಸಾಧ್ಯವಾಯಿತು. ಬಹಳಷ್ಟು ದೇಶೀಯ ಮೂಲನಿವಾಸಿಗಳು ಸಂರಕ್ಷಣಾ ಪ್ರದೇಶವೆಂದು ಗುರುತಿಸಿದ ಪ್ರದೇಶಗಳನ್ನು ಆಕ್ರಮಿಸಿಕೊಂಡಿರುತ್ತಾರೆ. ಅಪಾರ ಸಂಖ್ಯೆಯಲ್ಲಿರುವ ಬಡಜನರ ಬದುಕನ್ನು ಸಂರಕ್ಷಣಾ ಯೋಜನೆಗಳು ನಿರ್ಲಕ್ಷಿಸುವಂತಿಲ್ಲ. ಆದರೆ, ರಾಜಕೀಯ ಬೆಂಬಲ ಪಡೆಯದ ಇಂಥ ಬಡಜನರು, ಸಂರಕ್ಷಿಸಿದ ಅರಣ್ಯ ಪ್ರದೇಶಗಳಲ್ಲಿ ಇನ್ನೂ ನೆಲೆಸಿದ್ದಾರೆ ಹಾಗೂ ಭವಿಷ್ಯದ ಬಗ್ಗೆ ಭಯಭೀತರಾಗಿದ್ದಾರೆ. ಈ ಬಗೆಯ ಒತ್ತುವರಿ ಭೂಮಿ (ಆಕ್ರಮಿತ)ಯನ್ನು ಅಂದಾಜಿಸುವುದು ಕಷ್ಟಕರವಾದರೂ, ೧೯೬೮ ಕೊಠಾರಿ ವರದಿ, ಭಾರತದಲ್ಲಿ ಶೇಕಡ ೫೭ರಿಂದ ೭೨ರಷ್ಟು ಒತ್ತುವರಿಯಾಗಿದೆ ಎಂದು ವರದಿ ಮಾಡಿತ್ತು. ಇಂತಹ ಸಂರಕ್ಷಿತ ಪ್ರದೇಶಗಳಲ್ಲಿ ಆದಿವಾಸಿ ಮತ್ತು ದೇಶೀಯ ಮೂಲ ನಿವಾಸಿಗಳ ಜೀವನೋಪಾಯಕ್ಕೆ ನಿರ್ಬಂಧ ಹೇರಿದ್ದು, ಪರಿಹಾರ ಯೋಜನೆಗಳನ್ನು ರೂಪಿಸುವಲ್ಲಿ ವಿಫಲವಾಗಿವೆ. ಇದಲ್ಲದೆ, ಸಂರಕ್ಷಿತ ಪ್ರದೇಶಗಳಲ್ಲಿ ಜೀವನೋಪಾಯ ನಡೆಸುವ ಅವಕಾಶಗಳು ಆದಿವಾಸಿಗಳಿಗೆ ಹೊಸದಾಗಿದ್ದು ವಾಣಿಜ್ಯ ಅವಲಂಬಿತ ಕೃಷಿಯಲ್ಲಿ ದಿನಭತ್ಯೆ (ಕೂಲಿ) ಕೆಲಸಕ್ಕೆ (ಸಂರಕ್ಷಣಾ ಸ್ಥಳದಿಂದ ದೂರದಲ್ಲಿರುವ) ಹೊಂದಿಕೊಳ್ಳುವುದು ಕಷ್ಟಕರವಾಗಿದ್ದರೂ ಅನಿವಾರ್ಯವಾಯಿತು. ಅದರೊಂದಿಗೆ ಮಾರುಕಟ್ಟೆ ಅವಲಂಬಿತ ಆರ್ಥಿಕತೆ ಆಗಿದ್ದು, ಕಾಲ ಕಳೆದಂತೆ ಈ ಕೃಷಿಯ ವಾಣಿಜ್ಯೀಕರಣ ಮತ್ತು ಮಾರುಕಟ್ಟೆ ಅವಲಂಬಿತ ಆರ್ಥಿಕತೆ ಕೃಷಿಕರ ಬದುಕಿನ ರಚನೆಯಲ್ಲಿ ಬದಲಾವಣೆಯನ್ನು ತಂದಿತು. ಮಾರುಕಟ್ಟೆಯ ವಿಫಲತೆ, ಉತ್ಪಾದನಾ ರಹಿತ ಭೂಮಿಯ ಬೆಲೆ ಹೆಚ್ಚಿದ ಮೇಲೆ ಅವರುಗಳ ಬದುಕು ಶೋಷಣೆಯಾಗತೊಡಗಿತ್ತು. ಮುಂದೆ, ನಾಗರಹೊಳೆ ಪ್ರದೇಶದ ಮೇಲೆ ಬೀರಿರುವ ಸಾಧಕ–ಬಾಧಕ ಅಂಶಗಳ ಬಗ್ಗೆ ಮಾಹಿತಿಯನ್ನು ನೀಡಿತ್ತು. ಇದರ ಫಲವಾಗಿ ಸಂಸ್ಥೆಯೂ ಈ ಕೆಳಗಿನ ಯೋಜನೆಯನ್ನು ಪ್ರಾರಂಭಿಸಿತ್ತು :

✶ ಹಳ್ಳಿಗಳ ಸ್ಥಳೀಯ ನಾಯಕರುಗಳಿಗೆ ಮಾಹಿತಿ ಮತ್ತು ಸಂದೇಶವನ್ನು ರವಾನಿಸುವ ಕೆಲಸವನ್ನು ಪ್ರಾರಂಭಿಸಿತ್ತು.
✶ ಸಮುದಾಯಗಳಲ್ಲಿ ಕಾಳಜಿಯನ್ನು ಮೂಡಿಸಿ ಯೋಜನೆಯ ಪ್ರತಿಕೂಲ ಹಾಗೂ ಅನಾನುಕೂಲ ಅಂಶದ ಬಗ್ಗೆ ಅರಿವು ಮೂಡಿಸಿತ್ತು.
✶ ಪರಿಸರ ಕೇಂದ್ರಿತ ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿತ್ತು.

ಈ ಯೋಜನೆಯಡಿ ನಾಗರಹೊಳೆಯ ಪ್ರಮುಖ ಹಳ್ಳಿಗಳಲ್ಲಿ ಇರುವ ಹಾಡಿಗಳು ಮತ್ತು ಸಮುದಾಯಗಳು ಮಾಹಿತಿಯನ್ನು ಸಂಗ್ರಹಿಸಲಾಯಿತು. ಇದರಿಂದಾಗಿ ನಾಗರಹೊಳೆಯ ೪೫ ಹಾಡಿಗಳು ಮತ್ತು ಉದ್ಯಾನವನದ ಒಳಗೆ ಸುಮಾರು ೧೭೦೦ ಕುಟುಂಬಗಳಿಂದ ಸುಮಾರು ೮೦೦೦ ಜನರು ವಾಸಿಸುತ್ತಿದ್ದರು. ಅವರುಗಳು ಅತಂತ್ರರಾಗಿ ತಮ್ಮ ಅಸ್ತಿತ್ವದ ರಕ್ಷಣೆಗಾಗಿ ಹೋರಾಡುವಂತೆ ಆಯಿತು. ಈ ಸಂದರ್ಭದಲ್ಲಿ ಉದ್ಯಾನವನದ ಒಳಗಿನ ಪ್ರಮುಖ ಆದಿವಾಸಿಗಳೆಂದರೆ, ಜೇನು ಕುರುಬ, ಚಿಟ್ಟ ಕುರುಬ, ಹಕ್ಕಿ ಪಿಕ್ಕಿ ಜನಾಂಗ ಮತ್ತು ಯರವರು ಪ್ರಮುಖರಾಗಿದ್ದಾರೆ. ಈ ಆದಿವಾಸಿಗಳು ಮಿಶ್ರ ಭಾಷೆಯಾಗಿ ತಮಿಳು, ಮಲೆಯಾಳಂ, ತೆಲಗು ಮತ್ತು ಕನ್ನಡ ಮಾತನಾಡುತ್ತಾರೆ. ಇಲ್ಲಿ ಶೇಕಡ ೯೦ರಷ್ಟು ಜನರು ಕನ್ನಡ ಮಾತನಾಡುತ್ತಾರೆ. ಇಲ್ಲಿ ಶೇಕಡ ೮೦ರಷ್ಟು ಆದಿವಾಸಿಗಳು ಕುರುಬ ಜನಾಂಗಕ್ಕೆ ಸೇರಿದ್ದು, ಶೇಕಡ ೫ಕ್ಕಿಂತಲೂ ಕಡಿಮೆ ಅಕ್ಷರಸ್ಥರಿದ್ದಾರೆ. ಕೆಲವೇ ಕೆಲವು ಮಹಿಳೆಯರು ಶಿಕ್ಷಣ ಪಡೆದಿದ್ದಾರೆ. ಇವರು ಕುಮ್ರಿ ಬೇಸಾಯ ಮಾಡುತ್ತಿದ್ದು, ರಾಗಿ ಮತ್ತು ಭತ್ತವನ್ನು ಉತ್ಪಾದಿಸುತ್ತಾರೆ. ಹೀಗೆ ಈ ನಾಡಿನ ಮೂಲನಿವಾಸಿಗಳು ಅತಂತ್ರರಾಗುವ ಪರಿಸ್ಥಿತಿಯನ್ನು ಸರ್ಕಾರ ಮತ್ತು ಆಳುವ ವರ್ಗ ನಿರ್ಮಿಸಿವೆ.

**ಮೇಜರ್ ರಾಘವ ಬಿ.**
ಸಹಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಇತಿಹಾಸ ವಿಭಾಗ
ಫೀಲ್ಡ್ ಮಾರ್ಷಲ್ ಕೆ. ಎಂ. ಕಾರ್ಯಪ್ಪ ಕಾಲೇಜು, ಮಡಿಕೇರಿ
(ಮಂಗಳೂರು ವಿ. ವಿ. ಅಧೀನ ಕಾಲೇಜು)
ಕೊಡಗು ಜಿಲ್ಲೆ, ಪಿನ್ – ೫೭೧ ೨೦೧

# ಗಜಲ್

ನಾಳೆ ಇಂತಹ ದಿನ ಬರಲಿ ಎಲ್ಲೆಡೆ ಶಾಂತಿ ನೆಲೆಸಲಿ
ಬಡವರ ಹಸಿದವರ ಮುಖಗಳಲಿ ನಗು ನೆಲೆಸಲಿ

ಬಂದೂಕು ಬಾಂಬ್‌ಗಳೆಲ್ಲ ತುಕ್ಕು ಹಿಡಿದು ಹೂತುಹೋಗಲಿ
ಮನುಷ್ಯ ಸಂಬಂಧ ಎಲ್ಲೆಡೆ ಅರಳಿ ಪ್ರೀತಿ ನೆಲೆಸಲಿ

ಹಿಂಡು ಹಿಂಡು ಪಕ್ಷಿಗಳೆಲ್ಲ ಮುಕ್ತವಾಗಿ ಹಾರಾಡಲಿ
ಸುತ್ತಲೂ ಚಂದಿರನ ಬೆಳದಿಂಗಳು ಚೆಲ್ಲಿ ತಂಪು ನೆಲೆಸಲಿ

ಜಾತಿ ಅಳಿದು ಮನುಷ್ಯ ಪ್ರೀತಿ ಉಳಿಯಲಿ
ಅಸಹಿಷ್ಣುತೆ ದೂರವಾಗಿ ಲೋಕದಲಿ ಸ್ನೇಹ ನೆಲೆಸಲಿ

'ದಿನ್ನಿ' ನಾಡೆಲ್ಲ ನಂದನವನವಾಗಿ ವಸಂತ ತಬ್ಬಲಿ
ಚೆಂಗುಲಾಬಿ ಜಾಜಿ ಮಲ್ಲಿಗೆಗಳು ಅರಳಿ ಸುಗಂಧ ನೆಲೆಸಲಿ

**ದಸ್ತಗೀರ್‌ಸಾಬ್ ದಿನ್ನಿ**
೮, ಪದ್ಮಾವತಿ ಕಾಲೋನಿ, ಆಸಾಪುರ ರಸ್ತೆ, ರಾಯಚೂರು – ೫೮೪ ೧೦೧

# ಅಂಬೇಡ್ಕರ್ ಪುಸ್ತಕ ಪ್ರೀತಿ



'ಜಗತ್ತನ್ನು ಬೆಳಗಲು ಸೂರ್ಯ ಬೇಕು ಬದುಕನ್ನು ಬೆಳಗಲು ಪುಸ್ತಕ ಸಾಕು' ಎಂಬುದು ರವೀಂದ್ರನಾಥ ಟಾಗೋರ್ ಅವರ ಅಭಿಪ್ರಾಯ. 'ಅತ್ಯುತ್ತಮ ಪುಸ್ತಕಗಳು ಉತ್ತಮ ಸಂಗಾತಿಗಳು' ಎಂಬುದು ತಾರ್ಕರ್ ಅವರ ಮಾತು. 'ಉತ್ತಮ ಪುಸ್ತಕಗಳು ನಾಡಿನ ಸಂಸ್ಕೃತಿಯ ಪ್ರತೀಕ' ಎಂಬುದು ಜವಾಹರಲಾಲ್ ನೆಹರು ಅವರ ಉಕ್ತಿಯಾಗಿದೆ. ಇವರೆಲ್ಲರ ಮುಂದೆ ಅಂಬೇಡ್ಕರ್ ಅವರ ಪುಸ್ತಕ ಪ್ರೀತಿ ಅಗಾಧವಾದುದು. 'ನಿಮ್ಮ ಬಳಿ ಎರಡು ರೂಪಾಯಿ ಇದ್ದರೆ ಒಂದು ರೂಪಾಯಿಯನ್ನು ಆಹಾರಕ್ಕಾಗಿ ಬಳಸಿ, ಉಳಿದ ಇನ್ನೊಂದು ರೂಪಾಯಿಯನ್ನು ಪುಸ್ತಕಕ್ಕಾಗಿ ಬಳಸಿ, ಆಹಾರವು ನಿಮ್ಮನ್ನು ಜೀವಂತವಾಗಿರುವಂತೆ ಮಾಡುತ್ತದೆ. ಪುಸ್ತಕವು ಹೇಗೆ ಜೀವಿಸಬಹುದೆಂದು ಕಲಿಸುತ್ತದೆ' ಎಂದು ಅಂಬೇಡ್ಕರ್ ಅವರು ಹೇಳಿದ್ದು ಎಷ್ಟು ಅರ್ಥಗರ್ಭಿತವಲ್ಲವೇ ? ಪುಸ್ತಕಗಳು ಕೇವಲ ನಿರ್ಜೀವ ವಸ್ತುಗಳಲ್ಲ. ಬದಲಾಗಿ ಪುಸ್ತಕ ಓದಿದ ಪ್ರತಿಯೊಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ಶ್ರೇಷ್ಠಮಟ್ಟಕ್ಕೇರಿಸುತ್ತದೆ ಎನ್ನಲಿಕ್ಕೆ ಅಂಬೇಡ್ಕರ್ ಅವರೇ ಒಂದು ದೊಡ್ಡ ಉದಾಹರಣೆಯಾಗಿದ್ದಾರೆ.

**ಡಾ॥ ಎಚ್. ಟಿ. ಪೋತೆ**

ಪ್ರಪಂಚದಲ್ಲಿಯೇ ಭಾರತದ ಕೌಟುಂಬಿಕ ವ್ಯವಸ್ಥೆ ನಿಜವಾಗಿಯೂ ಒಳ್ಳೆಯದು. ಹೆತ್ತವರು, ಒಡಹುಟ್ಟಿದವರು, ಮಗ ಸೊಸೆ, ಅಜ್ಜ ಅಜ್ಜಿ ಎಲ್ಲರೂ ಒಂದಾಗಿ ಒಟ್ಟಾಗಿ ಬಾಳುವುದಿದೆ. ಅಷ್ಟೇ ಅಲ್ಲ – ಇಲ್ಲಿಯ ಸಂಬಂಧಗಳು, ಸಂಬಂಧಗಳ ಮೂಲಕ ನೆಲೆ ನಿಂತಿರುವ ಈ ನೆಲದ ಕಲೆ, ಸಾಹಿತ್ಯ, ಸಂಸ್ಕೃತಿ, ಭಾಷೆ ಇವೆಲ್ಲವುಗಳನ್ನು ಗಮನಿಸಿದಾಗ ನಿಜವಾಗಿಯೂ ಭಾರತೀಯರಲ್ಲದವರಿಗೆ ಕೌಟುಂಬಿಕ ನೆಲೆಯ ಬದುಕಿನ ವಿಧಾನ ವಿಶಿಷ್ಟ ವೈವಿಧ್ಯಮಯವೆಂತಲೂ ಕಾಣಿಸುತ್ತದೆ. ಆದರೆ ಇಲ್ಲಿನ ಸಾಮಾಜಿಕ ನೆಲೆಯ ಅಸಮಾನತೆ, ವರ್ಣ ವ್ಯವಸ್ಥೆ ಭಾರತೀಯ ದಲಿತನಿಗೆ ತುಂಬ ಅಸಹನೀಯವಾಗಿ ಕಾಣಿಸುತ್ತದೆ. ಹೊರಗಿನವರಿಗೂ ಕೂಡ. ಭಾರತದಲ್ಲಿರುವ ಅಸ್ಪೃಶ್ಯರು ಕೆರೆ, ಬಾವಿ ಹಳ್ಳಕೊಳ್ಳಗಳ ನೀರು ಸ್ವತಂತ್ರವಾಗಿ ಮುಟ್ಟುವಂತಿರಲಿಲ್ಲ. ದೇವಾಲಯಗಳ ಪ್ರವೇಶ ಅವನಿಗೆ ಮುಕ್ತವಾಗಿಲ್ಲ, ಕೆರೆ, ರಸ್ತೆಗಳ ನಿರ್ಮಾಣ ಅಷ್ಟೇ ಏಕೆ ಚಪ್ಪಲಿ ಹೊಲೆಯುವ, ಚರ್ಮ ಹದಗೊಳಿಸುವ, ದವಸ ಧಾನ್ಯ, ಉಡುಪುಗಳು – ಮುಂತಾದ ಮೂಲ ಸಾಮಗ್ರಿಗಳ ಸಿದ್ಧತೆಯಲ್ಲಿ ಅವನ ಶ್ರಮ ನೂರಕ್ಕೆ ನೂರರಷ್ಟು ಇದ್ದೇ ಇರುತ್ತದೆ. ಆದರೆ ಅದರಿಂದ ಸಂಪತ್ತಿನಿಂದ ಅಧಿಕಾರದಿಂದ ಆತನನ್ನು ಮಾತ್ರ ವಂಚಿತನನ್ನಾಗಿ ಮಾಡುವ ಮೂಲಕ ನಿರಂತರ ಶೋಷಣೆ ಮಾಡುತ್ತ, ಕೀಳಾಗಿ ಕಾಣುತ್ತ ತುಚ್ಛೀಕರಿಸಿದ್ದು ಭಾರತದ ಸಾಮಾಜಿಕ ನಿಜಸ್ಥಿತಿ. ಈ ಪದ್ಧತಿಯನ್ನು ಧಿಕ್ಕರಿಸಿದ ಮೊದಲ ವ್ಯಕ್ತಿ ಬುದ್ಧ ಎರಡನೆಯವನು ಬಸವಣ್ಣ, ಆದಾಗ್ಯೂ ಈ ಅಪಮಾನಗಳಿಂದ ಮುಕ್ತರಾಗದ ದಲಿತ ಶೋಷಿತ ಸಮುದಾಯದ ವಾರಸುದಾರರಾಗಿ, ಅವರ ಬಿಡುಗಡೆಗೆ ಕಾರಣರಾಗಿ, ಕೊರಳ ದನಿಯಾಗಿ ಬಂದವರು ಅಂಬೇಡ್ಕರ್ ಎಂದಾಗ ಸಮಾಜದ ಪ್ರತಿಯೊಬ್ಬ ಶೋಷಿತನಿಗೆ ಹೆಮ್ಮೆಯೆನಿಸುತ್ತದೆ.

ಅಂಬೇಡ್ಕರ್ ಅವರು ಮೆಟ್ರಿಕ್ಯುಲೇಷನ್ ಪರೀಕ್ಷೆ ಪಾಸಾದಾಗ ಹಮ್ಮಿಕೊಂಡ ಸನ್ಮಾನ ಸಮಾರಂಭದಲ್ಲಿ ದಾದಾ ಕೆಳೂಸ್ಕರ ಅವರು ಬುದ್ಧನ ಜೀವನ ಚರಿತ್ರೆಗೆ ಸಂಬಂಧಿಸಿದ ಗ್ರಂಥವನ್ನು ಅವರಿಗೆ ಕಾಣಿಕೆಯಾಗಿ ಕೊಡುತ್ತಾರೆ. ಅಂಥ ಒಂದು ಪುಸ್ತಕ ಅಂಬೇಡ್ಕರ್ ಅವರ ಜೀವನದ ಮೇಲೆ ಅಗಾಧ ಪರಿಣಾಮ ಬೀರುತ್ತದೆ. ಸಾಮಾನ್ಯ ಕುಟುಂಬದಲ್ಲಿ ಹುಟ್ಟಿದ ಭೀಮರಾವ್ ಅಂಬೇಡ್ಕರ್ ಅವರನ್ನು ವಿಶ್ವ ಶ್ರೇಷ್ಠನನ್ನಾಗಿ ಮಾಡಿದ ಉದಾಹರಣೆ ನಮ್ಮ ಕಣ್ಣೆದುರಿಗೇ ಇದೆ. ಅಂಬೇಡ್ಕರ್ ಅವರು ಬಡತನದಲ್ಲಿಯೇ ಓದಿದವರು. ಮಗನ ಓದಿಗಾಗಿ ಪುಸ್ತಕಗಳನ್ನು ಖರೀದಿಸಲು ರಾಮಜಿ ಸಕ್ಪಾಲ್ ಹೆಣ್ಣುಮಕ್ಕಳ ಆಭರಣ, ಒಡವೆಗಳನ್ನು ಒತ್ತೆ ಇಡಲು, ಮಾರಲು ಹಿಂಜರಿಯಲಿಲ್ಲ. ಬಡತನ, ಜಾತಿನಿಂದನೆಯಿಂದ ನೊಂದ ಅಂಬೇಡ್ಕರ್ ಓದುವುದನ್ನು ಸಾಧನ ಮಾಡಿಕೊಂಡರು. ಅವರು ವಿಶ್ವಪ್ರಸಿದ್ಧಿ ಪಡೆಯಲು ಹಣ, ಸಂಪತ್ತು, ಅಂತಸ್ತು, ಜಾತಿ ಕಾರಣವಾಗಲಿಲ್ಲ. ಅವರಲ್ಲಿರುವ ಜ್ಞಾನ ಕಾರಣವಾಗಿತ್ತು. ಅವರೊಬ್ಬ ಶ್ರೇಷ್ಠ ಓದುಗರಾಗಿದ್ದರು. ಛಲವೇ ಅವರ ಶಕ್ತಿ. ತುಂಬ ಸ್ವಾಭಿಮಾನಿ. ಜೀವಿತದ ಅವಧಿಯಲ್ಲಿ ಅವರು ಓದಿದ್ದು, ಜ್ಞಾನ ಪಡೆದಿದ್ದು, ನಮ್ಮ ಹಾಗೆ ಒಂದು ಎರಡು ವಿಷಯಗಳನ್ನಲ್ಲ. ಅರ್ಥಶಾಸ್ತ್ರ, ಇತಿಹಾಸ, ರಾಜ್ಯಶಾಸ್ತ್ರ, ಸಮಾಜಶಾಸ್ತ್ರ ಇಂಗ್ಲಿಷ್, ಫ್ರೆಂಚ್, ಮರಾಠಿ, ಹಿಂದಿ ವಾಣಿಜ್ಯ, ಕಾನೂನು, ತತ್ವಜ್ಞಾನ ಸಾಹಿತ್ಯ, ಸಂಸ್ಕೃತಿ, ಧರ್ಮ.... ಹೀಗೆ ಒಂದೇ ಎರಡೇ! ಅವರು ಮಾತಾಡಲು ನಿಂತರೆ ಗ್ರಂಥಾಲಯಕ್ಕೆ ಬಾಯಿ ಬಂದಂತಾಗುತ್ತಿತ್ತೆಂಬುದು ವಿದ್ವಾಂಸರ ಅಂಬೋಣ.

ಅವರ ಸಮಕಾಲೀನರಾದ ಜವಾಹರಲಾಲ ನೆಹರು, ಸಾವರಕರ್ ಇವರಿಗೆ ಓದುವುದು ಬರೆಯುವುದು ಎಂದರೆ ಪ್ರತಿಭಾ ವಿಲಾಸವೆಂದು ಭಾವಿಸಿದ್ದರು. ಆದರೆ ಅಂಬೇಡ್ಕರ್ ಅವರು ಪ್ರತಿಭಾ ವಿಲಾಸಕ್ಕಾಗಿ, ಆತ್ಮಾನಂದಕ್ಕಾಗಿ ಓದಿದವರಲ್ಲ, ಬರೆದವರಲ್ಲ. ಸಮಾಜದ ಹಿತಕ್ಕಾಗಿ, ಮಲಗಿದ್ದ ತನ್ನ ಶೋಷಿತ ಸಮುದಾಯದ ಬಿಡುಗಡೆಗಾಗಿ ಹಗಲು ರಾತ್ರಿಯೆನ್ನದೆ, ಆರೋಗ್ಯದ ಬಗ್ಗೆ ಲೆಕ್ಕ ಹಾಕದೆ, ಓದಿದ ಬರೆದ ಜಗತ್ತಿನ ಶ್ರೇಷ್ಠ ವ್ಯಕ್ತಿ, ಅಷ್ಟೇ ಅಲ್ಲ ಅಪಾರ ಪುಸ್ತಕ ಪ್ರೇಮಿ ಅಂಬೇಡ್ಕರ್ ಎನ್ನುವುದನ್ನು ನಾವು ಮರೆಯುವ ಹಾಗಿಲ್ಲ. ಶ್ರೇಷ್ಠ ಚಿಂತಕರಾದ ಡಾ॥ ಜಾನ್‌ಸನ್

ಒಂದೆಡೆ 'ಹತ್ತಿರವಿದ್ದ ಎಲ್ಲ ಪುಸ್ತಕಗಳನ್ನು ಯಾರೂ ಓದುವುದಿಲ್ಲ. ಓದಬೇಕಾಗಿಯೂ ಇಲ್ಲ' ಎಂದು ಅಭಿಪ್ರಾಯಪಟ್ಟಿದ್ದಿದೆ. ಈ ತತ್ವಕ್ಕೆ ವಿರುದ್ಧವಾಗಿದ್ದ ಅಂಬೇಡ್ಕರ್ ಅವರ ಹತ್ತಿರವಿದ್ದ ಎಲ್ಲ ಪುಸ್ತಕಗಳನ್ನು ಬಿಡದೆ ಓದುತ್ತಿದ್ದರು. ಖರೀದಿ ಮಾಡಿ ತಂದ ಯಾವುದೇ ಗ್ರಂಥವನ್ನು ಆಮೂಲಾಗ್ರವಾಗಿ ಓದಿ ಕರಗತ ಮಾಡಿಕೊಳ್ಳುತ್ತಿದ್ದರು. ಕೂತಲ್ಲಿಯೇ ತಮ್ಮ ಗ್ರಂಥಾಲಯದ ಕಬಾರ್ಡಿ ನಲ್ಲಿರುವ ಪುಸ್ತಕದ ಬಣ್ಣ, ಕಟ್ಟು ಯಾವ ಸೈಜಿನದು, ಅದು ಯಾವ ಕಬಾರ್ಡಿನಲ್ಲಿದೆ, ಯಾವ ಪುಟದಲ್ಲಿ ಏನಿದೆ ಎಂಬುದನ್ನು ಹೇಳುವ ಜ್ಞಾಪಕ ಶಕ್ತಿ ಅಂಬೇಡ್ಕರ್ ಅವರು ಹೊಂದಿದ್ದರು. ಇನ್ನಷ್ಟು ಹೋಲಿಕೆ ಮಾಡಿ ಹೇಳುವುದಾದರೆ, ಸಿಸಿರೊ 'ಓದಿಗಾಗಿ ಜೀವಕೊಡಲು ಸಿದ್ಧನಾಗಿದ್ದ'. ಗಿಬ್ಬನ್ 'ಪೌರ್ವಾತ್ಯದ ಎಲ್ಲ ವೈಭವವನ್ನು ಕೊಟ್ಟರೂ ನನ್ನ ಗ್ರಂಥ ಸಂಗ್ರಹವನ್ನು ಕೊಡುವುದಿಲ್ಲ' ಎಂದಿದ್ದ. 'ಪುಸ್ತಕಗಳ ಬದಲಿಗೆ ಅರಸೊತ್ತಿಗೆಯನ್ನು ಕೊಟ್ಟರೂ ಅದು ನನಗೆ ಬೇಡ' ಎಂದು ಮೆಕಾಲೆ ಹೇಳಿದ್ದರು. 'ತನ್ನ ಗ್ರಂಥರಾಶಿಯಿಂದ ದೂರವಾಗಬೇಕಾಗಿ ಬಂದಾಗ ವಾಲ್ಟರ್ ಸ್ಕಾಟ್ ಗೋಳೋ ಎಂದು ಅತ್ತು ಬಿಟ್ಟಿದ್ದನಂತೆ' ಗಾಂಧೀಜಿಯವರು 'ಪುಸ್ತಕ ಓದುವ ಹವ್ಯಾಸವುಳ್ಳವರು, ಎಲ್ಲಿ ಹೋದರೂ ಸಂತೋಷವಾಗಿರಬಲ್ಲರು' ಎಂದಿದ್ದಾರೆ.

'ಜಗತ್ತನ್ನು ಬೆಳಗಲು ಸೂರ್ಯ ಬೇಕು ಬದುಕನ್ನು ಬೆಳಗಲು ಪುಸ್ತಕ ಸಾಕು' ಎಂಬುದು ರವೀಂದ್ರನಾಥ ಟಾಗೋರ್ ಅವರ ಅಭಿಪ್ರಾಯ. 'ಅತ್ಯುತ್ತಮ ಪುಸ್ತಕಗಳು ಉತ್ತಮ ಸಂಗಾತಿಗಳು' ಎಂಬುದು ತಾರ್ಕರ್ ಅವರ ಮಾತು. 'ಉತ್ತಮ ಪುಸ್ತಕಗಳು ನಾಡಿನ ಸಂಸ್ಕೃತಿಯ ಪ್ರತೀಕ' ಎಂಬುದು ಜವಾಹರಲಾಲ್ ನೆಹರು ಅವರ ಉಕ್ತಿಯಾಗಿದೆ. ಇವರೆಲ್ಲರ ಮುಂದೆ ಅಂಬೇಡ್ಕರ್ ಅವರ ಪುಸ್ತಕ ಪ್ರೀತಿ ಅಗಾಧವಾದುದು. 'ನಿಮ್ಮ ಬಳಿ ಎರಡು ರೂಪಾಯಿ ಇದ್ದರೆ ಒಂದು ರೂಪಾಯಿಯನ್ನು ಆಹಾರಕ್ಕಾಗಿ ಬಳಸಿ, ಉಳಿದ ಇನ್ನೊಂದು ರೂಪಾಯಿಯನ್ನು ಪುಸ್ತಕಕ್ಕಾಗಿ ಬಳಸಿ, ಆಹಾರವು ನಿಮ್ಮನ್ನು ಜೀವಂತವಾಗಿರುವಂತೆ ಮಾಡುತ್ತದೆ. ಪುಸ್ತಕವು ಹೇಗೆ ಜೀವಿಸಬಹುದೆಂದು ಕಲಿಸುತ್ತದೆ' ಎಂದು ಅಂಬೇಡ್ಕರ್ ಅವರು ಹೇಳಿದ್ದು ಎಷ್ಟು ಅರ್ಥಗರ್ಭಿತ ವಲ್ಲವೇ ? ಪುಸ್ತಕಗಳು ಕೇವಲ ನಿರ್ಜೀವ ವಸ್ತುಗಳಲ್ಲ. ಬದಲಾಗಿ ಪುಸ್ತಕ ಓದಿದ ಪ್ರತಿಯೊಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ಶ್ರೇಷ್ಠಮಟ್ಟಕ್ಕೇರಿಸುತ್ತದೆ ಎನ್ನಲಿಕ್ಕೆ ಅಂಬೇಡ್ಕರ್ ಅವರೇ ಒಂದು ದೊಡ್ಡ ಉದಾಹರಣೆಯಾಗಿದ್ದಾರೆ. ಪುಸ್ತಕಗಳಿಂದ ಪ್ರತಿಭಾ ಸಂಪನ್ನರಾಗಿದ್ದ ಅಂಬೇಡ್ಕರ್ 'ರಾಷ್ಟ್ರಕೃತಿ' ಎಂದು ನಾವು ಗೌರವಿಸುವ ಸಂವಿಧಾನವನ್ನು ನಮಗೆ ನೀಡಿಲ್ಲವೆ !

ಒಂದು ಸಂದರ್ಭದಲ್ಲಿ ವಕೀಲ ವೃತ್ತಿಯಿಂದ ವ್ಯಾಜ್ಯವೊಂದರಲ್ಲಿ ವಾದಿಸಿದ್ದರಿಂದ ಐದು ನೂರು ರೂಪಾಯಿ ಗಳಿಕೆ ಬಂದಿರುತ್ತದೆ. ಅದರಿಂದ ತಕ್ಷಣ ಪುಸ್ತಕ ಖರೀದಿಸುತ್ತಾರೆ. ಮನೆಗೆ ಬಂದ ತಕ್ಷಣ ಓದಲು ಕೂತಿರುತ್ತಾರೆ. ಪತ್ನಿ ರಮಾಬಾಯಿ ಅಡುಗೆ ಮಾಡಿ ಊಟ ಬಡಿಸಲು ಮುಂದಾಗಿ ಮೇಲಿಂದ ಮೇಲೆ ಊಟಕ್ಕೆ ಬರಲು ಕರೆದಾಗ, 'ರಮಾ ನಾನು ಐದು ನೂರು ರೂಪಾಯಿಕೊಟ್ಟು ಪುಸ್ತಕ ತಂದು ಓದುತ್ತಿದ್ದೇನೆ ! ನಿನಗೆ ಊಟವೇ ಹೆಚ್ಚಾಯಿತೆ ?' ಎಂದು ಗದರಿದರಂತೆ. ಒಮ್ಮೆ ಮದನ್ ಮೋಹನ ಮಾಳವೀಯ ಅವರು ಅಂಬೇಡ್ಕರ್ ಅವರ ಪುಸ್ತಕ ಭಂಡಾರವನ್ನು ಕಂಡು 'ಅಂಬೇಡ್ಕರ್ ಅವರೇ ನಿಮ್ಮ ಈ ಪುಸ್ತಕಗಳನ್ನು ನಾನು ಎರಡು ಲಕ್ಷ ರೂಪಾಯಿಗಳಿಗೆ ಖರೀದಿಸುತ್ತೇನೆ. ಕೊಟ್ಟು ಬಿಡಿ' ಎಂದಿದ್ದರಂತೆ. ಅದಕ್ಕುತ್ತರ ವಾಗಿ ಅಂಬೇಡ್ಕರ್ ಅವರು 'ಈ ಪುಸ್ತಕಗಳು ಇಲ್ಲವಾದರೆ ನನ್ನ ಜೀವವೇ ಹೋದಂತೆ' ಎಂದು ಉತ್ತರಿಸಿದರಂತೆ.

ಪುಸ್ತಕವೆಂದರೆ ಅಂಬೇಡ್ಕರ್ ಅವರಿಗೆ ಪಂಚಪ್ರಾಣ, ಅದೊಂದು ಸಂಪತ್ತು. ಐವತ್ತು ಸಾವಿರಕ್ಕೂ ಹೆಚ್ಚು ಪುಸ್ತಕಗಳ ಸ್ವತಂತ್ರ ಗ್ರಂಥಾಲಯವನ್ನು ಹೊಂದಿದ್ದ ಜಗತ್ತಿನ ಏಕೈಕ ವ್ಯಕ್ತಿ. 'ದುರದೃಷ್ಟದಿಂದ ಸಾಲಕ್ಕಾಗಿ ಕೋರ್ಟಿನ ಬೇಲೀಫ್ ಬಂದು ನನ್ನ ಪುಸ್ತಕಗಳಿಗೆ ಕೈ ಹಾಕಿದರೆ ಆತನನ್ನು ಇದ್ದಲ್ಲಿಯೇ ಕೊಂದು ಬಿಡುತ್ತೇನೆ' ಎಂದು ಹೇಳಿದ್ದರಂತೆ. 'ಸತ್ತುಹೋದ ಮೇಲೆ ಮತ್ತೆ ಬದುಕಬೇಕು ಎಂದರೆ ಒಂದು ಕೆಲಸ ಮಾಡಿ ಹೋಗಿ. ಜನ ಓದುವ ಹಾಗೆ ಏನಾದರೂ ಬರೆದು ಬಿಟ್ಟು ಹೋಗಿ. ಇಲ್ಲವಾದರೆ ಜನ ನಿಮ್ಮ ಬಗ್ಗೆ ಬರೆಯುವ ಹಾಗೆ ಏನಾದರೂ ಕಾರ್ಯ ಮಾಡಿ ಹೋಗಿ' ಎಂದು ಹೇಳಿದವರು ಅಂಬೇಡ್ಕರ್. ಜಗತ್ತಿನಲ್ಲಿಯೇ ಹೆಚ್ಚು ಪುಸ್ತಕ ಓದಿದವರು ಅಂಬೇಡ್ಕರ್ ಎಂದು ಕೇಂಬ್ರಿಜ್‌ನ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯ ದಾಖಲಿಸಿದೆ. ಅಂತಹ ಒಬ್ಬ ಶ್ರೇಷ್ಠ ಓದುಗ, ಜ್ಞಾನಿ, ಅಂಬೇಡ್ಕರ್ ಅವರನ್ನು ಇವತ್ತು ಜಗತ್ತು ಗೌರವಿಸುತ್ತಿದೆ.

**ಡಾ॥ ಎಚ್. ಟಿ. ಪೋತೆ**
ಪ್ರಾಧ್ಯಾಪಕರು ಹಾಗೂ ಅಧ್ಯಕ್ಷರು
ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ
ಕಲಬುರಗಿ

## ನೆರವು

ಬಿದಿರನ್ನು
ಕಡಿಯುವಾಗ
ಅರಿವಾಗುವುದಿಲ್ಲ
ಅದರ ಅಳಲು;
ಕ್ರೂರ ಸಾವಲ್ಲಿ
ಹುಟ್ಟುವ ಸಂಗೀತಕ್ಕೆ
ನೆರವಾಗುವುದು
ಕೊಳಲು.

**ಡಾ॥ ವಿ. ಪುಗಲೇಂದಿ**
ಸಿರುಗುಪ್ಪ

# ಗುಡಿಸಲೊಳಗಿನ ಚಳಿ ಗಜಲ್

ಗುಡಿಸಲೊಳಗಿನ ಚಳಿ ಬೆಚ್ಚಗಿನ ಅರಮನೆಗೇನು ಗೊತ್ತು ಹೇಳು ಸಖಿ
ಹಸಿದವನ ಆಕ್ರಂದನ ಹೊಟ್ಟೆ ಉಬ್ಬಿದವನಿಗೇನು ಗೊತ್ತು ಹೇಳು ಸಖಿ

ಮನುಷ್ಯ ಜನ್ಮದ ಶ್ರೇಷ್ಠತೆ ಹಗಲು ರಾತ್ರಿ ನಿಶೆಯಲ್ಲಿ ಬಿದ್ದವನಿಗೇನು ಗೊತ್ತು ಹೇಳು ಸಖಿ
ಜಾತಿಯೇ ಶ್ರೇಷ್ಠ ಅಂದುಕೊಂಡವನಿಗೆ ಅಸ್ಪೃಶ್ಯತೆಯ ನೋವೇನು ಗೊತ್ತು ಹೇಳು ಸಖಿ

ದಯವೇ ಧರ್ಮದ ಮೂಲ ಎಂಬುವುದು ಸ್ವಾರ್ಥಿಯಾದವನಿಗೇನು ಗೊತ್ತು ಹೇಳು ಸಖಿ
ಜ್ಞಾನದ ಶ್ರೇಷ್ಠತೆ ಬದುಕನರಿಯದ ಅಜ್ಞಾನಿಗೇನು ಗೊತ್ತು ಹೇಳು ಸಖಿ

ಶೋಷಕರಿಗೆ ಶೋಷಕನ ನೋವಿನ ಸಂಕಟದ ಚೀತ್ಕಾರವೇನು ಗೊತ್ತು ಹೇಳು ಸಖಿ
ಕುಳಿತು ತಿನ್ನುವವನಿಗೆ ಬೆವರಿನ ಹನಿಗಳ ತ್ರಾಸೇನು ಗೊತ್ತು ಹೇಳು ಸಖಿ

ನಡೆನುಡಿಯ ಪವಿತ್ರತೆ ನಡೆಯೊಂದು ಪರಿ ನುಡಿಯೊಂದು ಪರಿ ಇದ್ದವರಿಗೇನು ಗೊತ್ತು ಹೇಳು ಸಖಿ
ಮಮತೆ ಕರುಣೆಯೇ ಇಲ್ಲದವನಿಗೆ ತಾಯಿ ಕರುಳಿನ ಕೂಗೇನು ಗೊತ್ತು ಹೇಳು ಸಖಿ

ಅಂತರಂಗ ಬಹಿರಂಗದ ಶುದ್ಧತೆ ಅನೈತಿಕ ಆಚಾರ ವಿಚಾರಿಗಳಿಗೇನು ಗೊತ್ತು ಹೇಳು ಸಖಿ
ಅಪರಿಶುದ್ಧ ಮನಸ್ಸಿಗೆ ಪರಿಶುದ್ಧತೆಯ ಹೊಳಪೇನು ಗೊತ್ತು ಹೇಳು ಸಖಿ

**ಡಾ॥ ಜಯದೇವಿ ಗಾಯಕವಾಡ**
ನಂ. ೫೮/೭೩, ಹೌಸಿಂಗ್ ಸೊಸೈಟಿ, ಕಾಲೋನಿ ಕಲ್ಲೂರ ರಸ್ತೆ
ಹಮನಾಬಾದ – ೫೮೫ ೩೩೦, ಬೀದರ್

# ವಿಜಯಪುರ ಜಿಲ್ಲೆಯ ಹಣ್ಣು ಮತ್ತು ತರಕಾರಿ ಮಾರಾಟ ಮಾಡುತ್ತಿರುವ ಮುಸ್ಲಿಂ ಮಹಿಳೆಯರ ಸ್ಥಿತಿಗತಿ



ಪ್ರಧಾನ ಮಂತ್ರಿ ಮನಮೋಹನ ಸಿಂಗ್ ಅವರ ಅಧಿಕಾರ ಅವಧಿಯಲ್ಲಿ, ದೇಶದ ಮುಸ್ಲಿಂ ಸಮುದಾಯದ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಪರಿಸ್ಥಿತಿಯನ್ನು ತಿಳಿಯಲು ಜಸ್ಟೀಸ್ ರಾಜಿಂದರ್ ಸಾಚಾರ ಸಮಿತಿಯನ್ನು ರಚನೆಮಾಡಿದರು. ಈ ಸಮಿತಿಯು ೨೦೦೬ರಲ್ಲಿ ಮುಸ್ಲಿಂ ಜನಸಂಖ್ಯೆ ಅಧಿಕವಿರುವ ೧೩ ರಾಜ್ಯಗಳಿಗೆ ಭೇಟಿ ನೀಡಿ, ಮಾಹಿತಿಯನ್ನು ಸಂಗ್ರಹಿಸಿ, ವರದಿಯನ್ನು ತಯಾರಿಸಿತು. ಈ ವರದಿಯು ಒಟ್ಟು ೪೦೮ ಪುಟಗಳನ್ನು, ೧೨ ಅಧ್ಯಾಯಗಳನ್ನು ಒಳಗೊಂಡಿದೆ. ಈ ವರದಿಯ ಪ್ರಕಾರ, ಸಂವಿಧಾನ ಪರಿಚ್ಛೇದ ೧೫ (೪)ರಂತೆ, ಶೈಕ್ಷಣಿಕ ಕ್ಷೇತ್ರದಲ್ಲಿ ಮತ್ತು ೧೬ (೪)ರಂತೆ ಉದ್ಯೋಗಾವಕಾಶವಂಚಿತ ಸಮುದಾಯಗಳಿಗೆ ವಿಶೇಷ ಅವಕಾಶಗಳನ್ನು ಕೊಡಬೇಕೆಂದು ತಿಳಿಸುತ್ತದೆ. ಅದರಂತೆ ಮುಸ್ಲಿಂ ಸಮುದಾಯದ ಏಳಿಗೆಗಾಗಿ ಶಿಫಾರಸ್ಸು ಮಾಡಿದೆ. ಶೈಕ್ಷಣಿಕ ಕ್ಷೇತ್ರದಲ್ಲಿ ಮುಸ್ಲಿಂ ಪುರುಷರಿಗಿಂತ ಮಹಿಳೆಯರ ಸಾಕ್ಷರತೆ ಪ್ರಮಾಣ ತುಂಬ ಕಡಿಮೆ ಇದೆ. ಹಾಗೂ ೬-೧೪ ವಯೋಮಿತಿಯಲ್ಲಿನ ಮುಸ್ಲಿಂ ಮಕ್ಕಳಲ್ಲಿ ಶೇ. ೨೫ರಷ್ಟು ಮಕ್ಕಳು ಶಾಲೆಗೆ ದಾಖಲೆಯೇ ಆಗಿಲ್ಲ. ೭ನೇ ತರಗತಿವರೆಗಿನ ಹಂತ ತಲುಪುವದರೊಳಗೆ ಶಾಲೆ ಬಿಡುವ ಪ್ರಮಾಣ ಹೆಚ್ಚಾಗಿದೆ. ಪದವೀಧರರ ಸಂಖ್ಯೆ ಶೇ. ೩.೪ರಷ್ಟು ಮತ್ತು ಸ್ನಾತಕೋತ್ತರ ಪದವೀಧರರು ಶೇ. ೨ರಷ್ಟು ಇದೆ. ಮದರಸಾಗಳಿಗೆ ಹೋಗುತ್ತಿರುವ ಮಕ್ಕಳ ಪ್ರಮಾಣ ಶೇ. ೩ರಷ್ಟು ಇದೆ. ಹಿಂದೂ ಧರ್ಮೀಯ ಇತರೆ ಹಿಂದುಳಿದ ಜಾತಿಗಳ ಸ್ಥಿತಿಗಿಂತ ಮುಸ್ಲಿಂ ಧರ್ಮೀಯ ಇತರ ಜಾತಿಗಳ ಸ್ಥಿತಿ ಶೋಚನೀಯವಾಗಿದೆ. ಸರ್ಕಾರಿ ಇಲಾಖೆಗಳಲ್ಲಿ ಶೇ. ೧೧ರಷ್ಟು ಹುದ್ದೆಗಳು ಹಿಂದೂ ಧರ್ಮದ ಇತರೆ ಹಿಂದುಳಿದ ಜಾತಿಗಳಿಗೆ ಸಿಕ್ಕಿದ್ದರೆ ಶೇ. ೪ರಷ್ಟು ಹುದ್ದೆಗಳು ಒಟ್ಟು ಮುಸ್ಲಿಂರಿಗೆ ಸಿಕ್ಕಿದ್ದು, ಈ ಪೈಕಿ ಶೇ. ೧ರಷ್ಟು ಹುದ್ದೆಗಳು ಮುಸ್ಲಿಂ ಧರ್ಮೀಯ ಇತರ ಹಿಂದುಳಿದ ಜಾತಿಯವರಿಗೆ ಸಿಕ್ಕಿವೆ ಎಂದು ಎ. ಕಾಸಿಂಸಾಬ ಅವರು ತಮ್ಮ ಲೇಖನದಲ್ಲಿ ಬರೆದಿದ್ದಾರೆ (ಸಾಚಾರ ವರದಿ ಸಂಕ್ಷಿಪ್ತ ಪರಿಚಯ ಪು. ಸಂ. ೧-೩). ಇವರಿಗೆ ಯಾವುದೇ ಸೌಲಭ್ಯಗಳಿಲ್ಲದೇ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಈ ಸಮುದಾಯದ ಜನರು ಬಡತನ ಎದುರಿಸುತ್ತಿದ್ದಾರೆಂದು ತಿಳಿಸುತ್ತದೆ. ಒಟ್ಟಾರೆ ಮುಸ್ಲಿಂ ಸಮುದಾಯದ ಸ್ಥಿತಿಗತಿಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿ ಮುಸ್ಲಿಂ ಸಮುದಾಯದ ಜನಸಂಖ್ಯಾ ಪ್ರಮಾಣ ಮತ್ತು ಲಭ್ಯವಿರುವ ಅವಕಾಶಗಳು ಹಾಗೂ ಸಂಪನ್ಮೂಲಗಳ ಹಂಚಿಕೆಯ ಕುರಿತಂತೆ ಮಹತ್ವದ ಮಾಹಿತಿಯನ್ನು ಈ ವರದಿಯು ನೀಡುತ್ತದೆ. ಆದರೆ ಸಾಚಾರ ವರದಿಯಲ್ಲಿ ಸಮುದಾಯದ ಭಾಗವಾಗಿರುವ ಮಹಿಳೆಯರ ಸ್ಥಿತಿಗತಿಯ ಕುರಿತಾಗಿ ನಿಖರವಾಗಿ ಗುರುತಿಸಿಲ್ಲ.





**ಹಮೀದಾಬಾನೂ ಅ. ಅಥಣಿ**

**ಬೊಕ್ಕಸ ತುಂಬಬೇಕೆಂಬ ಕಾರಣಕ್ಕೆ ಸರ್ಕಾರವು ಪಾನ ನಿಷೇಧ ಕಾಯ್ದೆಯನ್ನು ಜಾರಿಗೊಳಿಸದಿರುವುದು ಈ ಮಹಿಳೆಯರ ದುಸ್ಥಿತಿಗೆ ಕಾರಣವಾಗಿದೆ ಎಂದರೆ ತಪ್ಪಾಗದು. ಗಂಡಂದಿರ ಕುಡಿತದ ಚಟವು ಈ ಮಹಿಳೆಯರ ಕುಟುಂಬಗಳ ನೆಮ್ಮದಿಯನ್ನು ನಾಶ ಮಾಡಿದೆ. ಕುಡಿದು ಬಂದು ಜಗಳವಾಡುವುದು, ಹೊಡೆಯುವುದು ಇವರ ಬದುಕಲ್ಲಿ ಮಾಮೂಲಿ. ತಮ್ಮ ಮಕ್ಕಳಿಗಾಗಿ ಎಲ್ಲವನ್ನೂ ಸಹಿಸಿಕೊಳ್ಳುತ್ತಾರೆ. ಮಕ್ಕಳೂ ಕುಡಿತದ ಚಟಕ್ಕೆ ಬೀಳುವುದಂತೂ ಇವರ ಮಾನಸಿಕ ನೆಮ್ಮದಿಯನ್ನೇ ಹಾಳುಮಾಡಿದೆ.**

ಈ ಹಿನ್ನೆಲೆಯಲ್ಲಿ ಬೀದಿ ಬದಿಯಲ್ಲಿ ವ್ಯಾಪಾರ ಮಾಡುವ ವಿಜಯಪುರ ನಗರದ ಮುಸ್ಲಿಂ ಮಹಿಳೆಯರನ್ನು ಕುರಿತು ಪ್ರಸ್ತುತ ಲೇಖನದಲ್ಲಿ ಚರ್ಚಿಸಲಾಗಿದೆ.

ಲಿಂಗಾಧಾರಿತ ಶ್ರಮ ವಿಭಜನೆಯು ಮನೆಯನ್ನು ಮಹಿಳೆಯರ ಕಾರ್ಯಕ್ಷೇತ್ರ ಹಾಗೂ ಹೊರಗಿನ ದುಡಿಮೆಯ ವಲಯವನ್ನು ಪುರುಷನ ಕಾರ್ಯಕ್ಷೇತ್ರವನ್ನಾಗಿ ವಿಭಾಗಿಸಿದೆ. ಹಾಗಾಗಿ ಆರ್ಥಿಕ ಮೌಲ್ಯ ದೊರೆಯುವ ದುಡಿಮೆಯ ವಲಯವು ಸಂಪೂರ್ಣವಾಗಿ ಪುರುಷನಿಗೆ ಸೇರಿದ್ದು ಎಂಬ ಅಲಿಖಿತ ನಿಯಮ ಇದೆ. ಈ ಪರಿಕಲ್ಪನೆಯ ಪ್ರಕಾರ ಉತ್ಪಾದನೆ ಎಂದರೆ ಪುರುಷರು ಮಾಡುವ, ಹಣದ ರೂಪದಲ್ಲಿ ಪ್ರತಿಫಲ ದೊರೆಯುವಂಥದ್ದು ಮಾತ್ರ ದುಡಿಮೆ. ಹೀಗಾಗಿ ಮಹಿಳೆಯನ್ನು ಗಂಡಸು ದುಡಿದು ತರುವುದನ್ನು ಬೇಯಿಸುವ ಕೆಲಸಕ್ಕೆ ಸೀಮಿತವೆಂದು ಪರಿಗಣಿಸಲಾಯಿತು ಹಾಗೂ ಕುಟುಂಬಕ್ಕಾಗಿ ಅವಳು ಮಾಡುವ ದುಡಿಮೆಯನ್ನು ನಗಣ್ಯ ಮಾಡಲಾಯಿತು. ಈ ಮೂಲಕ ಬದುಕಿನ ಎಲ್ಲ ಹಂತಗಳಲ್ಲಿ ಮಹಿಳೆಯರು ಪುರುಷಾವಲಂಬಿಯಾಗಿ ಬದುಕುವಂತೆ ಮಾಡಲಾಯಿತು. ವಿಧವೆಯೋ, ಪರಿತ್ಯಕ್ತಳೋ, ವಿಚ್ಛೇದಿತಳೋ ಆದಾಗ ಕುಟುಂಬವನ್ನು ನಿರ್ವಹಿಸಲೇಬೇಕಾದ ಅನಿವಾರ್ಯ ಸಂದರ್ಭಗಳಲ್ಲಿ ಸಂಪಾದನೆಯ ಮಾರ್ಗವಾಗಿರುವುದು ಕಡಿಮೆ ಬಂಡವಾಳದ, ಹೆಚ್ಚಿನ ಕೌಶಲ್ಯವಾಗಲಿ, ಅಥವಾ ಶಿಕ್ಷಣವನ್ನಾಗಲಿ ಬೇಡದ ಅಸಂಘಟಿತ ವಲಯ. ಸ್ವಲ್ಪ ಮಟ್ಟಿನ ವ್ಯವಹಾರಜ್ಞಾನ, ದಿನನಿತ್ಯದ ವ್ಯವಹಾರಗಳನ್ನು ನಿರ್ವಹಿಸಿಕೊಂಡು ಹೋಗುವ ಸಾಮರ್ಥ್ಯ ಇದ್ದರೆ ಸಾಕು.

ಶಿಕ್ಷಣವನ್ನು ನಿರಾಕರಿಸುವುದರಿಂದ ಅಥವಾ ಮಕ್ಕಳಿಗೆ ಪಾಠ ಹೇಳಿಕೊಡುವಷ್ಟು ಮಟ್ಟದ ಶಿಕ್ಷಣ ಸಾಕು ಎಂಬ ಮನೋಭಾವನೆಯಿಂದಾಗಿ ಉತ್ತಮ ಉದ್ಯೋಗಕ್ಕೆ ಬೇಕಾದ ಕೌಶಲ್ಯದಿಂದ ಬಹುಪಾಲು ಮಹಿಳೆಯರು ವಿಶೇಷವಾಗಿ ಕೆಳವರ್ಗದ ಮಹಿಳೆಯರು ವಂಚಿತರಾಗಿದ್ದಾರೆ. ಹಾಗಾಗಿ ಮಹಿಳೆಯರು ಆರ್ಥಿಕ ಭದ್ರತೆಯಿಲ್ಲದ ಅಸಂಘಟಿತ ವಲಯಕ್ಕೆ ಬರುತ್ತಾರೆ. ಅಲ್ಲಿ ಮೂಲಭೂತ ಅಗತ್ಯಗಳಿಗಾಗಿ ಹೆಚ್ಚು ದುಡಿಯುತ್ತಾರೆ. ಹಲವಾರು ಮಹಿಳೆಯರು ಅಸಂಘಟಿತ ವಲಯದಲ್ಲಿ ಒಂದಾದ ಬೀದಿ ಬದಿ ವ್ಯಾಪಾರದಲ್ಲಿ ತೊಡಗಿಸಿಕೊಂಡಿದ್ದಾರೆ.

ನಗರದ ವಿವಿಧ ಬಡಾವಣೆಗಳ ಬೀದಿ ಬದಿಯಲ್ಲಿ, ಶಾಲೆ, ಕಛೇರಿಗಳ ಸಮೀಪದ ಬೀದಿ ಬದಿಯಲ್ಲಿ, ಜನದಟ್ಟಣೆ ಇರುವ ಬೀದಿಗಳ ಬದಿಯಲ್ಲಿ, ಸಂತೆಗಳಲ್ಲಿ ದಿನನಿತ್ಯ ಬಳಕೆಗೆ ಬೇಕಾಗುವ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ಬೀದಿ ಬದಿ ವ್ಯಾಪಾರಿಗಳಿಂದ ದುಡಿಯುವ ಮಹಿಳೆಯರಿಗೆ ಅನುಕೂಲವಾಗಿದೆ. ಪ್ರಾಥಮಿಕ ಶಾಲೆಯ ಶಿಕ್ಷಕಿಯಾಗಿರುವ ಸ್ನೇಹಿತರೊಬ್ಬರು "ಪ್ರತಿನಿತ್ಯ ಹಾಲು, ಹಣ್ಣು, ತರಕಾರಿ ಮತ್ತು ಇತರೆ ದಿನಬಳಕೆ ವಸ್ತುಗಳನ್ನು ತರಲು ದೂರದ ಪೇಟೆಗೆ ಹೋಗಿಬರಲು ತುಂಬ ಸಮಯ ಹಿಡಿಯುತ್ತಿತ್ತು, ಈಗ ನಮ್ಮ ಬಡಾವಣೆಯ ಪಕ್ಕದಲ್ಲಿಯೇ ಬೀದಿ ಬದಿ ವ್ಯಾಪಾರಸ್ಥರು ಕೂಡುತ್ತಿರುವುದರಿಂದ ಬೇಕಾದ ವಸ್ತುಗಳು ಸಮೀಪದಲ್ಲಿಯೇ ದೊರೆಯುತ್ತಿವೆ, ಇದರಿಂದಾಗಿ ಸಮಯ ಉಳಿಯುತ್ತಿದೆ ಮತ್ತು ತಾಜಾ ತರಕಾರಿಗಳು ಸಿಗುವುದರಿಂದ ಆರೋಗ್ಯಕ್ಕೆ ಅನುಕೂಲವಾಗಿದೆ. ಹೊಸ ಬಡಾವಣೆಗಳ ಬೀದಿಗಳಲ್ಲಿ ಯಾರೂ ಸುಳಿಯುತ್ತಿರಲಿಲ್ಲ. ಮಹಿಳೆಯರು ಮತ್ತು ಮಕ್ಕಳು ಒಂಟಿಯಾಗಿ ಹೋಗಲು ಭಯವಾಗುತ್ತಿತ್ತು. ಬೀದಿ ಬದಿ ವ್ಯಾಪಾರಸ್ಥರು ತರಕಾರಿ, ಹಣ್ಣುಗಳನ್ನು ಮಾರಾಟ ಮಾಡಲು ಆರಂಭಿಸಿದಾಗಿನಿಂದ ಜನಸಂಚಾರ ಹೆಚ್ಚಿ ಭೀತಿಯಿಲ್ಲದೆ ಮಕ್ಕಳನ್ನು ಹೊರಗೆ ಕಳಿಸುವಂತಾಗಿದೆ" ಎಂದು ಹೇಳಿದ ಮಾತುಗಳು ಬೀದಿ ಬದಿ ವ್ಯಾಪಾರ ಮಾಡುವ ಮಹಿಳೆಯರು ಹೊಸ ಬಡಾವಣೆಗಳಿಗೆ ವರದಾನವಾಗಿದ್ದಾರೆ ಎನಿಸಿತು. ಇಂತಹ ಅನುಕೂಲವನ್ನು ಮರೆತು ಕೆಲವು ಕಡೆ ಬೀದಿ ಬದಿ ವ್ಯಾಪಾರದಿಂದ ವಾಹನಗಳ ಓಡಾಟಕ್ಕೆ ತಡೆವುಂಟಾಗುತ್ತದೆಂದು ಅಭಿವೃದ್ಧಿ ಪ್ರಾಧಿಕಾರಕ್ಕೆ ದೂರು ನೀಡಿ ಎತ್ತಂಗಡಿ ಮಾಡಿರುವ ಪ್ರಸಂಗಗಳಿವೆ.

**ನಿತ್ಯದ ದಿನಚರಿ**

ಬೆಳಗಿನ ಜಾವ ೫ ಗಂಟೆಗೆ ಎದ್ದು ನಮಾಜ ಮಾಡಿ ಅಡಿಗೆ ಕೆಲಸವನ್ನು ಮುಗಿಸಿಕೊಂಡು ೬:೩೦ರಿಂದ ೭:೩೦ ಗಂಟೆಗೆ ತರಕಾರಿ ಕೊಳ್ಳಲು ಎ.ಪಿ.ಎಮ್.ಸಿ.ಗೆ ಹೋಗಬೇಕು. ತಡವಾದರೆ ಹಣ್ಣು ಮತ್ತು ತರಕಾರಿಗಳು ಸಿಗುವುದಿಲ್ಲ. ಆದ್ದರಿಂದ ತಡಮಾಡದೇ ತಲುಪುತ್ತಾರೆ. ಈ ಮಹಿಳೆಯರು ಸಾವಿರ ರೂಪಾಯಿಂದ ಮೂರು ಸಾವಿರ ರೂಪಾಯಿಗಳಷ್ಟು ಹಣವನ್ನು ಶೇ. ೫ರ ಬಡ್ಡಿದರದಂತೆ ಪಡೆದು ರೈತರಿಂದ ಹಣ್ಣು ತರಕಾರಿಗಳನ್ನು ಕೊಳ್ಳಬೇಕಾಗುತ್ತದೆ ಎಂದು ಮಹಿಳೆಯರು ಹೆಚ್ಚಾಗಿ ಎ.ಪಿ.ಎಮ್.ಸಿ. ದಲ್ಲಾಳಿಗಳಿಂದ ಒಂದು ಸಾವಿರ ರೂಪಾಯಿಯಿಂದ ಮೂರು ಸಾವಿರ ರೂಪಾಯಿಗಳಷ್ಟು ಹಣ್ಣು ಮತ್ತು ತರಕಾರಿಗಳನ್ನು ಪಡೆಯುತ್ತಾರೆ. ಇವರು ತೆಗೆದುಕೊಂಡು ಹೋದ ಸರಕುಗಳನ್ನು ನಗರದಲ್ಲಿರುವ ಶಾಸ್ತ್ರೀ ಮಾರ್ಕೆಟ್, ನೆಹರು ಮಾರ್ಕೆಟ್, ಬಾರಾ ಕಮಾನ, ಜಲನಗರ, ಗೋಲಗುಂಬಜ, ಉಪರಿ ಬುರುಜ, ಗೋದಾವರಿ ಮಾರುಕಟ್ಟೆಗಳಲ್ಲಿ ಕುಳಿತು ಮಾರಾಟ ಮಾಡಿ ಸರಿಯಾಗಿ ಲೆಕ್ಕವನ್ನು ಕೊಡುತ್ತಾರೆ. ಆದ್ದರಿಂದ ಹೋಲ್‌ಸೇಲ್ ವ್ಯಾಪಾರ ಮಾಡುತ್ತಿರುವ ಬಾಗವಾನ ಸಮುದಾಯದ ದಲ್ಲಾಳಿಗಳು ವ್ಯಾಪಾರಕ್ಕಾಗಿ ಬಂದಿರುವ ಮಹಿಳೆಯರ ಅನುಕೂಲಕ್ಕಾಗಿ ವಸ್ತುಗಳನ್ನು ನೇರವಾಗಿ ವ್ಯಾಪಾರ ಮಾಡುವ ಮಾರುಕಟ್ಟೆಗೆ ತಲುಪಿಸಲು ಕಡಿಮೆ ಬೆಲೆಯಲ್ಲಿ ವಾಹನಗಳ ಸೌಲಭ್ಯ ಒದಗಿಸಿಕೊಡುತ್ತಾರೆ.

ಖುಷಿಯ
ಬಿತ್ತಿದರೆ
ಬಿತ್ತದಷ್ಟು ಉತ್ಸಾಹ;
ಹುಳ್ಳಷ್ಟು
ಹುಳ್ಳುವುದು
ಬದುಕಿನಲಿ ಮೋಹ!

ಮಾರಾಟದ ಸ್ಥಳಕ್ಕೆ ಬಂದು ಕೂತ ಗಳಿಗೆಯಿಂದಲೂ ಸ್ವಲ್ಪವೂ ಸಮಯ ವ್ಯರ್ಥಮಾಡದೇ ವ್ಯಾಪಾರದಲ್ಲಿ ತೊಡಗುತ್ತಾರೆ. ಜನರನ್ನು ಕೂಗಿ ಕರೆಯುತ್ತ, ತಮ್ಮ ಮಾರಾಟದ ವಸ್ತುಗಳ ವಿಶೇಷವನ್ನು ಹೇಳುತ್ತಾ ಮಾರಾಟ ಮಾಡುತ್ತಾರೆ. ಮಹಿಳೆಯರು ತಮ್ಮದೇ ತಂತ್ರಗಳನ್ನು ಬಳಸಿ ಪುರುಷರ ಜೋರು ಧ್ವನಿಯ ಎದುರು ತಮ್ಮ ವಸ್ತುಗಳತ್ತ ಜನರನ್ನು ಸೆಳೆಯುವಂತೆ "ತಾಜಾ ತರಕಾರಿ ನೋಡಿ ಕೇವಲ ಹತ್ತು ರೂಪಾಯಿಗೆ ಮೂರು" ಎಂದು ಕೂಗುತ್ತಾರೆ. ಕ್ಷೇತ್ರ ಸಮೀಕ್ಷೆಯ ಸಂದರ್ಭದಲ್ಲಿ ವ್ಯಾಪಾರ ಮಾಡುವ ಮಹಿಳೆಯರು "ಜನ ಹೆಚ್ಚಿದ್ದರೆ ಒಂದೇ ತಾಸಿನಲ್ಲಿ ಹೆಚ್ಚು ವಸ್ತುಗಳನ್ನು ಮಾರಾಟ ಮಾಡಬಹುದು ಜನರು ಬರದಿದ್ದರೆ ಸಂಜೆಯವರೆಗೂ ಕುಳಿತು ಮಾರುತ್ತೇವೆ" ಎಂದು ಹೇಳಿದರು. ಈ ಮಹಿಳೆಯರು ವ್ಯಾಪಾರದಲ್ಲಿ ಪುರುಷರೇ ಪರಿಣತರೆಂಬ ಭ್ರಮೆಯನ್ನು ಅಲ್ಲಗಳೆದಿದ್ದಾರೆ. ಶ್ರಮದಾಯಕ ದುಡಿಮೆ ಮಾಡಿ ಸಿಗುವ ಕಡಿಮೆ ಸಂಪಾದನೆಯಲ್ಲಿ ಕುಟುಂಬವನ್ನು ಸಲಹುತ್ತಾರೆ. ೬೦–೭೦ ವರ್ಷ ವಯಸ್ಸಾದರೂ ರಸ್ತೆ ಬದಿಯಲ್ಲಿ ಕುಳಿತು ವ್ಯಾಪಾರ ಮಾಡಿ ಮಕ್ಕಳು, ಮೊಮ್ಮಕ್ಕಳನ್ನು ಸಾಕುತ್ತಿದ್ದಾರೆ.

ಬೊಕ್ಕಸ ತುಂಬಬೇಕೆಂಬ ಕಾರಣಕ್ಕೆ ಸರ್ಕಾರವು ಪಾನ ನಿಷೇಧ ಕಾಯ್ದೆಯನ್ನು ಜಾರಿಗೊಳಿಸದಿರುವುದು ಈ ಮಹಿಳೆಯರ ದುಸ್ಥಿತಿಗೆ ಕಾರಣವಾಗಿದೆ ಎಂದರೆ ತಪ್ಪಾಗದು. ಗಂಡಂದಿರ ಕುಡಿತದ ಚಟವು ಈ ಮಹಿಳೆಯರ ಕುಟುಂಬಗಳ ನೆಮ್ಮದಿಯನ್ನು ನಾಶ ಮಾಡಿದೆ. ಕುಡಿದು ಬಂದು ಜಗಳವಾಡುವುದು, ಹೊಡೆಯುವುದು ಇವರ ಬದುಕಲ್ಲಿ ಮಾಮೂಲಿ. ತಮ್ಮ ಮಕ್ಕಳಿಗಾಗಿ ಎಲ್ಲವನ್ನೂ ಸಹಿಸಿಕೊಳ್ಳುತ್ತಾರೆ. ಮಕ್ಕಳೂ ಕುಡಿತದ ಚಟಕ್ಕೆ ಬೀಳುವುದಂತೂ ಇವರ ಮಾನಸಿಕ ನೆಮ್ಮದಿಯನ್ನೇ ಹಾಳುಮಾಡಿದೆ. ಬೆಳಗಿನಿಂದ ರಾತ್ರಿಯವರೆಗೆ ದುಡಿದರೂ ನೆಮ್ಮದಿಯಿಂದ ಊಟ ಮಾಡುವುದೂ ಇವರಿಗೆ ಸಾಧ್ಯವಾಗುವುದಿಲ್ಲ.

ಸಂಘಟಿತ ವಲಯದಲ್ಲಿ ಕೆಲಸ ಮಾಡುವವರು ಅರವತ್ತು ವರ್ಷ ನಂತರ ನಿವೃತ್ತಿ ಪಡೆದರೆ ಅಸಂಘಟಿತ ವಲಯದಲ್ಲಿ ಎಂಬತ್ತು ವರ್ಷಗಳಾದರೂ

ದುಡಿಯುವ ಪರಿಸ್ಥಿತಿ ಇದೆ. ಎಂಬತ್ತು ವರ್ಷದ ಮಹಿಳೆಯೊಬ್ಬರು ಇಂದಿಗೂ ವಿಜಯಪುರದ ಲಾಲ್‌ಬಹದ್ದೂರ ಶಾಸ್ತ್ರೀ ಮಾರುಕಟ್ಟೆಯಲ್ಲಿ ಉಪ್ಪು ಮತ್ತು ಬೆಳ್ಳುಳ್ಳಿ ಮಾರಾಟ ಮಾಡುತ್ತಾರೆ. ಆಕೆಗೆ ಇಬ್ಬರು ಹೆಣ್ಣುಮಕ್ಕಳು, ಒಬ್ಬ ಗಂಡು ಮಗ ಇದ್ದಾನೆ. ಒಬ್ಬ ಮಗ ಮತ್ತು ಮಗಳು ತೀರಿಕೊಂಡು ಇಪ್ಪತ್ತೈದು ವರ್ಷಗಳಾಗಿವೆ. ಅವರ ಎರಡು ಗಂಡು ಮಕ್ಕಳನ್ನು ಈಕೆಯೇ ಸಾಕಿದ್ದಾಳೆ. ತಾಯಿ ತಂದೆ ಇಲ್ಲದ ಮಕ್ಕಳೆಂದು ಮುದ್ದು ಮಾಡಿ ಸಾಕಿದರು. ಆದರೆ ಆ ಮಕ್ಕಳು ಶಾಲೆಗೆ ಹೋಗದೆ ಪೋಲಿ ತಿರುಗುತ್ತ, ಕೆಟ್ಟ ಚಟಗಳಿಗೆ ಅಜ್ಜಿಯಿಂದ ಹಣ ಕೀಳುತ್ತ ಅಜ್ಜಿಯನ್ನು ನೆಮ್ಮದಿಯಿಂದ ಬದುಕಲು ಬಿಡುತ್ತಿಲ್ಲ. ಅಜ್ಜಿ ಈ ವಯಸ್ಸಿನಲ್ಲೂ ದುಡಿದು ಅವರ ಚಟಗಳಿಗೆ ಹಣ ಕೊಡಬೇಕಾಗಿದೆ. ಸಮುದಾಯದ ಮುಖ್ಯಸ್ಥರಿಗೆ ಹೇಳಿ ಅವರ ಕೈಲಿ ಗದರಿಸಿದರೆ ನಾಲ್ಕು ದಿನ ಸುಮ್ಮನಿದ್ದು ಮತ್ತೆ ಹಾಗೆಯೇ ಮಾಡುತ್ತಾರೆ. ಇರುವ ಒಂದು ಮುನಿಸಿಪಾಲಿಟಿಯ ಮನೆಯನ್ನು ಮಾರಾಟ ಮಾಡಲು ಒತ್ತಾಯಿಸುತ್ತಿದ್ದಾರೆ. ಇನ್ನೊಬ್ಬ ಮಗಳ ಹತ್ತಿರ ಹೋದರೆ ಅಲ್ಲಿಯೂ ನೆಮ್ಮದಿ ಇಲ್ಲವೆಂದು ಆಕೆ ಕಣ್ಣೀರಿಟ್ಟಳು. ಆಕೆಯ ಚರ್ಮ ಬತ್ತಿ ಹೋಗಿದೆ. ಆದರೆ ಆಕೆಯ ಕಣ್ಣೀರಿನ್ನೂ ಬತ್ತಿಲ್ಲ.

ಈ ಮಹಿಳೆಯರು ಯಾವ ಯೋಜನೆಗಳ ಲಾಭವನ್ನೂ ಪಡೆಯಲು ಸಾಧ್ಯವಾಗಿಲ್ಲ. ಕಾರಣ ಬೆಳಗ್ಗೆ ವ್ಯಾಪಾರಕ್ಕೆ ಬಂದ ಮಹಿಳೆಯರು ಮನೆಗೆ ಹೋಗುವುದು ಹಣ್ಣು ತರಕಾರಿಗಳು ಮುಗಿದ ನಂತರವೇ. ಸ್ವಂತ ಕೆಲಸಗಳನ್ನು ಮಾಡಿಕೊಳ್ಳ ಬೇಕೆಂದರೆ ವ್ಯಾಪಾರ ನಿಲ್ಲಿಸಿ ಬರಬೇಕಾಗುತ್ತದೆ. ಸಂಪಾದನೆಗೆ ಕುತ್ತು ಬರುವುದೆಂದು ಕಛೇರಿಯ ಯಾವ ಕೆಲಸಗಳನ್ನು ಮಾಡಿಕೊಳ್ಳಲು ಹೋಗು ವುದಿಲ್ಲ. ಸರ್ಕಾರಿ ಯೋಜನೆಗಳ ಬಗ್ಗೆ ತಿಳಿದೇ ಇಲ್ಲವೆಂದು ಹಲವು ಮಹಿಳೆಯರು ಹೇಳಿದ್ದಾರೆ. ಕೆಲವೊಮ್ಮೆ ತಿಳಿದಿದ್ದರೂ ಯೋಜನೆಗೆ ಅಗತ್ಯವಿರುವ ಕಾಗದಪತ್ರಗಳಿರುವುದಿಲ್ಲ. ಹೀಗಾಗಿ ಇವರಲ್ಲಿ ಯೋಜನೆಗಳ ಫಲ ಪಡೆದಿರುವವರು ಕೆಲವೇ ಅನುಭವೀ ವ್ಯಾಪಾರಸ್ಥರು ಮಾತ್ರ. ವ್ಯಾಪಾರಕ್ಕಾಗಿ, ಆರೋಗ್ಯ ಸಮಸ್ಯೆಗಳಿಗಾಗಿ ಅಗತ್ಯವಿರುವ ಹಣಕ್ಕಾಗಿ ಹೆಚ್ಚಿನ ಬಡ್ಡಿದರ ಕೊಟ್ಟು ಬಡ್ಡಿ ವ್ಯಾಪಾರಿಗಳ ಬಳಿ ಸಾಲ ತೆಗೆದುಕೊಳ್ಳುತ್ತಾರೆ. ಸಾಲಗಳನ್ನು ತೀರಿಸಲು ಮುಂಜಾನೆಯಿಂದ ಸಂಜೆಯವರೆಗೆ ಬಿಸಿಲು, ಮಳೆ, ಚಳಿಗಾಳಿಗಳನ್ನು ಲೆಕ್ಕಿಸದೇ ದುಡಿಯುತ್ತಾರೆ. ಅಧಿಕೃತ ಬ್ಯಾಂಕುಗಳಲ್ಲಿ, ಹಣ–ಕಾಸು ಸಂಸ್ಥೆಗಳಲ್ಲಿ ಸಾಲ ಪಡೆಯಲು ಇವರ ಬಳಿ ಆಧಾರಗಳಿಲ್ಲ.

ಬೀದಿ ಬದಿ ವ್ಯಾಪಾರದಲ್ಲಿ, ಮಾರಾಟ ಮಾಡುವ ಮಹಿಳೆಯರು ಮತ್ತು ದಲ್ಲಾಳಿಗಳ ಪರಸ್ಪರ ಅವಲಂಬನೆ ಅವಶ್ಯಕ. ಆದ್ದರಿಂದ ಹೋಲ್‌ಸೇಲ್ ವ್ಯಾಪಾರ ಮಾಡುವ ಬಾಗವಾನ ಸಮುದಾಯದ ಜನರು ಕಡಿಮೆ ಬೆಲೆಯಲ್ಲಿ ವಾಹನಗಳ ಸೌಲಭ್ಯ ಒದಗಿಸುವುದರಿಂದ ನೇರವಾಗಿ ವ್ಯಾಪಾರ ಮಾಡುವ ಸ್ಥಳಕ್ಕೆ ಸರಕನ್ನು ತಲುಪಿಸುವುದು ಈ ಮಹಿಳೆಯರಿಗೆ



ಸಾಧ್ಯವಾಗಿದೆ. ವ್ಯಾಪಾರ ಮುಗಿದ ನಂತರ ದಳ್ಳಾಳಿಗಳ ಕಡೆಯವರು ಬಂದು ಹಣ ವಸೂಲಿ ಮಾಡುತ್ತಾರೆ.

ಆರ್ಥಿಕ ಅಭಿವೃದ್ಧಿಯಲ್ಲಿ ಅಸಂಘಟಿತ ವಲಯದ ಮಹಿಳೆಯರು ಪ್ರಮುಖ ಪಾತ್ರ ವಹಿಸುತ್ತಾರೆ. ದೇಶದ ಆರ್ಥಿಕತೆ ಈ ಅಸಂಘಟಿತ ವಲಯದ ಮಹಿಳೆಯ ರಿಂದಲೇ ಭದ್ರತೆಯನ್ನು ಪಡೆದುಕೊಂಡಿದೆ ಎಂದು ಪ್ರಸಿದ್ಧ ಅರ್ಥಶಾಸ್ತ್ರಜ್ಞರಾದ ಮಹಬೂಬುಲ್ ಹಕ್ ಮತ್ತು ಅಮರ್ತ್ಯ ಸೇನ್ ಸಾಬೀತುಪಡಿಸಿದ್ದಾರೆ. ವೀಣಾ ಮುಜುಂದಾರ ಅವರು ಮಹಿಳೆಯರ ಸ್ಥಿತಿಗತಿ ಕುರಿತು ೧೯೭೪ರಲ್ಲಿ ಸರ್ಕಾರಕ್ಕೆ ಸಲ್ಲಿಸಿದ "ಸಮಾನತೆಯೆಡೆಗೆ" ವರದಿಯಲ್ಲಿ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮಹಿಳೆಯರ ಅಭಿವೃದ್ಧಿಗಾಗಿ ಸರ್ಕಾರವು ಅವರ ಆರ್ಥಿಕ ಸಬಲತೆಗಾಗಿ ಯೋಜನೆಗಳನ್ನು ಜಾರಿಗೊಳಿಸ ಬೇಕೆಂದು ಹೇಳಿದೆ.

ಬೀದಿ ಬದಿಯ ವ್ಯಾಪಾರಸ್ಥ ಮಹಿಳೆಯರು ಐವತ್ತರಿಂದ ಅರವತ್ತು ವರ್ಷಗಳವರೆಗೆ ದುಡಿದರೂ ಆರ್ಥಿಕ ಸುಸ್ಥಿರತೆಯನ್ನು ಪಡೆಯಲು ಸಾಧ್ಯವಾಗಿಲ್ಲ. ಕುಟುಂಬದ ಎಲ್ಲ ಸದಸ್ಯರೂ ದುಡಿದು, ಸಮಾನವಾಗಿ ಜವಾಬ್ದಾರಿಗಳನ್ನು ಹಂಚಿಕೊಂಡರೆ ಮಾತ್ರ ಕುಟುಂಬ ನಿರ್ವಹಣೆ ಸುಲಭವಾಗುತ್ತದೆ. ಆದರೆ ಕುಟುಂಬವನ್ನು ಮಹಿಳೆಯರ ಹೆಗಲಿಗೆ ವಹಿಸಿ ಕುಟುಂಬದಿಂದ ಸಿಗುವ ಸವಲತ್ತುಗಳನ್ನು ಮಾತ್ರ ನಿರಾಯಾಸವಾಗಿ ಪಡೆದುಕೊಳ್ಳಲು ಅನುವು ಮಾಡಿ ಕೊಡುವ ಪುರುಷಪ್ರಧಾನತೆಯು ಮಹಿಳೆಯರನ್ನು ಇಬ್ಬಗೆಯ ಜವಾಬ್ದಾರಿಗೆ ಸಿಲುಕಿಸಿದೆ. ೨೫೦ ಸಂದರ್ಶನಾರ್ಥಿಗಳ ಶೇ. ೭೫ರಷ್ಟು ಬೀದಿ ಬದಿ ವ್ಯಾಪಾರಸ್ಥ ಮಹಿಳೆಯರು ದಿನವಿಡೀ ವ್ಯಾಪಾರ ಮಾಡಿ, ಕುಟುಂಬವನ್ನೂ ನಿರ್ವಹಿಸುವುದಲ್ಲದೆ ಕೌಟುಂಬಿಕ ಹಿಂಸೆಯನ್ನು ಅನುಭವಿಸುತ್ತಾರೆ. ಗಂಡಸರ ಕುಡಿತದ ಚಟವು ಕುಟುಂಬದ ನೆಮ್ಮದಿಯನ್ನು ಕೆಡಿಸಿದೆ. ಇಂತಹ ಕುಟುಂಬದಲ್ಲಿ ತಾಯಿಯ ದುಃಖವನ್ನು ಕಡಿಮೆ ಮಾಡಲು ಗಂಡುಮಕ್ಕಳು ಹತ್ತು ಹನ್ನೆರಡು ವರ್ಷಗಳಲ್ಲಿಯೇ ಕೆಲಸಕ್ಕೆ ಹೋಗಲು ಆರಂಭಿಸಿದರೆ, ಹೆಣ್ಣುಮಕ್ಕಳು ಮನೆಯ ಕೆಲಸಗಳನ್ನು ನಿರ್ವಹಿಸುತ್ತಾ ತಾಯಿಗೆ ಸಹಾಯ ಮಾಡುತ್ತಾರೆ. ಆದರೆ ಶಿಕ್ಷಣದಿಂದ ವಂಚಿತರಾಗುತ್ತಾರೆ. ಕೌಶಲ್ಯಗಳ ಕೊರತೆಯಿಂದಾಗಿ ಉತ್ತಮ ಅವಕಾಶಗಳಿಂದ ವಂಚಿತರಾಗಿ ಅವರೂ ಅಸಂಘಟಿತ ವಲಯದಲ್ಲಿಯೇ ಉಳಿಯುತ್ತಾರೆ. ಮತ್ತೆ ಅದೇ ಇತಿಹಾಸ ಮುಂದುವರೆಯುತ್ತದೆ.

ದೇಶದ ಆರ್ಥಿಕ ಅಭಿವೃದ್ಧಿಗೆ ಮಹಿಳೆಯರ ದುಡಿಮೆಯ ಪಾಲು ಗಮನಾರ್ಹವಾಗಿದ್ದರೂ ಮಹಿಳೆ ಯರನ್ನು ಅಭಿವೃದ್ಧಿಯಲ್ಲಿ ಪಾಲುದಾರರೆಂದು ಗುರುತಿಸಿ ಇವರಿಗೆ ಸಿಗಬೇಕಾದ ಪ್ರತಿಫಲ ಕೊಡುತ್ತಿಲ್ಲ ವೆಂಬುದು ಕಂಡುಬರುತ್ತದೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಲವಾರು ಮಹಿಳೆಯರು "ನಾವು ೬೦ರಿಂದ ೭೦ ವರ್ಷಗಳವರೆಗೆ ದುಡಿದರೂ ನಮ್ಮ ಪರಿಸ್ಥಿತಿ ಹೀಗೆ ಇದೆ ನಮ್ಮ ಬಗ್ಗೆ ಎಲ್ಲರೂ ಬರೆದು ಕೊಂಡು ಹೋದರೂ ಏನೂ ಬದಲಾವಣೆ ಮಾಡಿಲ್ಲ" ಎಂದು ಹೇಳಿದರು. ಈ ಮಹಿಳೆಯರು ವ್ಯಾಪಾರದಲ್ಲಿ ತುಂಬ ಪರಿಣತರಾದರೂ, ಕಷ್ಟಪಟ್ಟು ದುಡಿದರೂ ಇವರ ಶ್ರಮಕ್ಕೆ ತಕ್ಕ ಬೆಲೆ ಸಿಗುತ್ತಿಲ್ಲ. ಆಯಾ ದಿನದ ಹೊಟ್ಟೆ ತುಂಬಿಸಿಕೊಳ್ಳಲು ಮಾತ್ರ ಯೋಚಿಸುವ ಸ್ಥಿತಿಯಲ್ಲಿರುವ ಈ ಮಹಿಳೆಯರಿಗೆ ಕೆಲವೊಮ್ಮೆ ವ್ಯಾಪಾರಕ್ಕೆ ಹಾಕಿದ ಬಂಡವಾಳವೂ ಸಿಗುವುದಿಲ್ಲ. ಮಾರಾಟವಾಗದೆ ಉಳಿದರೆ, ಹಣ್ಣು ತರಕಾರಿಗಳು ಬೇಗನೇ ಕೆಟ್ಟುಹೋಗುವುದರಿಂದ ವ್ಯಾಪಾರದಲ್ಲಿ ನಷ್ಟವಾಗುತ್ತದೆ. ನಷ್ಟ ಭರಿಸಲು ಮತ್ತೆ ವ್ಯಾಪಾರ ಮಾಡಲು ಮತ್ತೆ ಸಾಲ ಮಾಡುತ್ತಾರೆ. ವ್ಯಾಪಾರದಲ್ಲಿನ ಅಸ್ಥಿರತೆ ಮತ್ತು ಮನೆಯ ಜವಾಬ್ದಾರಿಗಳು ಈ ಮಹಿಳೆಯರ ಮಾನಸಿಕ ಸ್ಥಿತಿಗಳ ಮೇಲೆ ಪರಿಣಾಮ ಬೀರಿವೆ.

ಒಟ್ಟಾರೆಯಾಗಿ ಹೇಳಬೇಕೆಂದರೆ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುವ ಮುಸ್ಲಿಂ ಮಹಿಳೆಯರಿಗೆ ಅನುಕೂಲವಾಗುವಂತಹ ಯೋಜನೆ ಗಳನ್ನು ಸರ್ಕಾರ ರೂಪಿಸಿ ಅವರ ಸಾಮಾಜಿಕ–ಆರ್ಥಿಕ ಸ್ಥಿತಿಗತಿಯನ್ನು ಸುಧಾರಿಸಲು ಶ್ರಮಿಸಬೇಕು. ಸಮಾಜಕ್ಕೆ ಸಹಕಾರಿಯಾಗಿರುವ ಈ ಮಹಿಳಾ ಶ್ರಮವನ್ನು ಗೌರವಿಸಬೇಕು.

**ಹಮೀದಾಬಾನೂ ಅ. ಅಥಣಿ**
ಸಂಶೋಧನಾ ವಿದ್ಯಾರ್ಥಿನಿ, ಅಹಲ್ಯಾಬಾಯಿ ಮಹಿಳಾ ಅಧ್ಯಯನ ವಿಭಾಗ, ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ



# ನಾಲ್ಕು ಗ್ರಹಗಳೂ ಸಂಜೆಯ ಆಕಾಶದಲ್ಲಿ

**ಸಂ**ಜೆಯ ಆಕಾಶದಲ್ಲಿ ಕಾಣುವ ಶುಕ್ರದ ಸೌಂದರ್ಯವನ್ನು ಆಸ್ವಾದಿಸಲು ಇದು ಸುಸಮಯ. ತೆಳ್ಳನೆಯ ಮೋಡಗಳಿದ್ದರೂ ಇದರ ಪ್ರಕಾಶ ಎದ್ದುಕಾಣುತ್ತದೆ. ಇದರ ಜೊತೆಗೆ ಇನ್ನೂ ಮೂರು ಗ್ರಹಗಳೂ ಸಂಜೆಯ ಆಕಾಶದಲ್ಲಿ ಕಾಣುವ ಅವಕಾಶ ಈಗ ದೊರಕಿದೆ. ಶುಕ್ರದಿಂದ ಸ್ವಲ್ಪವೇ ಮೇಲಕ್ಕೆ ಗುರುಗ್ರಹ ಕಾಣುತ್ತದೆ. ನೆತ್ತಿಯಿಂದ ಸ್ವಲ್ಪ ಪೂರ್ವಕ್ಕೆ ಶನಿ ಪೂರ್ವದ ಅಂಚಿನಲ್ಲಿ ಮಂಗಳ ಕಾಣುತ್ತವೆ. ಕಳೆದ ತಿಂಗಳ ಕೊನೆಯ ದಿನ ಭೂಮಿಯಿಂದ ಕನಿಷ್ಠ ದೂರದಲ್ಲಿದ್ದ ಮಂಗಳ ಈಗ ಬಹಳ ಪ್ರಕಾಶಮಾನವಾಗಿದೆ. ಕಿತ್ತಲೆ ಬಣ್ಣದಿಂದ ಕಂಗೊಳಿಸುತ್ತಿದೆ. ೧೭ರಂದು ಶುಕ್ರ ಗರಿಷ್ಠ ಎತ್ತರದಲ್ಲಿ ಕಾಣುವುದು. ಶುಕ್ರ ಪೂರ್ವಕ್ಕೆ ಚಲಿಸುತ್ತದೆಂಬುದನ್ನು ತಿಳಿಯಲು ಅದರ ಸ್ಥಾನವನ್ನು ಗುರುತು ಮಾಡಿಕೊಳ್ಳಿ. ಇದಕ್ಕೆ ಸಮೀಪದ ಚಿತ್ರಾ ನಕ್ಷತ್ರವನ್ನು ಬಳಸಬಹುದು. ಗುರು ಮತ್ತು ಶುಕ್ರಗಳ ಅಂತರ ದಿನೇ ದಿನೇ ಕಡಿಮೆಯಾಗುವುದು. ಇದಕ್ಕೆ ಶುಕ್ರದ ಪೂರ್ವಾಭಿಮುಖ ಚಲನೆಯೇ ಕಾರಣ. ಆದರೆ ಭೂಮಿ ತಿರುಗುತ್ತಿರುವುದರಿಂದ ಎಲ್ಲ ಕಾಯಗಳೂ (ಸೂರ್ಯ, ಚಂದ್ರ ಮೊದಲ್ಗೊಂಡಂತೆ) ಪೂರ್ವದಲ್ಲಿ ಹುಟ್ಟಿ ಪಶ್ಚಿಮದಲ್ಲಿ ಕಂತುತ್ತವೆ ಎಂಬುದೂ ನಿಜ.

ಹೀಗೆ ಪರಸ್ಪರ ವಿರುದ್ಧವಾದ ಎರಡು ಚಲನೆಗಳನ್ನು ಪ್ರತ್ಯೇಕವಾಗಿ ಗುರುತಿಸಲು ಶುಕ್ರ ಸೂಕ್ತವಾದ ಉದಾಹರಣೆ.

೧೧ರಂದು ಅಮಾವಾಸ್ಯೆ – ಸೂರ್ಯಗ್ರಹಣವೂ ಇದೆ. ಆದರೆ ಭಾರತಕ್ಕೆ ಗೋಚರಿಸುವುದಿಲ್ಲ. ಕಳೆದ ತಿಂಗಳೂ ಒಂದು ಸೂರ್ಯಗ್ರಹಣ ಇತ್ತು. ಅದೂ ಪಾರ್ಶ್ವಗ್ರಹಣವೇ ಆಗಿತ್ತು. ಈ ಎರಡೂ ಪಾರ್ಶ್ವ ಗ್ರಹಣಗಳ ನಡುವೆ ಒಂದು ಚಂದ್ರಗ್ರಹಣ ಉಂಟಾಗಿತ್ತು. ಹೀಗೆ ಮೂರು ಗ್ರಹಣಗಳು ಒಟ್ಟಾಗಿ ಬರುವುದು ಅಪರೂಪವೇನಲ್ಲ. ಹಾಗೆ ಬಂದಾಗಲೆಲ್ಲ ಎರಡು ಪಾರ್ಶ್ವ ಗ್ರಹಣಗಳ ನಡುವೆ ಒಂದು ಸಂಪೂರ್ಣ ಗ್ರಹಣ ಉಂಟಾಗುತ್ತದೆ.

೧೧ರ ನಂತರ ಸಂಜೆಯ ಆಕಾಶದಲ್ಲಿ ಕಾಣುವ ಚಂದ್ರ ನಾಲ್ಕೂ ಗ್ರಹಗಳ ಪಕ್ಕ ಹಾದುಹೋಗುವ ದಿನಾಂಕಗಳನ್ನು ನೋಡಿಕೊಂಡು ಅವುಗಳನ್ನು ಗುರುತಿಸಬಹುದು. ಐದನೆಯ ಗ್ರಹ ಬುಧ ತಿಂಗಳ ಕೊನೆಗೆ ಮುಂಜಾವಿನಲ್ಲಿ ಕಾಣುವುದು. ೨೬ರಂದು ಗರಿಷ್ಠ ಕೋನೋನ್ನತಿ. ಹೀಗೆ ಈ ತಿಂಗಳಲ್ಲಿ ಐದೂ ಗ್ರಹಗಳನ್ನು ನೋಡುವ ಗುರುತಿಸುವ ಅವಕಾಶಗಳಿವೆ.

ಆಗಸ್ಟ್ ತಿಂಗಳೆಂದ ಕೂಡಲೇ ಉಲ್ಕಾವೃಷ್ಟಿ ಪರ್ಸಿಯ್ಡ್ ನೆನಪಾಗುವುದು. ಇದು ಎಲ್ಲ ಹವ್ಯಾಸಿ ವೀಕ್ಷಕರೂ ಎದುರು ನೋಡುವ ಘಟನೆ. ಆದರೆ ನಮಗೆ ಭಾರತದಲ್ಲಿ ಯಾವಾಗಲೂ ಮಾನ್ಸೂನ್ ಕಾರಣ ಇದರ ಪೂರ್ಣ ಪರಿಚಯವೇ ಆಗಿಲ್ಲ. ಜುಲೈ ತಿಂಗಳ ಕೊನೆಗೇ ಆರಂಭವಾಗುವ ಉಲ್ಕೆಗಳ ಪತನ ಸುಮಾರು ೧೧–೧೨ರ ಹೊತ್ತಿಗೆ ಗರಿಷ್ಠ ಮುಟ್ಟುವುದು. ಗಂಟೆಗೆ ೬೦ರಿಂದ ೭೦ ಉಲ್ಕೆಗಳು ಬೀಳುವುವು. ಈ ಬಾರಿ ಇದು ಅಮಾವಾಸ್ಯೆ ಆಗಿರುವುದರಿಂದ ಚಂದ್ರದ ಬೆಳಕಿನ ಅಡಚಣೆಯೂ ಇರುವುದಿಲ್ಲ. ಆದರೆ ಮೋಡಗಳು ಸ್ವಲ್ಪ ಬಿಡುವು ಕೊಡಬೇಕಷ್ಟೇ.

ಆಗಸ್ಟ್ ೧೫ರ ಸಂಜೆ ಗುರು ಮತ್ತು ಶುಕ್ರಗಳ ನಡುವೆ ಚಂದ್ರ

**ಆಗಸ್ಟ್ ಖಗೋಳ ದಿನಚರಿ**

೪ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೬ ರೋಹಿಣಿ–ಚಂದ್ರ ಜೋಡಿ* (ಆಚ್ಛಾದನೆ ಭಾರತಕ್ಕೆ ಕಾಣುವುದಿಲ್ಲ)
೯ ಬುಧ – ಸೂರ್ಯ ಜೋಡಿ (ಯುತಿ)
೧೦ ಚಂದ್ರ – ಭೂಮಿ ನಡುವೆ ಕನಿಷ್ಠ ದೂರ
೧೧ ಅಮಾವಾಸ್ಯೆ – ಪಾರ್ಶ್ವ ಸೂರ್ಯಗ್ರಹಣ (ಭಾರತಕ್ಕೆ ಕಾಣುವುದಿಲ್ಲ)
೧೨ –೧೩ ಪರ್ಸಿಯ್ಡ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ*
೧೪ ಚಂದ್ರ – ಶುಕ್ರ ಜೋಡಿ*
೧೭ ಚಂದ್ರ–ಗುರು ಜೋಡಿ*; ಶುಕ್ರಗ್ರಹದ ಗರಿಷ್ಠ ಕೋನೋನ್ನತಿ*
೧೮ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)
೨೧ ಶನಿ – ಚಂದ್ರ ಜೋಡಿ*
೨೩ ಚಂದ್ರ – ಭೂಮಿ ನಡುವೆ ಗರಿಷ್ಠ ದೂರ; ಮಂಗಳ – ಚಂದ್ರ ಜೋಡಿ
೨೬ ಹುಣ್ಣಿಮೆ; ಬುಧಗ್ರಹದ ಗರಿಷ್ಠ ಕೋನೋನ್ನತಿ*
೨೮ ಮಂಗಳದ ಹಿನ್ನಡೆ ಮುಕ್ತಾಯ
(*ಛಾಯಾಗ್ರಹಣಕ್ಕೆ ಸದವಕಾಶ)

**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಕಡಲ ಕಿನಾರೆಯ ಕಾಯಕಜೀವಿ ಪರಶುರಾಮ

ಸಮುದ್ರ ಎಂಬ ಪ್ರಾಕೃತಿಕ ಸೌಂದರ್ಯದ ತಾಣ ಹಲವು ಬಾರಿ ಭಯ ಆತಂಕಗಳನ್ನು ಸೃಷ್ಟಿಸಿದರೂ ಮಾನವ ಎಂತಹ ಪ್ರತಿಕೂಲ ಪರಿಸರದಲ್ಲೂ ತನ್ನ ನೆಲೆಯೂರಲು ಕಲಿತು ಯಶಸ್ವಿಯಾಗಿದ್ದಾನೆ ಎಂಬುದು ವಾಸ್ತವ. ಮಾನವ ಸಮಾಜ ಪ್ರಕೃತಿಯ ಲಾಭವನ್ನು ಪಡೆದು ಅದರ ಜೊತೆಜೊತೆಗೇ ಬೆಳೆದುಬಂದಿದೆ. ಕರಾವಳಿ ಪ್ರದೇಶದಲ್ಲಿ ಕಡಲು ಕುಪಿತಗೊಂಡ ಯಾವುದೇ ಭಯಂಕರ ಸಂದರ್ಭದಲ್ಲೂ ಜನಜೀವನ ಸ್ತಬ್ಧಗೊಂಡಿಲ್ಲ. ಬದಲಿಗೆ ಕಡಲ ತಡಿ ಬರದ ಬಯಲುನಾಡಿನ ಬಡಜನರಿಗೂ ಸಾಕಷ್ಟು ಉದ್ಯೋಗ ಕಲ್ಪಿಸಿ ಅವರ ಹೊಟ್ಟೆ ಹೊರೆದಿದೆ. ಜಲಚರಗಳ ಜೊತೆಗಿನ ಮನುಷ್ಯನ ಅವಿನಾಭಾವ ಸಂಬಂಧವಂತೂ ವಿಶೇಷವೇ. ವಿಧವಿಧವಾದ ಮೀನುಗಳಿಗೂ ಜನರ ಬದುಕಿಗೂ ಕಾಲಾನುಕ್ರಮದಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷ ನಂಟು ಏರ್ಪಟ್ಟಿರುವುದು ನಿಸರ್ಗ ಮತ್ತು ಮನುಷ್ಯನ ನಡುವಿನ ಸಾಮಾಜಿಕ-ಆರ್ಥಿಕ ಸಂಬಂಧಗಳಿಗೆ ಸಾಕ್ಷಿಯಾಗಿದೆ. ಕಡಲ ಕಿನಾರೆಯು ವೈವಿಧ್ಯಮಯ ಬದುಕಿನ ಜೀವಂತಿಕೆಯ ಸಂಕೇತವಾಗಿದೆ.

ಇತ್ತೀಚೆಗೆ ನಾನು ಒಂದು ಕಡಲ ತಡಿಯ ಮರಳಿನ ಮೇಲೆ ಸೂರ್ಯೋದಯದ ಸಾಗರದ ಅಲೆಗಳನ್ನು ಸವಿಯುತ್ತಾ ಕುಳಿತಿದ್ದೆ. ಅಲ್ಲಿ ಹೆಚ್ಚೇನೂ ಜನಸಂದಣಿ ಇರಲಿಲ್ಲ. ವೃದ್ಧರೊಬ್ಬರು ಮರಳಿನ ಹಾಸಿನಲ್ಲಿ ತನ್ಮಯತೆಯಿಂದ ಅದೇನನ್ನೋ ಅರಸುತ್ತಾ ಅತ್ತಿಂದಿತ್ತ ಓಡಾಡುತ್ತಲಿದ್ದರು. ಎರಡು ದಿನಗಳಿಂದ ಅಲ್ಲೇ ತಂಗಿದ್ದ ನಾನು ಆತನನ್ನು ಹಿಂದಿನ ಸಂಜೆಯಾಗಲೀ ಮಧ್ಯಾಹ್ನವಾಗಲೀ ಕಂಡಿರಲಿಲ್ಲ. ನನ್ನ ಕಣ್ಣ ರೆಪ್ಪೆಗಳು ಒಂದಕ್ಕೊಂದು ತಾಗದಂತೆ ಅಲೆಗಳ ಏರಿಳಿತದ ಜೊತೆಗೆ ಈತನ ಓಡಾಟದ ವೇಗದ ಮೇಲೆ ನನ್ನ ದೃಷ್ಟಿ ನೆಲೆಸಿತು. ನನ್ನ ದೀರ್ಘ ಮೌನ ಮುರಿಯುವ ಮನಸ್ಸಾಯಿತು. ಮೂಟೆ ಹೊತ್ತಿದ್ದ ಆ ವೃದ್ಧ ಏನು ಮಾಡುತ್ತಿದ್ದಾರೆಂದು ಕೊಂಚ ಗಮನಿಸಿದೆ. ಆತನ ಚಲನವಲನಗಳು ತೀವ್ರ ಕುತೂಹಲಕ್ಕೆ ಕಾರಣವಾಗಿದ್ದವು. ಏಕೆಂದರೆ ಆತನೇನೂ ಕಪ್ಪೆಚಿಪ್ಪು ಆಯ್ದು ಸಂಗ್ರಹಿಸುತ್ತಿರಲಿಲ್ಲ. ಬೇರೊಂದು ವಿಚಿತ್ರವಾದ ಕೆಲಸವನ್ನು ಅತ್ಯಂತ ತನ್ಮಯರಾಗಿ ಶ್ರದ್ಧೆ ಆಸ್ಥೆಗಳಿಂದ ಕೈಗೊಂಡಿದ್ದರು.



ಕಡಲ ತೀರದಲ್ಲಿ ಬಿದ್ದಿರುವ ಪ್ಲಾಸ್ಟಿಕ್ ವೈರ್ ಎಂಬ ಚಿಂದಿಯನ್ನು ಆಯ್ದು ತಮ್ಮ ಗೋಣಿಚೀಲಕ್ಕೆ ತುಂಬಿಸಿಕೊಳ್ಳುತ್ತಿರುವ ಪರಶುರಾಮ.

**ಕಡಲ ತಡಿಯಲ್ಲಿ ಪ್ಲಾಸ್ಟಿಕ್ ಹಗ್ಗ**

ವೃದ್ಧರು ಕಡಲ ತೀರದಲ್ಲಿ ಬಿದ್ದಿರುವ ಪ್ಲಾಸ್ಟಿಕ್ ವೈರ್ ಎಂಬ ಚಿಂದಿಯನ್ನು ಆಯ್ದು ತಮ್ಮ ಗೋಣಿಚೀಲಕ್ಕೆ ತುಂಬಿಸಿಕೊಳ್ಳುತ್ತಿದ್ದರು. ಅಂದಹಾಗೆ ಸಮುದ್ರ ತಟದಲ್ಲಿ, ಅದರಲ್ಲೂ ಪ್ರವಾಸಿ ಕೇಂದ್ರವಾಗಿರುವ ಸ್ಥಳಗಳಲ್ಲಿ ಪ್ಲಾಸ್ಟಿಕ್ ಬಾಟ್ಲಿಗಳನ್ನು ಊಹಿಸಿಕೊಳ್ಳಬಹುದು, ಆದರೆ ಪ್ಲಾಸ್ಟಿಕ್ ವೈರ್ ಹೇಗೆ ಎಂದುಕೊಂಡೀರಾ? ಹೌದು, ಸಮುದ್ರದಲ್ಲಿ ಮೀನು ಹಿಡಿಯಲು ಬೀಸುವ ಬಲೆ ಮತ್ತು ಕಟ್ಟುವ ಹಗ್ಗಗಳು ಪ್ಲಾಸ್ಟಿಕ್ನದಾಗಿದ್ದು, ಮೀನುಗಾರರು ತಾವು ಹಿಡಿದ ಮೀನುಗಳನ್ನು ಸಣ್ಣ ಮತ್ತು ಮಧ್ಯಮಗಾತ್ರದ ದೋಣಿಗಳಲ್ಲಿ ದಡಕ್ಕೆ ತಂದಿಳಿಸುವಾಗ ತುಂಡಾಗಿ ಬೀಳುವ ಹಗ್ಗಗಳು ಸಾಕಷ್ಟು ಪ್ರಮಾಣದಲ್ಲಿ ಮರಳ ಮೇಲೆ ಬಿದ್ದಿರುತ್ತವೆ. ಅಲ್ಲದೆ ಮೀನು ಹಿಡಿಯುವಾಗ ಸಮುದ್ರದೊಳಗೆ ಕಲ್ಲಿಗೆ ಸಿಕ್ಕಿ ಕತ್ತರಿಸಲ್ಪಡುವ ಹಗ್ಗದ ತುಂಡುಗಳು ಅಲೆಗಳ ಜೊತೆ ಕೊಚ್ಚಿಕೊಂಡು ಸಮುದ್ರ ತೀರಕ್ಕೆ ಬಂದು ಸಂಗ್ರಹವಾಗುವುದುಂಟು. ಪ್ರಕೃತಿ ಎಂದೂ ತನಗೆ ಸೇರದ ಕೃತಕ ವಸ್ತುಗಳನ್ನು ತನ್ನೊಡಲಿಗೆ ಸೇರಿಸಿಕೊಳ್ಳುವುದಿಲ್ಲ, ಆದರೆ ಮನುಷ್ಯ ಮಾತ್ರ ತನ್ನದಲ್ಲದ ವಸ್ತುಗಳನ್ನೂ ತನಗೂ ಬೇಕು, ತನ್ನ ಮುಂದಿನ ಪೀಳಿಗೆಗಳಿಗೂ ಬೇಕೆಂದು ದುರಾಸೆಯಿಂದ ಕೂಡಿಟ್ಟುಕೊಳ್ಳುವುದು! ಹಾಗಾಗಿ ಬಹುತೇಕ ಪ್ಲಾಸ್ಟಿಕ್ ಹಗ್ಗಗಳು ಸಮುದ್ರ ತೀರದಲ್ಲಿ ಬಂದು ಸೇರುತ್ತವೆ. ಅವು ಅಲ್ಲಿಯೇ ಉಳಿದುಬಿಟ್ಟರೆ ಈಗಾಗಲೇ ಕಡಲ್ಕೊರೆತದಿಂದ ತತ್ತರಿಸಿರುವ ಕರಾವಳಿಗೆ ಮತ್ತೊಂದು ಅಪಾಯ ಕಟ್ಟಿಟ್ಟ ಬುತ್ತಿ.

**ನಿವೃತ್ತಿ ಇಲ್ಲ, ವೃದ್ಧಾಪ್ಯದ ಸುಖ ಕಂಡಿಲ್ಲ**

ಈ ವೃದ್ಧನ ಕಾಯಕವೇ ಪ್ಲಾಸ್ಟಿಕ್ ಹಗ್ಗಗಳನ್ನು ಆಯ್ದು, ಅವುಗಳನ್ನು ಒಯ್ದು ಚಿಂದಿ ಅಂಗಡಿಗೆ ಮಾರಾಟ ಮಾಡುವುದು. ಅದನ್ನು ಅಲ್ಲಿ ತೂಕದ ಲೆಕ್ಕದಲ್ಲಿ ಕೊಳ್ಳಲಾಗುತ್ತದೆ. ಈತನ ಹೆಸರು ಪರಶುರಾಮ. ದುಡಿಯುವ ಜನರ ಬದುಕು ಎಷ್ಟು ವಿಚಿತ್ರವೋ ಅಷ್ಟೇ ಚಲನಶೀಲ. ಅವರ ಬದುಕಿನ ಹಾದಿ ಸಮುದ್ರದ ಅಲೆಗಳಂತೆಯೇ ಏರಿಳಿತಗಳನ್ನು ಕಂಡಿರುತ್ತವಾದರೂ ಎಂದೂ ಅವರು ಎತ್ತರದ ಅಲೆಯನ್ನು ತಲುಪಲಾರರು. ಪರಶುರಾಮ ಅವರ ವಯಸ್ಸು ಎಷ್ಟೆಂದು ಕೇಳಿದರೆ 'ಗೊತ್ತಿಲ್ಲ' ಎಂಬ ಮೂಕ ಸಂಜ್ಞೆಯ ಉತ್ತರ ಅವರದ್ದು. ಅವರ ಚರ್ಮವನ್ನು ಗಮನಿಸಿದರೆ ಬಹುಶಃ ೬೦ರಿಂದ ೬೫ ವರ್ಷಗಳ ಆಸುಪಾಸಿನಲ್ಲಿರಬಹುದು. ಚಿಂದಿ ಆಯುವ ಪರಶುರಾಮ ಚಿಂದಿ ಬಟ್ಟೆಯನ್ನೇ ಉಡುತ್ತಾರೆ. ಇಂತಹದ್ದೇ ದಿರಿಸು ತೊಡಿರೆಂದು ಪ್ರೀತಿಯಿಂದ ಹೇಳಲು, ಕೇಳಲು ಯಾರೂ ಇಲ್ಲ. ಇನ್ನು ಈತ "ಪುರುಷ" ರಾಮನಾದ್ದರಿಂದ ತುಂಡುಬಟ್ಟೆ ಧರಿಸುವ ಸ್ವಾತಂತ್ರ್ಯವನ್ನೂ ಸಮಾಜ ಹುಟ್ಟಿನಿಂದಲೇ ಉಚಿತವಾಗಿ ನೀಡಿದೆ! ಇಲ್ಲಿ ಅದನ್ನು ಸ್ವಾತಂತ್ರ್ಯ ಎಂದು ಹೇಳಲು ಆಗದಾದರೂ ಅವರ ಬದುಕು ಬಡತನದ, ನಿರ್ಗತಿಕ ಪರಿಸ್ಥಿತಿಯ ಚಿತ್ರಣವಾಗಿದೆ. ತಮ್ಮ ಕಾಯಕದ ಅವಿಭಾಜ್ಯ ಅಂಗವೆಂಬಂತೆ ಚಡ್ಡಿಯ ಜೇಬಿನಿಂದ ಬಿಗಿದ ಪ್ಲಾಸ್ಟಿಕ್ ಚೀಲವೊಂದನ್ನು ಬಿಚ್ಚಿ ಬಾಯಿ ತುಂಬ ತಂಬಾಕು ತುಂಬಿಕೊಳ್ಳುವ ಪರಶುರಾಮರನ್ನು, "ತಂಬಾಕು ಏಕೆ ಹಾಕಿಕೊಳ್ಳುತ್ತೀರಿ" ಎಂದು ಪ್ರಶ್ನಿಸಿದರೆ, "ಹಾಕದಿದ್ದರೆ ಹಲ್ಲು ಝುಂಗುಡುತ್ತದೆ" ಎಂಬ ಸಿದ್ಧ ಉತ್ತರ ಅವರಿಂದ ದೊರೆಯುತ್ತದೆ. ಎಂದೂ ಬ್ರಶ್ಶು ಪೇಸ್ಟು ಕಂಡಿರದ ಅವರ ಹಲ್ಲುಗಳಿಗೆ

ಜ್ಯೋತಿ ಎ.

ಸ್ವಾಭಾವಿಕವಾಗಿ ಅದೆಷ್ಟು ಶಕ್ತಿ ಇದೆಯೇನೋ ಎನಿಸಿ ಅಚ್ಚರಿಯಾಗುತ್ತದೆ. ಎಲ್ಲಕ್ಕಿಂತಲೂ ಮಿಗಿಲಾಗಿ ಈ ಇಳಿವಯಸ್ಸಿನಲ್ಲಿಯೂ ಜೀವಿಸಲು ಕೈಗೊಂಡಿರುವ ಅವರ ಸಾಹಸವನ್ನು ಕಂಡು ಬೆರಗಾಗಿ ಅವರ ಬಗ್ಗೆ ಧನ್ಯತಾಭಾವ ಮೂಡದಿರಲಿಲ್ಲ. ಈ ವ್ಯವಸ್ಥೆಯೊಳಗೆ ಬಡ, ನಿರ್ಗತಿಕ ದುಡಿಯುವ ವರ್ಗಕ್ಕೆ ನಿವೃತ್ತಿ ಎಂಬುದಿಲ್ಲ, ವೃದ್ಧಾಪ್ಯದ ಸುಖವೂ ಅನುಭವಿಸಲಾಗುವುದಿಲ್ಲ; ಶಾಶ್ವತವಾಗಿ ಕಣ್ಮುಚ್ಚಿದಾಗಲೇ ಶರೀರಕ್ಕೆ ವಿಶ್ರಾಂತಿ...

**ದುಡಿಯುವ ಜನರೇ ಹೊರತು ವ್ಯಾಪಾರಿಗಳಲ್ಲ**

ಪರಶುರಾಮ ಮೂಲತಃ ಬಾಗಲಕೋಟೆಯ ಒಂದು ಕುಗ್ರಾಮದವರು. ಸ್ವಂತ ಊರಿನಲ್ಲಿ ಮಳೆಯಿಲ್ಲದೆ ಉದ್ಯೋಗವನ್ನರಸಿ ಇಲ್ಲಿಗೆ ವಲಸೆ ಬಂದ ಸಹಸ್ರಾರು ಕಾರ್ಮಿಕರಲ್ಲಿ ಇವರೂ ಒಬ್ಬರು. ಹತ್ತು ವರ್ಷಗಳ ಹಿಂದೆ ದಕ್ಷಿಣ ಕನ್ನಡದ ಈ ಕರಾವಳಿ ನಗರಕ್ಕೆ ಬಂದು ಒಬ್ಬ ಮೇಸ್ತ್ರಿಯ ಕೈ ಕೆಳಗೆ ಪೈಂಟಿಂಗ್ ಕೆಲಸಕ್ಕೆ ನಿಲ್ಲುತ್ತಾರೆ. ಹೊಸ ಸಂಪ್ರದಾಯವೇನಲ್ಲ ಎಂಬಂತೆ ಆ ಮೇಸ್ತ್ರಿ ಇವರಿಂದ ಕೆಲಸ ಪಡೆದ ನಂತರ ಒಂದು ದಿನ ಇದ್ದಕ್ಕಿದ್ದಂತೆ ಕೆಲಸವಿಲ್ಲವೆಂದು ಹೇಳುತ್ತಾ ಹೊರಗಟ್ಟುತ್ತಾನೆ. ಆಗ ಇವರು ಸಮುದ್ರ ತೀರದಲ್ಲಿ ಹುಡುಕಾಟದಲ್ಲಿದ್ದಾಗ ಇತರ ಕೆಲವರು ಚಿಂದಿ ಆಯುವುದನ್ನು ಕಂಡು ತಾವೂ ಆ ಕಾಯಕಕ್ಕಿಳಿಯುತ್ತಾರೆ. ಹೀಗೆ ಆರು ವರ್ಷಗಳಿಂದ ಈ ಕಸುಬನ್ನು ಮುಂದುವರಿಸಿಕೊಂಡು ಬಂದಿರುವ ಪರಶುರಾಮ ಬೆಳಿಗ್ಗೆ ಸೂರ್ಯ ಮೂಡುವ ಮೊದಲೇ ತಮ್ಮ ಗೋಣಿಚೀಲವನ್ನು ಹೆಗಲಿಗೇರಿಸಿ ಕಡಲ ತೀರದಲ್ಲಿ ಪಾದವೂರುತ್ತಾರೆ. ಮಧ್ಯಾಹ್ನ ೧೨ರಿಂದ ೧ ಗಂಟೆಯೊಳಗೆ ಕೆಲಸ ಮುಗಿಸಿ ಮೂಟೆಗಳನ್ನು ತುಂಬಿಸಿ ಸುಮಾರು ಒಂದೂವರೆ – ಎರಡು ಕಿ.ಮೀ. ದೂರದಲ್ಲಿರುವ ಚಿಂದಿ ವ್ಯಾಪಾರಿಗೆ ಮಾರಾಟ ಮಾಡುತ್ತಾರೆ. ಅವರು ಹೇಳುವ ಪ್ರಕಾರ ದಿನವೊಂದಕ್ಕೆ ೨೦೦ ರೂ.ಗಳಿಂದ ೫೦೦ ರೂ.ಗಳವರೆಗೆ ಸಂಪಾದಿಸುತ್ತಾರೆ, ಆದರೆ ಸದಾಕಾಲ ಒಂದೇ ರೀತಿ ಇರುವುದಿಲ್ಲ. ಮಳೆಗಾಲದಲ್ಲಿ ಮೀನುಗಾರಿಕೆ ನಿಷೇಧವಾದಾಗ ಇವರ ಕಸುಬಿಗೆ ಹೊಡೆತ ಬೀಳುವುದು ನಿಶ್ಚಿತ. ಒಂದೊಂದು ದಿನ ಒಂದು ಮೂಟೆ ಹಾಗಿರಲಿ, ಅರ್ಧ ಮೂಟೆಯೂ ಚಿಂದಿ ಸಿಗುವುದಿಲ್ಲ. ಇವರ ಕೆಲಸ ಲಾಟರಿ ಇದ್ದಂತೆ. ಹೊಡೆದರೆ ಬಂಪರ್, ಇಲ್ಲವಾದರೆ ಖಾಲಿ ಹೊಟ್ಟೆ. ಜೊತೆಗೆ ಸಹೋದ್ಯೋಗಿಗಳ ಪೈಪೋಟಿ ಬೇರೆ! ಆದರೆ ಇವರಾರೂ ತಮ್ಮ ವೃತ್ತಿಯಲ್ಲಿ ಮತ್ಸರಕ್ಕೆ ಸ್ಥಳ ನೀಡಿಲ್ಲ, ಅವರವರೇ ಕಡಲುದ್ದಕ್ಕೂ ಪ್ರದೇಶಗಳನ್ನು ಗುರುತಿಸಿಕೊಂಡು ಹಂಚಿಕೆ ಮಾಡಿಕೊಂಡಂತೆ ತಮ್ಮ ಕಸುಬು ಮುಂದುವರಿಸಿಕೊಂಡಿದ್ದಾರೆ. ಏಕೆಂದರೆ ಇವರು ದುಡಿಯುವ ಜನರೇ ಹೊರತು ವ್ಯಾಪಾರಿಗಳಲ್ಲ! ಎಲ್ಲರನ್ನೂ ಒಳಗೊಳ್ಳುವ, ಜೀವಪರ ಮನಸ್ಥಿತಿಯ ಶ್ರಮಿಕ ವರ್ಗದ ಹೆಗ್ಗುರುತು ಇವರು.

ಸಹಜವಾಗಿ ಪರಶುರಾಮ ಅವರ ಕುಟುಂಬ ಮತ್ತು ವಾಸ್ತವ್ಯದ ಬಗ್ಗೆ ವಿಚಾರಿಸಿದೆ. ಚಿಂದಿ ಅಂಗಡಿಯ ಶೆಡ್‌ನ ಒಂದು ಮೂಲೆಯಲ್ಲಿ ತಂಗುವುದಾಗಿ ಹೇಳಿದರು. ಬಹುಶಃ ಅದಕ್ಕೂ ಅಲ್ಪ ಮೊತ್ತದ ಬಾಡಿಗೆ ಕೊಡಬೇಕೇನೋ! ಮನುಷ್ಯರು ಪ್ರಕೃತಿಯಷ್ಟು ಧಾರಾಳರಲ್ಲ ನೋಡಿ, ದುರುಳರೇ ಅವರು. ಬಡತನವನ್ನೂ, ಅಸಹಾಯಕತೆಯನ್ನೂ ಶೋಷಣೆ ಮಾಡುವುದು ನಮಗೆ ಈ ಬಂಡವಾಳಶಾಹಿ ವ್ಯವಸ್ಥೆ ಕಲಿಸಿಕೊಟ್ಟಿರುವ ಘೋರ ಪಾಠ! ಅವರ ಪತ್ನಿಯ ಬಗ್ಗೆ ವಿಚಾರಿಸಿದಾಗ, ಒಂದು ರೀತಿಯ ಅನಾಸಕ್ತಿ ತೋರಿದರು. ಊರಲ್ಲೇ ಬಿಟ್ಟಿದ್ದೀನಿ, ಮಕ್ಕಳಿಲ್ಲ ಎಂಬ ಉದಾಸೀನದ ಮಾತನ್ನಾಡಿದಾಗ ನಾನಾದರೂ, ಇದು ನನ್ನ ಪರಿಧಿಗೆ ಸೇರಿದ್ದಲ್ಲ ಎಂದುಕೊಂಡು ಮಾತು ಹೊರಳಿಸಿದೆ. ವೈಯಕ್ತಿಕ ವಿಷಯಗಳು ಕೆಲವೊಮ್ಮೆ ಸಾಮಾಜಿಕವಾಗಿ ಪರಿಣಾಮ ಬೀರುತ್ತವೆ, ಸಾಮಾಜಿಕ ವಿಷಯಗಳು ವ್ಯಕ್ತಿಗಳ ಮೇಲೆ ಪರಿಣಮಿಸುತ್ತವೆ. ಆತ ಪರಶುರಾಮನ ಅವತಾರವೋ ಶ್ರೀರಾಮನ ಅಪರಾವತಾರವೋ ಅಥವಾ ಶುದ್ಧ ದುಡಿಯುವ ವರ್ಗದ ಸಂಕೇತವೋ ಎಂಬ ಗೊಂದಲದಲ್ಲಿ ಸುಮ್ಮನಾದೆ.

**ಶ್ರಮಿಕರ ಕಾಯಕ ಸಂಸ್ಕೃತಿಯೇ ಮಾನವ ಸಮಾಜದ ಜೀವಾಳ**

ಪರಶುರಾಮ ಅವರನ್ನು ಕಂಡಾಗ ನನಗೆ ಅರ್ನೆಸ್ಟ್ ಹೆಮ್ಮಿಂಗ್ ವೇ ಅವರ "ಓಲ್ಡ್ ಮ್ಯಾನ್ ಆಂಡ್ ದಿ ಸೀ" ಕಾದಂಬರಿಯಲ್ಲಿನ ವೃದ್ಧ ಸಾಂಟಿಯಾಗೊ ಪದೇಪದೇ ನೆನಪಾದ. ಸಾಂಟಿಯಾಗೊ ಒಂದು ಮೀನಾದರೂ ಹಿಡಿದು ತರಲೇಬೇಕೆಂಬ ಛಲದಿಂದ ಪಣತೊಟ್ಟು ದಿನಗಟ್ಟಲೆ ಸಮುದ್ರದ ಮೇಲೆ ಪರಿಶ್ರಮ ಪಟ್ಟರೆ, ಈ ಪರಶುರಾಮ ತನ್ನ ಚಿಂದಿ ಮೂಟೆ ತುಂಬಿಸಲು ಸಮುದ್ರದ ತೀರದಲ್ಲಿ ಪ್ಲಾಸ್ಟಿಕ್ ಹಗ್ಗಗಳನ್ನು ಹುಡುಕುವುದರಲ್ಲಿ ನಿರತರಾಗಿದ್ದಾರೆ. ಇಬ್ಬರಿಗೂ ಈ ಇಳಿ ವಯಸ್ಸಿನಲ್ಲಿಯೂ ಅವರವರ ಬದುಕಿನ ಬಂಡಿ ಸಾಗಿಸುವುದೇ ಒಂದು ಮಹತ್ತರ ಸವಾಲು. ಇಂತಹ ಪರಶುರಾಮರು ಇನ್ನೂ ಕೋಟ್ಯಂತರ ಮಂದಿ, ಎಲ್ಲೋ ಹುಟ್ಟಿ ಎಲ್ಲೋ ಬೆಳೆದು ಎಲ್ಲೋ ಮಣ್ಣಾಗುತ್ತಿದ್ದಾರೆ. ಇವರು ಸಮಾಜದ ಕಣ್ಣಿಗೆ ಅಗೋಚರವಾಗಿದ್ದಾರೆ. ಈ ಶ್ರಮಿಕರಿಗೆ ಅಗತ್ಯವಾದ ಕನಿಷ್ಠ ಮೂಲಭೂತ ಸವಲತ್ತುಗಳನ್ನೂ ಒದಗಿಸಲಾರದ ಅವ್ಯವಸ್ಥೆ ನಮ್ಮದಾಗಿದೆ. ಬಯಲುಸೀಮೆಯಲ್ಲಾದರೂ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಸಮರ್ಪಕವಾಗಿ ಜಾರಿಯಾಗಿದ್ದರೆ ಇವರಂತಹ ಕಾರ್ಮಿಕರು ವೃದ್ಧಾಪ್ಯವನ್ನು ಏಕಾಂಗಿಯಾಗಿ, ಪರಿಚಯವಿಲ್ಲದ ಸ್ಥಳಗಳಲ್ಲಿ, ಗುರುತಿಲ್ಲದಂತೆ ಅಭದ್ರತೆಯಿಂದ ಕಳೆಯಬೇಕಿರಲಿಲ್ಲ. ಏನೇ ಆಗಲಿ, ದುಡಿಯುವ ಜನರ ಈ ಕಾಯಕ ಸಂಸ್ಕೃತಿಯೇ ಮಾನವ ಸಮಾಜದ ಜೀವಾಳ. ಇವರೇ ಯಾವುದೇ ದೇಶವನ್ನು ಕಟ್ಟಿ ಬೆಳೆಸಿರುವುದು ಹಾಗೂ ಜೀವಂತವಾಗಿ ಉಳಿಸಿರುವುದು.

**ಜ್ಯೋತಿ ಎ.**
ಪ್ಲಾಟ್ ನಂ. ಎಸ್–೩, ನಂ. ೩೭, 'ಅನಂತರತ್ನ ರೆಸಿಡೆನ್ಸಿ'
೧೬ನೇ ಮುಖ್ಯರಸ್ತೆ, ವಿಜಯನಗರ
ಬೆಂಗಳೂರು – ೫೬೦ ೦೪೦

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಿಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ಪಾವತಿಸಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

*– ಪ್ರಕಾಶಕ*

# ಪತ್ರಿಕೆ ನಡೆಸುವ ಹಾದಿ ಸುಗಮವಲ್ಲ
## – ಒಂದು ಅನುಭವ




**'ಹೊಸತು' ಈಗ ಭದ್ರವಾಗಿ ನೆಲೆಯೂರಿದೆ. ಓದುಗರ ಬಳಗವನ್ನು ಕಟ್ಟಿಕೊಂಡಿದೆ. ಇನ್ನೆರಡೇ ವರ್ಷದಲ್ಲಿ ಅರವತ್ತು ವರ್ಷ ಪೂರೈಸಲಿರುವ ನವಕರ್ನಾಟಕ ಪ್ರಕಾಶನ ಸಂಸ್ಥೆಯ ಆಸರೆಯಿದೆ. ಇನ್ನೇನು ಬೇಕು?**

**ಸಿ. ಆರ್. ಕೃಷ್ಣರಾವ್**

**'ಹೊಸತು'** ಇಪ್ಪತ್ತನೆ ವರ್ಷಕ್ಕೆ ಕಾಲಿರಿಸುತ್ತಿದೆ. ನವಕರ್ನಾಟಕ ಪ್ರಕಾಶನ ಸಂಸ್ಥೆ ಪ್ರಕಟಿಸುತ್ತಿರುವ ಪ್ರಗತಿಪರ, ವೈಚಾರಿಕ ಮಾಸ ಪತ್ರಿಕೆ 'ನೆಮ್ಮದಿಯ ನಾಳೆ ನಮ್ಮದು' ಎನ್ನುವ ಧ್ಯೇಯಕ್ಕನುಗುಣವಾಗಿ ಮನುಕುಲದ ಸೇವೆ ಮಾಡುತ್ತ ಬಂದಿದೆ. ಜಾಹೀರಾತು ಬೆಂಬಲ ಇಲ್ಲದೆ, ಓದುಗರ ಆಸರೆಯ ಮೇಲೆ ಬೆಳೆದು ಬಂದಿರುವ ಪತ್ರಿಕೆ 'ಹೊಸತು'. ನವಕರ್ನಾಟಕ ಪ್ರಕಾಶನದಂಥ ಪ್ರತಿಷ್ಠಿತ ಸಂಸ್ಥೆಯ ಬೆಂಬಲವಿಲ್ಲದೇ ಹೋಗಿದ್ದರೆ ಪತ್ರಿಕೆ ಎಂದೋ ಕೊನೆಯುಸಿರೆಳೆಯುತ್ತಿತ್ತು. ಕಷ್ಟನಷ್ಟಗಳೇನೇ ಇದ್ದರೂ ಇಂದು ಪತ್ರಿಕೆ ಇಪ್ಪತ್ತನೇ ವರ್ಷಕ್ಕೆ ಕಾಲಿರಿಸುತ್ತಿರುವುದು ಸಂತೋಷದ ಸಂಗತಿ. 'ಹೊಸತು' ಇಂದು ಬೌದ್ಧಿಕ ವಲಯದಲ್ಲಿ, ವೈಚಾರಿಕ, ಚಿಂತನಶೀಲ ಬರಹಗಳ ಮೂಲಕ ವಿಶಿಷ್ಟ ಸ್ಥಾನ ಗಳಿಸಿಕೊಂಡಿದೆ. ಹೊಸ ಲೇಖಕರಿಗೆ ಪ್ರೋತ್ಸಾಹ ನೀಡುತ್ತಿರುವ 'ಹೊಸತು' ಎಡಪಂಥೀಯ ವಿಚಾರಗಳಿಗೆ ಪ್ರಾಧಾನ್ಯತೆ ನೀಡುತ್ತ ಬಂದಿದೆ.

ಇಷ್ಟು ವರ್ಷ ಓದುಗರಿಗೆ ನಿಷ್ಠೆಯಿಂದ ಸೇವೆ ಸಲ್ಲಿಸುತ್ತ ಬಂದಿರುವ 'ಹೊಸತು' ಪತ್ರಿಕೆ ಇನ್ನಷ್ಟು ವರ್ಷ ಮುಂದುವರಿಯಲಿ ಎಂದು ಹಾರೈಸುತ್ತ, ಪತ್ರಿಕೆ ನಡೆಸಿಕೊಂಡು ಹೋಗುವ ಕಷ್ಟ ಕಾರ್ಪಣ್ಯಗಳ ಕುರಿತು ಕೆಲವು ವಿಚಾರಗಳನ್ನು ಹಂಚಿಕೊಳ್ಳಬಯಸುತ್ತೇನೆ. ಮೊದಲೇ ಹೇಳಿರುವ ಹಾಗೆ ಪತ್ರಿಕೆಗೆ ನವಕರ್ನಾಟಕ ಪ್ರಕಾಶನ ಸಂಸ್ಥೆಯೇ ಆಸರೆ. ವರ್ಷಕ್ಕೊಮ್ಮೆ ಜನವರಿ ತಿಂಗಳಲ್ಲಿ ಪ್ರಕಟಿಸುತ್ತ ಬಂದಿರುವ ವಿಶೇಷ ಸಂಚಿಕೆ ಸ್ವಲ್ಪಮಟ್ಟಿಗೆ ಪ್ರತಿ ತಿಂಗಳ ನಷ್ಟವನ್ನು ಭರಿಸಿದರೂ, ಒಟ್ಟಾರೆ 'ಹೊಸತು'ವಿನಂಥ ಪತ್ರಿಕೆಯನ್ನು ನಡೆಸಿಕೊಂಡು ಹೋಗುವುದು ಒಂದು ಸಾಹಸವೆ. 'ಹೊಸತು' ಸಂಪಾದಕ ಮಂಡಲಿಯ ಸದಸ್ಯನಾಗಿ, ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸ್ಥಾಪಕ ನಿರ್ದೇಶಕನಾಗಿ, ಆರು ದಶಕಗಳಿಗೂ ಹೆಚ್ಚು ಕಾಲದಿಂದ ಪತ್ರಕರ್ತನಾಗಿ ನನ್ನ ಅನುಭವಕ್ಕೆ ಬಂದ ಕೆಲವು ಸಂಗತಿಗಳನ್ನು ಓದುಗರ ಗಮನಕ್ಕೆ ತರಬಯಸುತ್ತೇನೆ.

ಸ್ವತಂತ್ರವಾಗಿ ಪತ್ರಿಕೆ ನಡೆಸಿ ಕೈ ಸುಟ್ಟುಕೊಂಡ ಹಲವರ ಪೈಕಿ ನಾನೂ ಒಬ್ಬ. ಪತ್ರಿಕಾರಂಗ ಪ್ರವೇಶಿಸಿದ್ದೇ 'ಜನಶಕ್ತಿ' ವಾರಪತ್ರಿಕೆಯ ಮೂಲಕ ಸಹ ಸಂಪಾದಕನಾಗಿ. ಆದರೆ ಹಣಕಾಸಿನ ಮುಗ್ಗಟ್ಟಿನಿಂದಾಗಿ ಪತ್ರಿಕೆ ನಿಂತು ಹೋದ ಮೇಲೆ ಕಮ್ಯುನಿಸ್ಟ್ ಪಕ್ಷದ ಮುಖಪತ್ರವಾಗಿದ್ದ ಈ ಪತ್ರಿಕೆ ಪುನರಾರಂಭವಾದ್ದು ೧೯೫೭ರ ನವೆಂಬರ್ ಒಂದರಂದು. ಸಂಪಾದಕನ ಪಟ್ಟ ವಹಿಸಿಕೊಂಡ ನನ್ನ ಮೇಲೆ ಪತ್ರಿಕೆ ನಡೆಸಿಕೊಂಡು ಹೋಗುವ ಜವಾಬ್ದಾರಿ ಕೂಡ ಬಿತ್ತು. ವಾರ ಮುಗಿಯುತ್ತಿದ್ದ ಹಾಗೆ ಇನ್ನೊಂದು ವಾರಕ್ಕೆ ಅಣಿಯಾಗುವುದರ ಜೊತೆಗೆ ಪತ್ರಿಕೆಗೆ ಬೇಕಾದ ಕಾಗದ ವ್ಯವಸ್ಥೆ ಮಾಡುವುದೂ ಇತ್ತು. ಆ ದಿನಗಳಲ್ಲಿ ಪತ್ರಿಕೆ ಅಚ್ಚು ಮಾಡಲು ಬಳಸುತ್ತಿದ್ದ ಕಾಗದ 'ನ್ಯೂಸ್‌ಪ್ರಿಂಟ್' ಕಾಳ ಸಂತೆಯಲ್ಲಿ ಖರೀದಿಸಬೇಕಾಗಿತ್ತು. ಪತ್ರಿಕೆಗಳಿಗೆ ಕೆನಡ, ಸ್ವೀಡನ್, ಚೀಣಾ ನ್ಯೂಸ್ ಪ್ರಿಂಟ್ ಆಮದು ಮಾಡಿಕೊಳ್ಳಲು ಸರಕಾರ ಲೈಸನ್ಸ್ ನೀಡುತ್ತಿತ್ತು ಪತ್ರಿಕೆಯ ಪ್ರಸಾರಕ್ಕನುಗುಣವಾಗಿ. ವಿದೇಶಿ ವಿನಿಮಯ ಕೊರತೆ ಇದ್ದ ಕಾಲ ಅದು. ಹೇಗೋ ದುಡ್ಡು ಹವಣಿಸಿ ನಿಭಾಯಿಸಬೇಕಾಗಿತ್ತು. ಪತ್ರಿಕೆ ಪಾರ್ಟಿ ಹೋಳಾಗುವವರೆಗೆ ಮುಂದುವರಿದು ನಿಂತುಹೋಯಿತು.

ಪ್ರತಿಯೊಬ್ಬ ಪತ್ರಕರ್ತನಿಗೂ ಸ್ವತಂತ್ರವಾದ ಅಭಿವ್ಯಕ್ತಿಗಾಗಿ ತನ್ನದೇ ಪತ್ರಿಕೆ ತರುವ ಹಂಬಲ ಇರುತ್ತದೆ. ಅದಕ್ಕೆ ಅಗತ್ಯವಾದ ಬಂಡವಾಳ, ಬೆಂಬಲವಿಲ್ಲದೆ ಸಾಧ್ಯವಿಲ್ಲ. ಈಗಂತೂ ಪ್ರಿಂಟ್ ಮಾಧ್ಯಮದ ಜೊತೆಗೆ ಇಲೆಕ್ಟ್ರಾನಿಕ್ ಕೂಡ ಸೇರಿದೆ. ಭಾರಿ ಬಂಡವಾಳವಿಲ್ಲದೆ ಪತ್ರಿಕೆ ನಡೆಸುವುದು ಅಸಾಧ್ಯವಾಗಿದೆ. ಹಿಂದೆ ಪತ್ರಿಕೆ ಪ್ರಾರಂಭಿಸುವುದಕ್ಕೆ ಅಷ್ಟು ಬಂಡವಾಳ ಬೇಕಿರಲಿಲ್ಲ. ಪತ್ರಿಕೆ ಪ್ರಾರಂಭಿಸುವುದು ಸುಲಭವಾಗಿತ್ತು, ಆದರೆ ನಡೆಸಿಕೊಂಡು ಹೋಗುವುದು ಕಷ್ಟವಾಗಿತ್ತು. ತಡೆದುಕೊಳ್ಳುವ ಶಕ್ತಿ ಇಲ್ಲದೆ ಮುಚ್ಚಿ ಹೋದ ಪತ್ರಿಕೆಗಳೆಷ್ಟೋ, ಇದ್ದು ಬದ್ದದ್ದೆಲ್ಲವನ್ನೂ ಕಳೆದುಕೊಂಡವರೆಷ್ಟೋ. 'ತಾಯಿ ನಾಡು', 'ವಿಶ್ವ ಕರ್ನಾಟಕ', 'ಪ್ರಜಾಮತ', 'ಚಿತ್ರಗುಪ್ತ', 'ದೇಶ ಬಂಧು', 'ಪೌರವಾಣಿ' ಮೊದಲಾದ ಪತ್ರಿಕೆಗಳ ಕೊನೆಯ ದಿನಗಳನ್ನು ನಾನು ಕಣ್ಣಾರೆ ಕಂಡಿದ್ದೇನೆ. ಆದರೂ ಪತ್ರಿಕೆ ನಡೆಸುವ ಸಾಹಸ ಮಾತ್ರ ಮುಂದುವರಿಯುತ್ತಿದೆ. ಸಣ್ಣ ಪತ್ರಿಕೆಗಳು ಅನುಭವಿಸುತ್ತಿರುವ ತೊಂದರೆಗಳನ್ನು ನಾನು ಬಲ್ಲೆ. ಕನ್ನಡದಲ್ಲಿ ಸಹಕಾರಿ ಸಂಸ್ಥೆಯ ರೀತ್ಯ ಪತ್ರಿಕೆ ನಡೆಸುವ ಸಾಹಸ ದೇಶದಲ್ಲೇ ಮೊದಲು ಎಂದು ನಾನು ಎಣಿಸಿದ್ದೇನೆ. ಅದು 'ಚಿತ್ರಗುಪ್ತ' ವಾರಪತ್ರಿಕೆ. ಆಗ ಪತ್ರಕರ್ತರನೇಕರು ಈ ಸಹಕಾರಿ ಪ್ರಯತ್ನದಲ್ಲಿ ಕೈ ಜೋಡಿಸಿದ್ದರು. ಇನ್ನೊಂದು ಪ್ರಯತ್ನ ಮದರಾಸಿ (ಈಗ ಚೆನ್ನೈ)ನಲ್ಲಿ ನಡೆದಿತ್ತು. ಪತ್ರಕರ್ತರ ವೇತನ ನಿಗದಿಗೆ ಮೂಲ, ಟ್ರೇಡ್ ಯೂನಿಯನ್ ಕಾಯಿದೆ ಅನ್ವಯವಾಗುವಂತೆ ವಿಶೇಷ ಕಾನೂನಿಗೆ ಮೂಲ ಸ್ವಾತಂತ್ರ್ಯಾನಂತರ ನ್ಯಾಯಮೂರ್ತಿ ರಾಜಾಧ್ಯಕ್ಷ ಸಮಿತಿಯ ವರದಿ. ಈ ಸಮಿತಿ ತನ್ನ ವರದಿಯಲ್ಲಿ

ಪತ್ರಿಕಾಮಾಧ್ಯಮ ದೊಡ್ಡ ಬಂಡವಾಳಗಾರರ ಕೈವಶವಾಗುವ ಬಗ್ಗೆ ಎಚ್ಚರಿಕೆ ನೀಡಿತ್ತು. ಈಗ ಅದು ನಿಜವಾಗಿದೆ. ಇಂದು ಮಾಧ್ಯಮ ಸಂಪೂರ್ಣವಾಗಿ ದೊಡ್ಡ ಬಂಡವಾಳಗಾರರ ಒಡೆತನಕ್ಕೆ ಬಂದಿದೆ. ಈಗ ಪತ್ರಿಕಾರಂಗದಲ್ಲಿ, ಇಲೆಕ್ಟ್ರಾನಿಕ್ ಮಾಧ್ಯಮದಲ್ಲಿ ಸಾಕಷ್ಟು ಸಂಖ್ಯೆಯ ಪತ್ರಕರ್ತರಿದ್ದಾರೆ. ಕೈತುಂಬ ಸಂಪಾದಿಸುತ್ತಾರೆ. ಒಂದು ಕಾಲದಲ್ಲಿ ಪತ್ರಕರ್ತ ಎಂದು ಹೇಳಿಕೊಂಡರೆ, ಊಟಕ್ಕೇನುಮಾಡುತ್ತಿ ಎಂದು ಕೇಳುತ್ತಿದ್ದುದುಂಟು. ಆದರ್ಶದ ಬೆನ್ನೇರಿ, ಅಭಿವ್ಯಕ್ತಿ ಸ್ವಾತಂತ್ರ್ಯ ಪ್ರತಿಪಾದಕನೇ ಪತ್ರಕರ್ತನಾಗುತ್ತಿದ್ದ ಕಾಲ ಬಂದಿತ್ತು. ಈಗ ಎಲ್ಲ ವೃತ್ತಿಗಳಂತೆಯೇ ಆಗಿಬಿಟ್ಟಿದೆ ಅದು.

ಅರವತ್ತರ ದಶಕದಲ್ಲಿ ಆದ ಒಂದು ಅನುಭವ. ಅದು ಕಹಿಯೇ ಆಗಿದ್ದರೂ, ಹಿಂತಿರುಗಿ ನೋಡಿದಾಗ ಅಮೂಲ್ಯ ಎನಿಸುತ್ತದೆ. ಕೈಯ್ಯಲ್ಲಿ ಬಂಡವಾಳ ಇಲ್ಲದಿದ್ದರೂ ಯೌವ್ವನದ ಉತ್ಸಾಹಕ್ಕೇನೂ ಕಡಿಮೆ ಇರಲಿಲ್ಲ. ನಾನು ಮತ್ತು ನಾಲ್ಕು ಮಂದಿ ಪತ್ರಕರ್ತರು ಸೇರಿ ಸ್ವತಂತ್ರರಾಗುವ ಲೆಕ್ಕಾಚಾರ ಹಾಕಿ ಸ್ವಂತ ಪತ್ರಿಕೆ ನಡೆಸುವ ಸಾಹಸಕ್ಕಿಳಿದೆವು. ಮೊದಲು ಸ್ವಾಧೀನಪಡಿಸಿಕೊಂಡದ್ದು 'ನಗುವ ನಂದ' ಮಾಸಪತ್ರಿಕೆ. ಆ ಸಮಯದಲ್ಲಿ ಡಾ|| ಶಿವರಾಮ ನಡೆಸುತ್ತಿದ್ದ 'ಕೊರವಂಜಿ' ಜನಪ್ರಿಯ ಮಾಸ ಪತ್ರಿಕೆ ಇಪ್ಪತ್ತೈದು ವರ್ಷ ಮುಗಿಯುತ್ತಿದ್ದಂತೆಯೇ ನಿಲ್ಲಿಸುವುದಾಗಿ ಪ್ರಕಟಿಸಿದ್ದರು. ಅವರು ಹೇಳಿದ ಮಾತು ಈಗಲೂ ನೆನಪಿದೆ. ನಾವು ಅವರ ಮುಂದೆ ಹುಡುಗರು. ಪತ್ರಿಕೆ ನಿಲ್ಲಿಸದೆ 'ನಗುವ ನಂದ' ಸೇರಿಸಿ ನಾವು ನಡೆಸಿಕೊಂಡು ಹೋಗಲು ಮುಂದಾದೆವು. ಅವರು ನಕ್ಕು ನಮಗೆ ಹೇಳಿದರು. "ನೀವಿನ್ನೂ ಯುವಕರು, ನಾನು 'ಕೊರವಂಜಿ'ಯನ್ನು ೨೫ ವರ್ಷ ನಡೆಸಿದ್ದೇನೆ. ಅದರ ಕಷ್ಟ ಏನು ಎಂಬುದನ್ನು ನಾನು ಬಲ್ಲೆ. 'ಕೊರವಂಜಿ'ಯನ್ನು ಕಾಡಿಗೆ ಅಟ್ಟುತ್ತೇನೇ ಹೊರತು ನಿಮ್ಮ ಕೈಗೆ ಹಾಕುವುದಿಲ್ಲ." ಇದಾದನಂತರ ಆದದ್ದೇ ಬೇರೆ. 'ಕೊರವಂಜಿ' ಕಾಡಿಗೆ ಹೋದರೆ, 'ನಗುವ ನಂದ' ಅಳುಮೋರೆಯಾಗಿ ನಿಂತೇ ಹೋಯಿತು ಕೆಲವೇ ತಿಂಗಳುಗಳಲ್ಲಿ. ಅನಂತರದ ಸಾಹಸವೇ 'ಮೇನಕಾ' ಸಿನಿಮಾ ವಾರಪತ್ರಿಕೆ. ಸಾಕಷ್ಟು ಕಷ್ಟ, ನಷ್ಟ ಅನುಭವಿಸಿ, ಸಾಲದ ಹೊರೆ ಹೊತ್ತುಕೊಂಡು ನಿಲ್ಲಿಸಿದ್ದಾಯಿತು. ಅದು ಬೇರೆಯೇ ಅನುಭವ. ಇವೆಲ್ಲ ಹಳೆಯ ನೆನಪುಗಳು.

'ಹೊಸತು' ಈಗ ಭದ್ರವಾಗಿ ನೆಲೆಯೂರಿದೆ. ಓದುಗರ ಬಳಗವನ್ನು ಕಟ್ಟಿಕೊಂಡಿದೆ. ಇನ್ನೆರಡೇ ವರ್ಷದಲ್ಲಿ ಅರವತ್ತು ವರ್ಷ ಪೂರೈಸಲಿರುವ ನವಕರ್ನಾಟಕ ಪ್ರಕಾಶನ ಸಂಸ್ಥೆಯ ಆಸರೆಯಿದೆ. ಇನ್ನೇನು ಬೇಕು?

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫




ನವಕರ್ನಾಟಕ ಪ್ರಕಟಿಸಿರುವ ಡಾ|| ಜಿ. ರಾಮಕೃಷ್ಣರವರ ಮಹತ್ವದ ಕೃತಿ 'ಭಗವದ್ಗೀತೆ – ಒಂದು ಅವಲೋಕನ' ವನ್ನು ದಿನಾಂಕ ೧೭–೬–೨೦೧೮ರಂದು ಬೆಂಗಳೂರಿನ ಜ್ಯೋತಿ ಬಸು ಸಭಾಂಗಣದಲ್ಲಿ ಶ್ರೀ ಸಿ. ಆರ್. ಕೃಷ್ಣರಾವ್ ಬಿಡುಗಡೆ ಮಾಡಿದರು. ವೇದಿಕೆಯಲ್ಲಿ ಡಾ|| ಎಚ್. ವಿ. ವೇಣುಗೋಪಾಲ್ (ಕೃತಿ ಪರಿಚಯಿಸಿದವರು), ಶ್ರೀ ಸಿ. ಆರ್. ಕೃಷ್ಣರಾವ್, ಡಾ|| ಜಿ. ರಾಮಕೃಷ್ಣ, ಡಾ|| ಸುಭಾಷ್ ರಾಜಮಾನೆ ಮತ್ತು ಡಾ|| ಸಿದ್ದನಗೌಡ ಪಾಟೀಲ ಅವರು ಉಪಸ್ಥಿತರಿದ್ದರು.



# "ಪ್ರತ್ಯೇಕ ಬುದ್ಧ ಅಲ್ಲಮ ಪ್ರಭು"

ನಾನು ಓದಿದ ಪುಸ್ತಕ

## – ಕೃತಿಯ ಅವಲೋಕನ




ಲೇಖಕರು : **ಎಸ್. ನಟರಾಜ ಬೂದಾಳು**

ಪುಟ : xvi+೧೪೦ ಬೆಲೆ : ರೂ. ೧೩೦/–

ಪ್ರಕಾಶನ:
**ಪಲ್ಲವ ಪ್ರಕಾಶನ**
ಚೆನ್ನಪಟ್ಟಣ ಪೋಸ್ಟ್
ಬಳ್ಳಾರಿ – ೫೮೩೧೧೩

**ಕ**ನ್ನಡದ ಸಾಹಿತ್ಯ ಮತ್ತು ಸಾಂಸ್ಕೃತಿಕ ಜಗತ್ತಿನಲ್ಲಿ ತಮ್ಮದೇ ಆದ ವಿಶಿಷ್ಟ ಚಿಂತನೆಗಳ ಮೂಲಕ ಮುಂಚೂಣಿಯಲ್ಲಿರುವ ನಮ್ಮ ನಡುವಿನ ಚಿಂತಕ ಡಾ॥ ಎಸ್. ನಟರಾಜ ಬೂದಾಳು ಅವರು ದೇಶಿ ಜ್ಞಾನ ಪರಂಪರೆಯ ವಕ್ತಾರರಂತೆ ತಮ್ಮನ್ನು ತಾವು ತೊಡಗಿಸಿಕೊಂಡು ನೆಲಮೂಲ ಸಂಸ್ಕೃತಿಯ ಹುಡುಕಾಟದಲ್ಲಿ ನಿರಂತರವಾಗಿ ಕ್ರಿಯಾಶೀಲರಾಗಿದ್ದಾರೆ. ಈಗಾಗಲೇ ಬೌದ್ಧ ಧರ್ಮದ ತಾತ್ವಿಕ ನೆಲೆಗಳನ್ನು ನಿಖರವಾಗಿ ಗುರುತಿಸುವುದರೊಂದಿಗೆ ನಾಗಾರ್ಜುನ ಮೂಲ ಮಧ್ಯಮಕಾರಿಕಾ ಮತ್ತು ಸರಹಪಾದ, ನಾಗಾರ್ಜುನ, ಅಲ್ಲಮ ಪ್ರಭು ಒಂದು ತೌಲನಿಕ ಅಧ್ಯಯನ ಹಾಗೂ ಕನ್ನಡ ಕಾವ್ಯ ಮೀಮಾಂಸೆ ಮುಂತಾದ ಕೃತಿಗಳನ್ನು ನಮ್ಮ ಮುಂದಿರಿಸಿದ್ದಾರೆ. ನಟರಾಜ ಬೂದಾಳರ ಚಿಂತನೆಯ ವೈಶಿಷ್ಟ್ಯವೆಂದರೆ, ಅವರು ಈವರೆಗೆ ನಮ್ಮ ಮುಂದಿದ್ದ ಸಿದ್ಧ ಮಾದರಿಗಳನ್ನು ತಿರಸ್ಕರಿಸಿ, ಹೊಸದಾದ ಹಾಗೂ ಗಟ್ಟಿಯಾದ ದೇಶಿ ಚಿಂತನಾ ಮಾದರಿಯ ಮೂಲಕ ಕನ್ನಡದ ಸಂಸ್ಕೃತಿಗೆ ಭದ್ರ ಬುನಾದಿಯನ್ನು ಹಾಕಿದ್ದಾರೆ.

ಪ್ರಜ್ಞಾಪೂರ್ವಕವಾಗಿ ನಾವು ಈವರೆಗೆ ನಂಬಿಕೊಂಡು ಬಂದಿದ್ದ ಭಾರತೀಯ ಕಾವ್ಯ ಮೀಮಾಂಸೆಗೆ ಪರ್ಯಾಯವಾಗಿ ಅವರು ನಮ್ಮೆದುರು ತೆರೆದು ತೋರುವ ನಮ್ಮ ಕನ್ನಡದ ತತ್ವಪದಕಾರರ ಹಾಡುಗಳು ಮತ್ತು ಅಲ್ಲಮನ ವಚನಗಳು ಬೆರಗು ಮೂಡಿಸುತ್ತವೆ. ಯಾವುದೇ ಬೌದ್ಧಿಕ ಅಹಂ ಇಲ್ಲದೆ ಆಧಾರ ಸಹಿತವಾಗಿ ಬೂದಾಳರು ನಮ್ಮ ಮುಂದಿಡುವ ದಾಖಲೆಗಳು ನಾವು ಕಳೆದುಕೊಂಡ ನಮ್ಮ ಪೂರ್ವಿಕರ ಜ್ಞಾನಶಿಸ್ತುವಿಗೆ ಕೈ ದೀವಿಗೆಯಂತೆ ಗೋಚರವಾಗುತ್ತವೆ. ಏಕೆಂದರೆ, ನಾವು ಈವರೆಗೆ ನಮ್ಮೆಲ್ಲಾ ಚಿಂತನಾ ಮಾದರಿಗಳನ್ನು ಉತ್ತರದ ಮೂಲಕವಾಗಿ ಕಟ್ಟಿಕೊಳ್ಳುತ್ತಾ, ನಮ್ಮ ನೆಲದಡಿಯ ಅಗಣಿತ ಜ್ಞಾನಶಿಸ್ತುವನ್ನು ಶೋಧಿಸಲಾರದ ವಿಸ್ಮೃತಿಗೆ ದೂಡಲ್ಪಟ್ಟಿದ್ದೆವು. ಹಾಗಾಗಿ ನಟರಾಜ ಬೂದಾಳರ ಪ್ರತಿಯೊಂದು ಕೃತಿಯೂ ನಾವು ನಡೆಯಬೇಕಾಗಿರುವ ಹೊಸ ಹಾದಿಗೆ ಮಾರ್ಗಸೂಚಿಯಂತೆ ಕಾಣುತ್ತದೆ. ಇತ್ತೀಚೆಗೆ ಪ್ರಕಟವಾಗಿರುವ ಅವರ "ಪ್ರತ್ಯೇಕ ಬುದ್ಧ ಅಲ್ಲಮ ಪ್ರಭು" ಎನ್ನುವ ಕೃತಿಯು ನಮಗೆ ಹನ್ನೆರಡನೆಯ ಶತಮಾನದ ವಚನಕಾರ ಹಾಗೂ ಪ್ರಖರ ಚಿಂತಕ ಅಲ್ಲಮ ಪ್ರಭುವಿನ ಪ್ರತಿಭೆಯ ವಿಶ್ವರೂಪವನ್ನು ಅನಾವರಣಗೊಳಿಸುವ ಅಮೂಲ್ಯ ಕೃತಿಯಾಗಿದೆ.

ಕನ್ನಡದ ಸಾಹಿತ್ಯ ಲೋಕಕ್ಕೆ ಬಸವಯುಗದ ವಚನಕಾರರು ಮತ್ತು ವಚನಕಾರ್ತಿಯರು ಹೊಸಬರೇನಲ್ಲ. ಅವರುಗಳ ವಚನಗಳ ವ್ಯಾಖ್ಯಾನ, ಮರು ವ್ಯಾಖ್ಯಾನ ನಿರಂತರವಾಗಿ ನಡೆಯುತ್ತಲೇ ಬಂದಿದೆ. ಅದರಲ್ಲೂ ವಿಶೇಷವಾಗಿ ಪ್ರಜ್ಞಾವಂತ ಓದುಗರಿಗೆ, ಬರಹಗಾರರು ಹಾಗೂ ಕವಿಗಳಿಗೆ ಅಲ್ಲಮ ಪ್ರಭುವಿನ ವಚನಗಳ ಕುರಿತು ಮತ್ತು ಆತನ ಪ್ರಖರ ಚಿಂತನೆ ಹಾಗೂ ಶಬ್ದ ಸಂಪತ್ತು ಕುರಿತು ಇನ್ನಿಲ್ಲದ ಆಸಕ್ತಿ ಇರುವುದು ಗಮನಾರ್ಹ ಸಂಗತಿ. ಅಲ್ಲಮ ಕನ್ನಡದ ಪಾಲಿಗೆ ಅಗೆದಷ್ಟು ಸಿಗುತ್ತಲೇ ಇರುವ ನಿಧಿಯಂತಾಗಿದ್ದಾನೆ. ಹಾಗಾಗಿ ಅಲ್ಲಮನ ಕುರಿತಂತೆ ನಿರಂತರವಾಗಿ ಅಧ್ಯಯನಗಳು ನಡೆಯುತ್ತಲೇ ಇವೆ. ಚಾಮರಸನ ಪ್ರಭುಲಿಂಗ ಲೀಲೆ ಮತ್ತು ನಾಲ್ಕು ಶೂನ್ಯ ಸಂಪಾದನೆಗಳ ಮೂಲಕ ಈ ಪರಂಪರೆ ಆರಂಭಗೊಂಡು, ೧೯೭೦ರ ದಶಕದಲ್ಲಿ ಕುಣಿಗಲ್ ತಾಲ್ಲೂಕಿನ ಹಳೆಯೂರು ಗ್ರಾಮದ ವಿಜಯಕುಮಾರ್ ಎಂಬುವರಿಂದ ಆರಂಭವಾದ ಅಧ್ಯಯನ, ಡಾ॥ ಎಲ್. ವೃಷಭೇಂದ್ರ ಸ್ವಾಮಿಯವರ ಪಿಹೆಚ್.ಡಿ. ಅಧ್ಯಯನದ ಮೂಲಕ ಮುಂದುವರಿದು; ಮುಂಡರಗಿಯ ಅನ್ನದಾನೇಶ್ವರ ಮಠ, ಬಿಜಾಪುರದ ಜ್ಞಾನಯೋಗಾಶ್ರಮದ ಸಿದ್ದೇಶ್ವರ ಸ್ವಾಮಿಗಳು, ಡಾ॥ ಎಲ್. ಬಸವರಾಜು ಸೇರಿದಂತೆ ಅನೇಕ ವಿದ್ವಾಂಸರಿಂದ ವ್ಯಾಖ್ಯಾನಗೊಂಡಿತು. ಆನಂತರ ನಾಡಿನ ಪ್ರಮುಖ ಸಾಂಸ್ಕೃತಿಕ ಚಿಂತಕರಲ್ಲಿ ಒಬ್ಬರಾಗಿದ್ದ ಡಾ॥ ಡಿ. ಆರ್. ನಾಗರಾಜ್ ಅವರ "ಅಲ್ಲಮ ಪ್ರಭು ಮತ್ತು ಶೈವ ಪ್ರತಿಭೆ" ಕೃತಿಯ ಮೂಲಕ ಅಲ್ಲಮನ ಇನ್ನೊಂದು ಜಗತ್ತು ಕನ್ನಡದ ಸಾಂಸ್ಕೃತಿಕ ಲೋಕದೆದುರು ಅನಾವರಣಗೊಂಡರೂ ಸಹ ಅಲ್ಲಮ ಇನ್ನೂ ಪೂರ್ತಿಯಾಗಿ ಯಾರಿಗೂ ದಕ್ಕಿಲ್ಲ ಎಂಬ ಅತೃಪ್ತಿ ಪ್ರಜ್ಞಾವಂತರನ್ನು ಕಾಡುತ್ತಲೇ ಇತ್ತು. ಇದೀಗ ಬೂದಾಳರ ಈ ಕೃತಿಯು ಡಿ. ಆರ್. ನಾಗರಾಜ್ ಅವರ ಕೃತಿಯ ಮುಂದುವರಿದ ಅಧ್ಯಯನ ಎಂಬಂತೆ ಕಾಣುತ್ತದೆ. ಏಕೆಂದರೆ, ನಾಗರಾಜ್ ಅವರು ಅಲ್ಲಮನನ್ನು ಕಾಶ್ಮೀರದ ಶೈವ ಪಂಥದೊಂದಿಗೆ ಸಮೀಕರಿಸಿ ಅಧ್ಯಯನ ಮಾಡಿದ್ದರು. ಆದರೆ, ಈ ಕೃತಿಯಲ್ಲಿ ಬೂದಾಳರು ಅದಕ್ಕೂ ಹಿಂದೆ ಹೋಗಿ ಬೌದ್ಧರ ತಾತ್ವಿಕ ನೆಲೆಗಳೊಂದಿಗೆ ಮತ್ತು ದೇಶದ ಇತರೆ ಅನುಭಾವಿ ಪರಂಪರೆಗಳೊಂದಿಗೆ ಅಲ್ಲಮನ ಚಿಂತನೆಗಳನ್ನು ಇಟ್ಟು ಚರ್ಚೆ ಮಾಡುವುದರ ಮೂಲಕ ಕನ್ನಡದ ಚಿಂತನಾ ಜಗತ್ತನ್ನು ವಿಸ್ತರಿಸಿದ್ದಾರೆ.

ಅಲ್ಲಮ ಪ್ರಭು ಭಾರತೀಯ ಶ್ರಮಣಧಾರೆಗಳಲ್ಲಿ ಎದ್ದು ಕಾಣುವ ವ್ಯಕ್ತಿತ್ವ. ಏಕೆಂದರೆ ಅವನು ಕನ್ನಡದ ನೆಲದಲ್ಲಿ ಹುಟ್ಟಿ ಉತ್ತರದ ನೆಲದಲ್ಲಿ ನಡೆದಾಡುತ್ತಾ ಎಲ್ಲಾ ಅನುಭವಗಳನ್ನು ದಕ್ಕಿಸಿಕೊಂಡವನು. ಅಲ್ಲಿನ ಜೈನ, ಬೌದ್ಧ, ಕಾಳಾಮುಖ, ಸಿದ್ಧ, ನಾಥ, ಚಾರ್ವಾಕ ಪರಂಪರೆಯ ಜೊತೆ ಒಡನಾಡಿ ಅವೆಲ್ಲವುಗಳನ್ನು ಒರೆಗಲ್ಲಿಗೆ ಹಚ್ಚಿದವನು. ಹಾಗಾಗಿ ಕನ್ನಡದಲ್ಲಿ ನಡೆದಿರಬಹುದಾದ ಬಹುತೇಕ ಅನುಸಂಧಾನಗಳು ಅಲ್ಲಮನ ಬೆಳಕಿನಲ್ಲಿ ನಡೆದಿವೆ ಎನ್ನುವ ಲೇಖಕರ ಮಾತುಗಳನ್ನು ಆಧಾರವಾಗಿ ಇಟ್ಟುಕೊಂಡು ಬುದ್ಧನ ಮಧ್ಯಮ ಮಾರ್ಗ, ಅಲ್ಲಮನ ನಿರಸನ ಮಾರ್ಗ, ಝೆನ್ ಮತ್ತು ಸೂಫಿ ಪರಂಪರೆ, ಕೊಡೆಕಲ್ಲು ಹಾಗೂ ಮಂಟೆ ಸ್ವಾಮಿ ಪರಂಪರೆಗಳನ್ನು ಅವಲೋಕಿಸಿದಾಗ ಇವೆಲ್ಲವೂ ಆಯಾ ಧರ್ಮಗಳ ವಿರುದ್ಧ ನಡೆದ ಆಂತರಿಕ ಬಂಡಾಯ ಎಂಬುದನ್ನು ನಾವು ಮನದಟ್ಟು ಮಾಡಿಕೊಳ್ಳಬಹುದು. ಈ ಕೃತಿಯಲ್ಲಿ ಹನ್ನೆರಡು

**ಡಾ॥ ಎನ್. ಜಗದೀಶ್ ಕೊಪ್ಪ**

ಅಧ್ಯಾಯಗಳಿದ್ದು ಇವುಗಳಲ್ಲಿ ಅಲ್ಲಮನು ಕೇಂದ್ರ ವ್ಯಕ್ತಿಯಾಗಿದ್ದಾನೆ. ಅಲ್ಲಮ ಮತ್ತು ಝೆನ್, ವಿಮಲಕೀರ್ತಿ ಮತ್ತು ಅಲ್ಲಮಪರಂಪರೆ, ಸರಹಪಾದ ಮತ್ತು ಅಲ್ಲಮ ಪ್ರಭು, ಅಲ್ಲಮ ಪ್ರಭು ಮತ್ತು ಅಶ್ವಘೋಷ, ಅಲ್ಲಮ ಪ್ರಭು ಮತ್ತು ಅನುಭಾವಿಕ ನೆಲೆಗಳು, ಬೌದ್ಧಧರ್ಮ ಮತ್ತು ಅಲ್ಲಮ ಪ್ರಭು, ಕನ್ನಡ ಕಾವ್ಯ ಮೀಮಾಂಸೆ ಮತ್ತು ಅಲ್ಲಮ, ಅಲ್ಲಮ ಪ್ರಭು ಮತ್ತು ಪ್ರಸ್ತುತತೆ ಹೀಗೆ – ಹಲವು ಆಯಾಮಗಳಲ್ಲಿ ಅಲ್ಲಮನ ತಾತ್ವಿಕತೆಯನ್ನು ಚರ್ಚಿಸಿರುವುದು ಲೇಖಕರ ಆಳವಾದ ಹಾಗೂ ಶ್ರದ್ಧೆಯಿಂದ ಕೂಡಿದ ಅಧ್ಯಯನ ಓದುಗರಿಗೆ ಮನದಟ್ಟಾಗುತ್ತದೆ. ಈ ಕೃತಿಯಲ್ಲಿನ ವಿಮಲಕೀರ್ತಿ ಮತ್ತು ಅಲ್ಲಮ ಎಂಬ ಅಧ್ಯಾಯದಲ್ಲಿನ ವಿಷಯ ಅತ್ಯಂತ ಕುತೂಹಲಕಾರಿಯಾಗಿದೆ. ಏಕೆಂದರೆ, ಕ್ರಿಸ್ತ ಪೂರ್ವದ ಬುದ್ಧನ ಕಾಲದಲ್ಲಿ ಬದುಕಿದ್ದವನು ಎಂದು ಹೇಳಲಾಗುವ ವಿಮಲಕೀರ್ತಿ ಮತ್ತು ಅಲ್ಲಮನ ವಚನಗಳ ನಡುವೆ ಇರುವ ಸಾಮ್ಯತೆಯನ್ನು ಲೇಖಕರು ಇಲ್ಲಿ ಎತ್ತಿ ತೋರಿಸಿದ್ದಾರೆ. ಲೇಖಕರೇ ಹೇಳುವ ಹಾಗೆ "ಅಲ್ಲಮನ ಮಾರ್ಗವೆಂದರೆ ಮತ್ತೇನೊ ಒಂದನ್ನು ಪಡೆಯುವುದಲ್ಲ, ಬದಲಿಗೆ, ಇರುವ ಕೇಡನ್ನು ದೂರವಾಗಿಸಿಕೊಳ್ಳುವ ಪ್ರಯತ್ನ. ಕನ್ನಡದ ನಿಜದನಿಯನ್ನು ಹಾಗೂ ಕನ್ನಡದ ಮೀಮಾಂಸೆಯನ್ನು ಕಂಡುಕೊಳ್ಳಲು ಇರುವ ಮಾರ್ಗ." ಈ ಕೃತಿಯನ್ನು ಓದಿದಾಗ ಈ ಮಾತು ಸತ್ಯವೆಂಬುದು ನಮ್ಮ ಅರಿವಿಗೆ ಬರುತ್ತದೆ. ಏಕೆಂದರೆ, ಅಲ್ಲಮನೆಂಬುದು ಪರಂಜ್ಯೋತಿ ಮತ್ತು ಜಂಗಮಪ್ರಜ್ಞೆ ಎಲ್ಲಿಯೂ ನಿಲ್ಲದೆ ನಿರಂತರವಾಗಿ ದಾಟಬೇಕಾದ ಸ್ಥಿತಿ. ಅಲ್ಲಮನನ್ನು ಕೇವಲ ಒಬ್ಬ ಶರಣನಾಗಿ, ವಚನಕಾರನಾಗಿ, ಅನುಭಾವಿ ಪಂಥದ ಪಥಿಕನಾಗಿ ನೋಡುವ ಬದಲು ಈ ಕೃತಿಯಲ್ಲಿ ಲೇಖಕರು ಅಲ್ಲಮನನ್ನು ನಾಥ ಪಂಥದವರ ಅಲ್ಲಮನಾಥನಾಗಿ, ವಚನಕಾರರ ಶೂನ್ಯ ಸಿಂಹಾಸನದ ಪೀಠಾಧಿಪತಿಯಾಗಿ, ಸೂಫಿಗಳ ಪಾಲಿನ ಆಲಂಪ್ರಭುವಾಗಿ, ತತ್ವಪದಕಾರರ ಪಾಲಿನ ಶಿವನಾಗಿ, ಜನಪದರ ಮಂಟೆ ಸ್ವಾಮಿಯಾಗಿ ನೋಡುತ್ತಾ ಹಲವು ತಾತ್ವಿಕ ನೆಲೆಗಳಲ್ಲಿ ಚರ್ಚಿಸುವುದರ ಮೂಲಕ ಕನ್ನಡಕ್ಕೆ ಹೊಸ ಜ್ಞಾನಪರಂಪರೆಯೊಂದನ್ನು ಜೋಡಿಸಿದ್ದಾರೆ.

ವರ್ತಮಾನದ ಜಗತ್ತಿನಲ್ಲಿ ಜಾತಿ, ಧರ್ಮಗಳು ಧ್ರುವೀಕರಣಗೊಳ್ಳುತ್ತಿರುವ ಮೂಲಕ ಅಜ್ಞಾನ ತಾಂಡವಾಡುತ್ತಿರುವ ಈ ಹೊತ್ತಿನಲ್ಲಿ ಇಂತಹ ಕೃತಿಗಳು ನಮಗೆ ಬೆಳಕಿನ ದಾರಿಯಾಗಬಲ್ಲವು.

**ಡಾ॥ ಎನ್. ಜಗದೀಶ್ ಕೊಪ್ಪ**
ನಂ.೧೦೩, ಅಕ್ಷರ, ಆರೋಗ್ಯನಗರ ಬಡಾವಣೆ
ತೇಜಸ್ವಿ ನಗರ, ಧಾರವಾಡ – ೫೮೦ ೦೦೨

# ಇರಲಿ ಬಿಡು ತಪ್ಪೇನು...




ಮಬ್ಬುಗತ್ತಲು ಹೊಲ ಮಲಗೊ ಹೊತ್ತು
ಊರು ಬಿಡುವ ಈ ಹತ್ತಿ ಬಂಡಿಗಳಲಿ,
ಮೂಗೆತ್ತಿನಂತೆ ತೂಕಡಿಸುವವರ ಕಣ್ಣುಗಳಲ್ಲಿ
ರವೆಯ ಕನಸುಗಳಂತಹ ನಾವು
ತಕ್ಕಡಿಯಡಿ ಸಿಲುಕಿ ಹೆಣವಾದವರ
ಪಾದದ ಚಕ್ಕಳ ನೋಡದಾದೆವು
ಮೊಬೈಲ್ ಪರದೆಯಲಿ ಈಗೀಗ !

ಪಟ್ಟಣಿಗರ ಹೊಟ್ಟೆ ತಣ್ಣಗಿರಲಿ
ಬೆಳೆದವರ ಕಳ್ಳು–ಬಳ್ಳಿಗಳಿಂದ ಬೇರಾದ ಮಕ್ಕಳಂತೆ,
ಲಾರಿಯಲ್ಲಿ ಕುಕ್ಕರಿಸಿ ಬರುವ ಕಲ್ಲಂಗಡಿ, ಖರ್ಬೂಜ
ಉರಿನೆತ್ತಿ ಮೇಲೆ ಊರೂರು ಅಲೆಯುವಾಗ
ಅಂಗಿಯ ಮೇಲೆ ಕಲೆ ಬೀಳದಂತೆ ಮೆಲ್ಲುವ ನಾವು,
ಬೆವರ ಹನಿ ಹೂಡಿದವರ
ಬಿಕ್ಕಳಿಕೆಗಳನು ಹೆಡ್‌ಫೋನಿನಲಿ ಕೇಳದಾದೆವು ಈಗೀಗ

ದೋಣಿಗಳಿಂದ ಸೇಬು ಬರುವವು
ಮೆತ್ತನೆಯ ಹುಲ್ಲು ತುಂಬಿದ ಕಟ್ಟಿಗೆ ಪೆಟ್ಟಿಗೆಯಲ್ಲಿ
ತೂಕದ ಮುಖಬೆಲೆಯನಂಟಿಸಿಕೊಂಡು ;
ತುಸು ಮೆರಗು ಹೆಚ್ಚಿಸಿಕೊಂಡು
ಅದ್ಯಾಕೊ, ತೋಟಮಾಲಿಗಳ
ಆ ಕೈ ವಾಸನೆ ಮೂಸದಂತೆ ಕತ್ತರಿಸಿ ಚಪ್ಪರಿಸುವ ನಮಗೆ,
ನೆತ್ತರಿನಲಿ ಮಿಂದ ಆ ನೆಲದ ನಡಿಗೆ
ಕಾಣದಂತೆ ಚಾಳೀಸು ತೊಟ್ಟೆವು ಈಗೀಗ !

ಥಾರುದಾರಿಯಲಿ ನಡದೇ... ನಡೆದವು ಕಾಲು
ಬಿರಿದಂತೆ ಅಲ್ಲೆಲ್ಲೋ ಮುತ್ತುಗದ ಸಾಲು !
ಕೊಂಕಳಲಿ ಬಾಟಲಿ ನೀರು; ಕೈಯಲ್ಲಿ ಊರುಗೋಲು
ಅರೆ, ಇದೇನಿದು ಊರುಗೋಲಿನ ಬಣ್ಣ ?
ನೀಲಿಯಲ್ಲವೆ ನವಿಲಗಣ್ಣ ? ಇರಲಿ ಬಿಡಿ ತಪ್ಪೇನು
ಇರುವೆಗಳಲ್ಲೂ ಕಪ್ಪಿರುವೆ ಕೆಂಪಿರುವೆ
ಬರಿಗಾಲು ಸಾಲುಗಟ್ಟಿದ್ದು ಕಂಡಿದ್ದಿಲ್ಲ ಟೀವಿಯವರು ಈಗೀಗ !

ಈ ಬೇಸಿಗೆಯ ಈ ಸೂರ್ಯನಿಗೆ ಹಿಡಿಶಾಪ ಹಾಕಿ,
ಮರ ನೆಟ್ಟು ನೆರಳು ಹಾಸಿದವರನು
ನೆನೆಯಬೇಕು ಅಂದುಕೊಂಡಾಗಲೆಲ್ಲ;
ಮಾರುವೇಶದ ಮಾರುಕಟ್ಟೆಯ ಕುದುರೆ
ಬಿಸಿಲ ಝಳದಂತೆ ಕಣ್ಣೆದುರೇ ಓಡುವಾಗ
ಹವಾ ನಿಯಂತ್ರಿಸಲಾಗದ ಕೋಣೆಯಲಿ ಝಳ ತಡಿಯದೆ
ನಾವು ವಾಟ್ಸ್ಯಾಪ್ ಗುಂಪಿನಲಿ ಕಂದುರಂಗಿನ ಬಿರಿದ ತುಟಿಗಳ
ಬಣ್ಣಕ್ಕೆ ಜಗಳ ಆಡಿದ್ದೇ ಕೇಳುವೆವು ಯಾಕೊ ಈಗೀಗ!

**ರಮೇಶ ಅರೋಲಿ**
ಸಹ ಪ್ರಾಧ್ಯಾಪಕರು, ಕಮಲ ನೆಹರು ಕಾಲೇಜ್
ಅಗಸ್ತ್ಯ ಕ್ರಾಂತಿ ಮಾರ್ಗ, ನವದೆಹಲಿ – ೧೧೦೦೪೯

ರಹೀಮ್ ಬೀಬಿಯೊಬ್ಬಳೇ ನೀರಿಗೆ ಬರುತ್ತಿದ್ದಳು. ಒಂದು ಮುಂಜಾನೆ ನಾನು ಗೆಳೆಯರೊಡನೆ ಶಾಲೆಗೆ ಹೋಗುವಾಗ ದಾರಿಯಲ್ಲಿ ನೀರಿಗೆ ಬರುತ್ತಿದ್ದ ಆಕೆ ಕಂಡಳು. ಅವಳನ್ನು ಮಾತಾಡಿಸಲು ನಾನು ಬೇಕೆಂದೇ ನನ್ನ ಗೆಳೆಯರಿಂದ ಹಿಂದುಳಿದೆ. ಸ್ವಲ್ಪ ಸಂಕೋಚದಿಂದಲೇ, 'ರಹೀಮ್ ಬೀಬಿ, ನಾನಿನ್ನು ಚಿಕ್ಕವನು ಆದ್ದರಿಂದ ನಿಮ್ಮ ಮುಖವನ್ನೊಮ್ಮೆ ನನಗೆ ತೋರಿಸಿ' ಅಂದೆ. ಅವಳು ಮುನ್ನಡೆಯುತ್ತಲೇ, 'ಬಾವುಜೀ, ನೀವು ನನ್ನ ಮುಖ ನೋಡಬೇಕೆಂದರೆ ನನಗೆ ಉಡುಗೊರೆ ಕೊಡಬೇಕು' ಅಂದಳು. ಅವಳು ಬಾವಿಯ ಕಡೆಗೆ ಹೋಗುತ್ತಿದ್ದಳು, ನಾನು ಶಾಲೆಯ ಕಡೆಗೆ ಹೋಗುತ್ತಿದ್ದೆ. ಪರಸ್ಪರ ವಿರುದ್ಧ ದಿಕ್ಕಿನಲ್ಲಿರುವುದರಿಂದ ನಮ್ಮ ನಡುವೆ ಅಂತರ ಹೆಚ್ಚಿದಂತಾಗಿ ಮಾತು ಮುಂದುವರಿಸಲಾಗಲಿಲ್ಲ. ಮರುದಿನವೂ ನಾನವಳನ್ನು ಮಾತನಾಡಿಸಲೆಂದೇ ಬೇಕಂತ ಹಿಂದುಳಿದೆ. 'ರಹೀಮ್ ಬಾಬಿ, ನಿಮಗೆ ಉಡುಗೊರೆ ಬೇಕಲ್ಲವೇ? ನಾನು ನನ್ನ ಅವ್ವನಿಂದ ಕೇಳಿ ತಂದು ಕೊಡುತ್ತೇನೆ' ಅಂದೆ. ಅದಕ್ಕವಳು, 'ಇಲ್ಲ, ಇಲ್ಲ, ಚೀಚಿನ ಕೇಳಬೇಡಿ. ನೀವು ದುಡಿದ ಹಣದಲ್ಲಿಯೇ ನನಗೆ ಉಡೊಗೊರೆ ತರಬೇಕು. ಆಗ ಮಾತ್ರ ನಾನು ಮುಖ ತೋರಿಸುತ್ತೇನೆ' ಅಂದಳು.

# ಉಡುಗೊರೆ

ರಹೀಮ್ ಬೀಬಿ ಮದುವೆಯಾಗಿ ಬಂದ ಹೊಸತರಲ್ಲಿ ನಮ್ಮನೆಯ ಹೆಣ್ಮಕ್ಳು ಅವಳನ್ನು ನೋಡಲು ಹೋಗಿದ್ದರು. ನನ್ನ ಅವ್ವ ಒಂದು ಜೊತೆ ಬಳೆ, ನನ್ನ ಚಿಕ್ಕಮ್ಮ ಕಾಲುಚೈನು ಮತ್ತು ದೊಡ್ಡಣ್ಣನ ಹೆಂಡತಿ, ಸರ್‌ಯು ಅತ್ತಿಗೆ ಕಾಲುಂಗುರಗಳನ್ನೂ ಉಡುಗೊರೆಯಾಗಿ ನೀಡಿದ್ದರು. ಮನೆಗೆ ಹಿಂದಿರುಗಿ ಅವರೆಲ್ಲ ಆಕೆಯ ಸೌಂದರ್ಯ ವರ್ಣಿಸತೊಡಗಿದರು. ಎಂತಹ ಸಣ್ಮಕ್ಕಳಿಗೂ ಆಕೆಯನ್ನು ನೋಡುವ ಕುತೂಹಲ ಹುಟ್ಟಿಸುವಂತಿತ್ತು ಅವರ ಗುಣಗಾನ. ಹೀಗಾಗಿ ಅವಳನ್ನು ನೋಡಲೇಬೇಕೆಂಬ ಆಸೆ ನನ್ನಲ್ಲೂ ತೀವ್ರವಾಗಿತ್ತು.

'ಎಷ್ಟು ಸುಂದರವಾಗಿದ್ದಾಳವಳು! ಅತ್ಯಂತ ನಾಜೂಕಾಗಿ ಕೆತ್ತಿದ ಅಮೃತ ಶಿಲೆಯಂತಿದ್ದಾಳೆ' ಅಂದಳವ್ವ. 'ಹೊಳೆಯುವ ಕಪ್ಪು ಕಂಗಳು ಅದೆಷ್ಟು ಚೆಂದ! ಅವಳ ಆ ಎತ್ತರದ ನಿಲುವು ಆಕರ್ಷಕ' ಅಂದಳು ಚಿಕ್ಕಮ್ಮ. 'ಅವಳು ಬೆಳ್ಳಗಿದ್ದಾಳೆ. ಆದರೆ ಅವಳ ಮುಖದ ಮೇಲೆಲ್ಲಾ ಕಲೆಗಳು. ಅಲ್ಲದೆ ನಾವು ಅಲ್ಲಿಗೆ ಹೋದಾಗ ಅವಳು ಕುಳಿತುಕೊಂಡಿದ್ದಳು. ಹೀಗಾಗಿ ಅವಳು ಕುಂಟಿಯೇ ಅಥವಾ ಇನ್ನಾವುದಾದರೂ



ಅಂಗವೈಕಲ್ಯವಿದೆಯೆ ಎಂದು ನಿಮಗ್ಹೇಗೆ ತಿಳಿಯುತ್ತದೆ' ಅಂದಳು ನನ್ನ ನಾದಿನಿ. 'ಆಕೆ ಕುಂಟಿ ಎಂದು ನಿನಗ್ಯಾರು ಹೇಳಿದರು? ನಾವೆಲ್ಲ ಅಲ್ಲಿ ಕುಳಿತಾಗ ಅವಳು ಒಳಗಿಂದ ನಡೆದುಕೊಂಡೇ ಬಂದಳಲ್ಲ? ಅವಳ ನಡಿಗೆಯಲ್ಲಿ ಯಾವ ವ್ಯತ್ಯಾಸ ಕಂಡಿತು? ಅಂದಳು ಅವ್ವ. 'ಅವಳ ಆ ಬಿಳಿ ಮುಖದ ಮೇಲೆ ಕಾಣುವ ನೇರಳೆ ಬಣ್ಣದ ಕಲೆಗಳು ಸೌಂದರ್ಯವನ್ನು ಇನ್ನಷ್ಟು ಹೆಚ್ಚಿಸಿವೆ' ಅಂದಳು ಚಿಕ್ಕಮ್ಮ. 'ಗ್ರೀಕ್ ಸೌಂದರ್ಯದ ಸೊಬಗೂ ಹಾಗೆ. ಅದು ಅದ್ಧೂರಿ ಅರಮನೆಯ ಆಭರಣ! ನೀವೆಲ್ಲಾ ಯಾರ ಸೌಂದರ್‍ಯದ ಬಗೆಗೆ ಮಾತಾಡುತ್ತಿರುವಿರಿ?' ಅಂದ ದಿಢೀರನೆ ಪ್ರತ್ಯಕ್ಷನಾದ ದೊಡ್ಡಣ್ಣ.

'ಮೊನ್ನೆ ಮದುವೆಯಾದ ಅಗಸ, ಇಲಾಮ್‌ದಿನ್‌ನ ಹೆಂಡತಿಯ ಬಗ್ಗೆ ಮಾತಾಡುತ್ತಿದ್ದೇವೆ. ಅವಳನ್ನು ನೋಡಿ ಉಡುಗೊರೆ ಕೊಟ್ಟುಬಂದೆವು. ಆಕೆ ಬೆಳಕಿನಷ್ಟೇ ಹೊಳಪು, ಸುಂದರ' ಅಂದಳವ್ವ. ಇವರೆಲ್ಲರ ಮಾತು ಕೇಳಿಸಿಕೊಂಡ ನನ್ನತ್ತಿಗೆ ಸ್ವಲ್ಪ ಕಸಿವಿಸಿಗೊಂಡಳು. 'ಹೇಗಿದ್ದರೇನು, ಆಕೆಯೊಬ್ಬ

## ಅಭಿನಂದನೆ...

ಅರಕಲಗೂಡು ೨೦೧೮ನೇ ಸಾಲಿನ 'ಡಾ|| ಅನಕೃ ಪ್ರಶಸ್ತಿ'ಯು ಡಾ|| ಎಚ್. ಎಸ್. ವೆಂಕಟೇಶಮೂರ್ತಿ ಅವರಿಗೆ ಲಭಿಸಿದೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

ಕಾವ್ಯಲೋಕ



# ನನ್ನೂರು...



**ನ**ನ್ನೂರ ಬಗೆಗೆ ನಾನೇನು ಬರೆಯಲಿ ?
ಅದೇ ನನಗೆ ಸ್ವರ್ಗ
ಕೂಡಿ ಬಾಳದ ಊರು
ಬದುಕ ಕಲಿಸಿದ ಊರು
ತುಳು ತಾಯಿ, ಮಲೆಯಾಳ,
ಹವ್ಯಕರ ನುಡಿ, ಮರಾಠರ ಮಾತು
ಎಲ್ಲವೂ ಬೆರೆತ ಭಾಷೆ
ಕೇಳಲು ಅದೆಂತ ಸೊಗಸು

ಮೊಸರು ಮಥಿಸುವ ಸದ್ದು
ಕೈ ಬಳೆಯ ನಾದ
ಪಾತ್ರೆಗಳ ದಡಬಡ
ಹಕ್ಕಿಗಳ ಚಿಲಿಪಿಲಿ
ಹಟ್ಟಿಯ ಕೂಗು
ಶಂಖಧ್ವನಿ ಜಾಗಟೆಯ ಸದ್ದು
ಅದೇ ಸುಪ್ರಭಾತ
ಪ್ರಾತಃರ್ವಿಧಿ ಮುಗಿದಾಗ

ಸಿಗುವ ಬೆಲ್ಲದ ಕಾಫಿ
ಅದಕೆಂತ ಪರಿಮಳ
ಬೇಯಿಸಿದ ಗಂಜಿ ತಟ್ಟೆಗೆ ಬಿದ್ದಾಗ
ಹೆಚ್ಚು ಕಮ್ಮಿಯ ಮಾತಿಲ್ಲ
ಮೌನದಲಿ ಹೊಟ್ಟೆ ಸೇರಿದಾಗ
ಅನ್ನಬ್ರಹ್ಮನಿಗೆ ಸಲ್ಲುವ ಗೌರವ
ಈಗಲೂ ಬದುಕುತ್ತಿದ್ದೇನೆ
ಬೆರಳು ತೋರಿದರೆ ಹಸ್ತ ನುಂಗುವ ಮಂದಿಯ
ಮಧ್ಯೆ
ತಣ್ಣನೆಯ ಗಾಳಿಯಿಲ್ಲದ
ರಾಜಕೀಯ ಆರ್ಭಟದ
ಮಾನ ಮುಚ್ಚುವಷ್ಟೇ ಬಟ್ಟೆಯ
ನಾಗರಿಕರ ಮಧ್ಯೆ
ನೆನಪಾಗುತ್ತಿದೆ ನನ್ನೂರು
ಚಿಮಿಣಿ ದೀಪದ ಬೆಳಕು
ದಿನಕ್ಕೊಂದೇ ಬಸ್ಸು
ಆದರೂ.... ಸ್ವಚ್ಛ ಗಾಳಿಯ
ಸಸ್ಯರಾಶಿಯ, ಹಿತವಾದ ಮೆಲ್ಲುಲಿಯ
ನಂಜಿಲ್ಲದ, ಮುಸ್ಸಂಜೆಗೇ ಮನೆ ಸೇರುವ
ಪ್ರೀತಿ ಹಂಚುವ
ಹೃದಯವಂತಿಕೆಯ ನನ್ನೂರು.

**ಸೌಮ್ಯಲತಾ ಪಿ.**
ಸಹ ಪ್ರಾಧ್ಯಾಪಕಿ, ಡಾ|| ಜಿ. ಶಂಕರ್ ಸರಕಾರಿ
ಮಹಿಳಾ ಪ್ರಥಮದರ್ಜೆ ಕಾಲೇಜು
ಅಜ್ಜರಕಾಡು, ಉಡುಪಿ

ಸಾಮಾನ್ಯ ಅಗಸನ ಹೆಂಡತಿ. ಬ್ರಾಹ್ಮಣ ಹೆಣ್ಣುಮಗಳಲ್ಲ, ರಜಪೂತಳೂ ಅಲ್ಲ' ಎನ್ನುತ್ತ ಎದ್ದು ಹೊರಡಲು ಸಜ್ಜಾದಳು. ನನ್ನ ಅತ್ತಿಗೆಯ ಕಣ್ಣುಗಳು ಬಹಳ ಆಕರ್ಷಕ. ಆದರೆ ಆಕೆ ಸ್ವಲ್ಪ ಗಿಡ್ಡ ಮತ್ತು ಕಪ್ಪು. ಆಕೆ ಮತ್ತೆ ಅವ್ವನೆಡೆಗೆ ತಿರುಗಿ, 'ಆ ಅಗಸನ ಸುಂದರ ಹೆಂಡತಿ ತಂಗಿಯನ್ನು ನಿಮ್ಮ ಮಗನಿಗೆ ತಂದುಕೊಳ್ಳಿ' ಅಂದಳು ವ್ಯಂಗ್ಯವಾಗಿ. ಬಹುಶಃ ಅವಳಿಗೆ ಗ್ರೀಕ್ ಸೌಂದರ್ಯದ ಅರ್ಥ ತಿಳಿದಂತಿಲ್ಲ.

ಇಲಾಮ್‌ದಿನ್‌ನ ತಾಯಿಯನ್ನು ನಾವು ಚಿಕ್ಕಮ್ಮ ಎಂದು ಕರೆಯುತ್ತಿದ್ದೆವು. ನಮಗೂ ಚಿಕ್ಕಮ್ಮ ಇದ್ದುದರಿಂದ ಆಕೆಗೆ 'ಅಗಸರ ಚಿಕ್ಕಮ್ಮ' ಅನ್ನುತ್ತಿದ್ದೆವು. ಒಮ್ಮೊಮ್ಮೆ ಅವರಿಬ್ರೂ ಒಟ್ಟಿಗೆ ಕುಳಿತಾಗ ಸುಮ್ಮನೆ 'ಚಿಕ್ಕಮ್ಮ' ಅಂತ ಕೂಗುತ್ತಿದ್ದೆವು. ಅವರಿಬ್ಬರು ಒಮ್ಮೆಲೆ ತಿರುಗಿದಾಗ ಕಿಸಕ್ಕನೆ ನಕ್ಕು ಓಡಿ ಹೋಗುತ್ತಿದ್ದೆವು. ಹಲವು ವರ್ಷಗಳ ಹಿಂದಿನ ಮಾತು. ನನ್ನ ತಂದೆ ಜಮ್ಮುವಿನಲ್ಲಿರುವ ಸರುಯಿನ್‌ಸರ್‌ಗೆ ಹೋದಾಗ ಅಲ್ಲಿನ ನಿವಾಸಿ ಮೆಹಬ್ದಿನ್‌ನ ಪರಿಚಯವಾಗಿತ್ತು. ಅವನಿಗಿರುವ ತೊಂದರೆಗಳಿಂದಾಗಿ ಅಪ್ಪ ಅವನನ್ನು ಜೊತೆ ಕರೆದುಕೊಂಡು ಬಂದರು. ರಾಮನಗರಕ್ಕೆ ಬಂದೊಡನೆ ಇರಲಿಕ್ಕೆ ಜಾಗ ಮತ್ತು ಜೀವನಾಧಾರಕ್ಕೆ ಸ್ವಲ್ಪ ಭೂಮಿ ಕೊಟ್ಟರು. ನಂತರ ಮೆಹಬ್ದಿನ್ ಇಲ್ಲಿನ ಕೋಟೆಯ ಸಿಪಾಯಿಯಾಗಿ ನೇಮಕಗೊಂಡ. ನಿವೃತ್ತಿ ನಂತರ ಅವನ ಹಿರಿಯ ಮಗ ಗುಲ್ಬ್‌ದಿನ್‌ನಿಗೆ ಆ ಕೆಲಸ ಸಿಕ್ಕಿತು. ಕಿರಿಯ ಮಗ ಇಲಾಮ್‌ದಿನ್ ಅಗಸವೃತ್ತಿ ಆರಂಭಿಸಿದ. ಹೀಗೆ, ಅವರ ಕುಟುಂಬ ಇಲ್ಲಿ ಬೀಡು ಬಿಟ್ಟಿತು. ಮೆಹಬ್ದಿನ್‌ನ ದೊಡ್ಡ ಮಗ ಗುಲ್ಬ್‌ದಿನ್‌ನಿಗೆ ಮದುವೆಯಾಯಿತು, ಮಕ್ಕಳೂ ಆದರು. ನಾನು ಮತ್ತು ಗುಲ್ಬ್‌ದಿನ್‌ನ ಮಗ ಶಂಸು ವಾರಿಗೆಯವರು. ಇಲಾಮ್‌ದಿನ್ ನಮ್ಮ ಬಟ್ಟೆ ತೊಳೆದು ಇಸ್ತ್ರಿ ಮಾಡಿಕೊಂಡು ಮನೆಗೆ ತರುವಾಗ ಶಂಸುವೂ ಅವನ ಜೊತೆ ಬರುತ್ತಿದ್ದ. ಮೆಹಬ್ದಿನ್ ಎಂದೂ ಆಲಸಿಯಾಗಿ ಕುಳಿತವನಲ್ಲ. ಭತ್ತ, ಗೋಧಿ ಇತ್ಯಾದಿ ವ್ಯವಸಾಯದಲ್ಲಿ ನಿರತನಾಗಿದ್ದ. ಆಗಾಗ ನಾನು ಮತ್ತು ಶಂಸು ಅವನಜ್ಜನ ಹೊಲದಲ್ಲಿ ಹಸಿರು ವಠಾಣಿಕಾಯಿ ಕದ್ದು ತಿನ್ನುತ್ತಿದ್ದೆವು. ಹಲವು ವರ್ಷಗಳ ನಂತರ ಇಲಾಮ್‌ದಿನ್‌ನ ಮದುವೆಯಾಯಿತು. ಹೊಸ ಸೊಸೆಯನ್ನು ಆಕೆಯ ಅತ್ತೆ ಮತ್ತು ನನ್ನ ಚಿಕ್ಕಮ್ಮ ನೀರು ತರಲು ಕರೆದೊಯ್ದರು. ಮುಖಗವಸು, ಹಸಿರು ಬಣ್ಣದ ರೇಷಿಮೆಯ ಚೂಡಿದಾರ ಹಾಗೂ ಬೆಳ್ಳಿದಾರದೆಳೆಗಳ ಎಂಬ್ರಾಯಿಡರಿ ಸ್ಯಾಂಡಲ್ ಹಾಕಿಕೊಂಡು ತಲೆ ಮೇಲೊಂದು, ಸೊಂಟದ ಮೇಲೊಂದು ಕೊಡಗಳನ್ನು ಹೊತ್ತು ಹಿಂದೆ ನಡೆಯುತ್ತಿದ್ದ ಸೊಸೆ ಅತ್ತೆಗಿಂತ ತುಸು ಎತ್ತರವಾಗಿಯೇ ಕಾಣುತ್ತಿದ್ದಳು.

ಆ ಬಾವಿ ನಮ್ಮನೆಗೆ ಹತ್ತಿರವಾಗಿತ್ತು. ಎಲ್ಲರೂ ನೀರಿಗೆ ಅಲ್ಲಿಯೇ ಬರುತ್ತಿದ್ದರು. ನೀರಿಗೆ ಹೋಗುವಾಗ ಒಂದು ದಿನ ಅತ್ತೆ ಸೊಸೆ ನಮ್ಮನೆಗೆ ಬಂದರು. ಅತ್ತೆಯ ಮಾತಿನಂತೆ, ಹಿರಿಯರ ಕಾಲಿಗೆ ನಮಸ್ಕರಿಸಿ ಆಶೀರ್ವಾದ ಪಡೆದಳು ಸೊಸೆ. ನಮ್ಮನೆಯ ಹಿರಿಯರು, 'ನೀನು, ನಿನ್ನ ಗಂಡ ನೂರ್ಕಾಲ ಬಾಳಿ' ಎಂದವಳಿಗೆ ಆಶೀರ್ವದಿಸಿ ಅವರು ಹೋದ ನಂತರ ಅವಳ ಗುಣಗಾನ ಶುರುಮಾಡಿದರು. 'ಆಕೆಯ ನಡಿಗೆ ನವಿಲಿನ ನರ್ತನ' ಅಂದರು. ಇನ್ನೊಬ್ಬ ಹೆಣ್ಣುಮಗಳ ಗುಣಗಾನದಿಂದ ನನ್ನತ್ತಿಗೆಗೆ ಮತ್ಸರ ಮೂಡಿದ್ದು ಸಹಜವೆ. ಅದಕ್ಕವಳು, 'ನವಿಲುಗಳು ಕಪ್ಪಗಿರುತ್ತವೆ. ಆದರವಳು ಬೆಳ್ಳಗಿದ್ದಾಳೆ. ಹೀಗಾಗಿ ಅವಳ ನಡಿಗೆಯನ್ನು ನವಿಲುನೃತ್ಯಕ್ಕಿಂತ ಹಂಸದ ಕುಣಿತಕ್ಕೆ ಹೋಲಿಸುವುದು ಸೂಕ್ತ' ಅಂದಳು. 'ನವಿಲು ಬೆಳ್ಳಗಿದೆ ಅಂದ್ರೆ ನಮ್ಮ ಗಂಟೇನು ಹೋಗುತ್ತದೆ' ಅಂದಳು ಚಿಕ್ಕಮ್ಮ. ತಿರುಗಿ ಉತ್ತರವಿಲ್ಲದಕ್ಕಾಗಿಯೋ ವಾದ ಬೆಳೆಸಬಾರದೆಂದೊ ಏನೋ ಅತ್ತಿಗೆ ಸುಮ್ಮನಾದಳು.

ಅದೇ ದಿನ, ಅತ್ತೆ ಸೊಸೆ ಮತ್ತೆ ನೀರಿಗೆ ಬಂದಾಗ ಮನೆಗೆ ಬಂದರು. ನಮ್ಮನೆಯವರು ಸೊಸೆಯ ತವರುಮನೆ ಬಗ್ಗೆ ವಿಚಾರಿಸಿದರು. 'ನೋಡು, ಇವರು ಚೀಚಿ, ಇವರು ದೊಡ್ಡತ್ತೆ' ಎಂದು ಆಕೆಯ ಅತ್ತೆ ಎಲ್ಲರನ್ನು ಪರಿಚಯಿಸುತ್ತ, 'ನನ್ನ ಮಕ್ಕಳು ಇವರನ್ನು ಹೀಗೇ ಕರೆಯುತ್ತಾರೆ. ನೀನೂ ಹೀಗೇ ಕರಿಬೇಕು' ಅಂದಳು. ನಂತರ ಅವಳು ನಮ್ಮ ಅತ್ತಿಗೆಯನ್ನು ಪರಿಚಯಿಸುತ್ತಾ, 'ನಿನ್ನ ಗಂಡ ಮತ್ತು ಇವಳ ಗಂಡ ಇಬ್ಬರು ಜೊತೆಗೇ ಓದಿದವರು. ಆದ್ದರಿಂದ ನೀನವಳನ್ನು ಅತ್ತಿಗೆ ಎಂದೇ ಕರೆಯಬೇಕು' ಅಂದಳು. 'ಹುಂ' ಅಂದ ಸೊಸೆ ತನ್ನ ತವರುಮನೆ ಬಗ್ಗೆ ಹೇಳಿದಳು. 'ಇಲ್ಲಿಂದ ಎಡ ಬದಿಗೆ ಹೊರಟರೆ ಸರುಯಿನ್‌ಸರ್‌ನ ಉತ್ತರ ದಿಕ್ಕಿನಲ್ಲಿ ಕೆಲವು ಅಂಗಡಿಗಳು ಕಾಣುತ್ತವೆ. ಅಲ್ಲೇ ನಾವು ವಾಸಿಸುತ್ತೇವೆ' ಅಂದಳು. ಮತ್ತೆ ಒಂದಿಷ್ಟು ಹೊತ್ತು ಏನೇನೊ ಮಾತಾಡಿ ಅವರಿಬ್ಬರು ಹೋದರು.

'ಎಷ್ಟು ಚೆನ್ನಾಗಿ ಮಾತಾಡುತ್ತಾಳವಳು! ಹಸಿರು ಕಾಡಲ್ಲಿ ಕೋಗಿಲೆ ಹಾಡಿದಂತಾಗುತ್ತದೆ' ಅಂದರು ಅವ್ವ ಮತ್ತು ಚಿಕ್ಕಮ್ಮ. 'ನೀವು ಮೊದಲು ನನ್ನನ್ನೂ ಹೀಗೇ ಹೊಗಳುತ್ತಿದ್ದಿರಿ' ಅಂದಳು ಅತ್ತಿಗೆ. ಅದಕ್ಕವರು 'ನೀನೂ ಯಾವುದರಲ್ಲೂ ಕಡಿಮೆ ಇಲ್ಲ. ಚೆನ್ನಾಗಿಯೇ ಮಾತಾಡುತ್ತಿ' ಎಂದೊಡನೆ ಅತ್ತಿಗೆಯ ಮುಖವರಳಿ ಹಿಂದಾದ ಕಸಿವಿಸಿ ಮತ್ತು ನೋವು ಮರೆತಂತೆ ಕಂಡಿತು.

ಕೆಲವು ದಿನಗಳಿಂದ ರಹೀಮ್ ಬೀಬಿಯೊಬ್ಬಳೇ ನೀರಿಗೆ ಬರುತ್ತಿದ್ದಳು. ಒಂದು ಮುಂಜಾನೆ ನಾನು ಗೆಳೆಯರೊಡನೆ ಶಾಲೆಗೆ ಹೋಗುವಾಗ ದಾರಿಯಲ್ಲಿ ನೀರಿಗೆ ಬರುತ್ತಿದ್ದ ಆಕೆ ಕಂಡಳು. ಅವಳನ್ನು ಮಾತಾಡಿಸಲು ನಾನು ಬೇಕೆಂದೇ ನನ್ನ ಗೆಳೆಯರಿಂದ ಹಿಂದುಳಿದೆ. ಸ್ವಲ್ಪ ಸಂಕೋಚದಿಂದಲೇ, 'ರಹೀಮ್ ಬೀಬಿ, ನಾನಿನ್ನು ಚಿಕ್ಕವನು ಆದ್ದರಿಂದ ನಿಮ್ಮ ಮುಖವನ್ನೊಮ್ಮೆ ನನಗೆ ತೋರಿಸಿ' ಅಂದೆ. ಅವಳು ಮುನ್ನಡೆಯುತ್ತಲೇ, 'ಬಾವುಜೀ, ನೀವು ನನ್ನ ಮುಖ ನೋಡಬೇಕೆಂದರೆ ನನಗೆ ಉಡುಗೊರೆ ಕೊಡಬೇಕು' ಅಂದಳು. ಅವಳು ಬಾವಿಯ ಕಡೆಗೆ ಹೋಗುತ್ತಿದ್ದಳು, ನಾನು ಶಾಲೆಯ ಕಡೆಗೆ ಹೋಗುತ್ತಿದ್ದೆ. ಪರಸ್ಪರ ವಿರುದ್ಧ ದಿಕ್ಕಿನಲ್ಲಿರುವುದರಿಂದ ನಮ್ಮ ನಡುವೆ ಅಂತರ ಹೆಚ್ಚಿದಂತಾಗಿ ಮಾತು ಮುಂದುವರಿಸಲಾಗಲಿಲ್ಲ. ಮರುದಿನವೂ ನಾನವಳನ್ನು ಮಾತನಾಡಿಸಲೆಂದೇ ಬೇಕಂತ ಹಿಂದುಳಿದೆ. 'ರಹೀಮ್ ಬಾಬಿ, ನಿಮಗೆ ಉಡುಗೊರೆ ಬೇಕಲ್ಲವೇ? ನಾನು ನನ್ನ ಅವ್ವನಿಂದ ಕೇಳಿ ತಂದು ಕೊಡುತ್ತೇನೆ' ಅಂದೆ. ಅದಕ್ಕವಳು, 'ಇಲ್ಲ, ಇಲ್ಲ, ಚೀಚಿನ ಕೇಳಬೇಡಿ. ನೀವು ದುಡಿದ ಹಣದಲ್ಲಿಯೇ ನನಗೆ ಉಡೊಗೊರೆ ತರಬೇಕು. ಆಗ ಮಾತ್ರ ನಾನು ಮುಖ ತೋರಿಸುತ್ತೇನೆ' ಅಂದಳು. ಅವಳ ಆ ದೃಢನಿರ್ಧಾರಕ್ಕೀಗ ಮೂರು ವರ್ಷ. ನಾನಾಗ ಎಂಟನೇ ತರಗತಿ ಮುಗಿಸಿ ಮುಂದಿನ ಅಭ್ಯಾಸಕ್ಕಾಗಿ ಜಮ್ಮುಗೆ ಹೋದೆ. ನಂತರ ಅಲ್ಲಿಂದ ಶ್ರೀನಗರಕ್ಕೆ ಹೋದದ್ದರಿಂದ ಒಂದೂವರೆ ವರ್ಷ ಮನೆಯಕಡೆ ಹೋಗಲಾಗಲಿಲ್ಲ. ಒಂಬತ್ತನೇ ತರಗತಿಯಲ್ಲಿ ಫೇಲ್ ಆದಾಗ ನನಗೆ ಹದಿನೈದು ವರ್ಷ. ರಜೆಗೆಂದು ಮನೆಗೆ ಹೋದಾಗ 'ಬಾವುಜೀ, ನೀವು ಯಾವ ತರಗತಿಯಲ್ಲಿ ಓದುತ್ತಿದ್ದೀರಿ' ಎಂದು ಕೇಳಿದ್ದಳಾಕೆ.

'ಒಂಬತ್ತನೇ ತರಗತಿ'

'ಕಳೆದ ವರ್ಷವೂ ನೀವು ಒಂಬತ್ತನೆ ತರಗತಿಯಲ್ಲೇ ಇದ್ದಿರಲ್ಲವೇ?'

'ಹೌದೌದು' ಅನ್ನುತ್ತ ನಾನು ಮುಜುಗರದಿಂದಲೇ ಮುನ್ನಡೆದೆ.

ನನ್ನ ದೌರ್ಭಾಗ್ಯವೋ ಏನೋ, ಸತತ ಮೂರು ಬಾರಿ ಒಂಬತ್ತನೇ ವರ್ಗದಲ್ಲಿ ಫೇಲ್ ಆಗಿದ್ದೆ. ಅದಕ್ಕೇ ಒಂದು ವರ್ಷ ಮನೆಗೆ ಬರಲಿಲ್ಲ. ಸತತ ಮೂರು ವರ್ಷಗಳ ನಂತರ ಹತ್ತನೇ ವರ್ಗಕ್ಕೆ

## ಮೈತ್ರಿ

ನಿನ್ನೆ
ರಾತ್ರಿಯವರೆಗೆ
ಆ ಪಕ್ಷದ
ಜೊತೆ
ಈ ಪಕ್ಷದ ಜಂಗೀ ಕುಸ್ತಿ
ಬೆಳಗ್ಗೆ
ನೋಡಿದರೆ
ಎರಡೂ
ಪಕ್ಷಗಳ ಜಿಗ್ರೀ ದೋಸ್ತಿ

**ಶಿವಮೊಗ್ಗ ಗೀತಾಶಾಸ್ತ್ರಿ**
ಬೆಂಗಳೂರು – ೫೬೦ ೦೨೮

ಬಡ್ತಿ ಹೊಂದಿ ಮನೆಗೆ ಬಂದೆ. 'ನೀವೀಗ ಕಾಲೇಜಿನಲ್ಲಿ ಓದುತ್ತಿರಬಹುದಲ್ಲವೆ?' ಕೇಳಿದ್ದಳು ರಹೀಮ್ ಬೀಬಿ. 'ಇಲ್ಲ ಬಾಬಿ, ನಾನಿನ್ನೂ ಹತ್ತನೇ ತರಗತಿಯಲ್ಲಿದ್ದೇನೆ. ಈ ಸಲ ಪಾಸ್ ಆಗಿ ಕೆಲಸಕ್ಕೆ ಸೇರಿ ನನ್ನ ಮೊದಲನೇ ಗಳಿಕೆಯಲ್ಲಿ ನಿಮಗೆ ಉಡುಗೊರೆ ತರುವೆ' ಅಂದೆ. 'ಇಲ್ಲ ಬಾವುಜಿ, ನಿಮ್ಮ ಮೊದಲ ಗಳಿಕೆಯನ್ನು ಚಾಚಿಗೆ ಕೊಡಿ. ದೇವರ ಪೂಜೆ, ಕಾಣಿಕೆ ಖರ್ಚಿಗೆಂದು ಅವರಿಗೆ ದುಡ್ಡು ಬೇಕಾಗುತ್ತದೆ. ನಾನು ಬೇಕಾದರೆ ಇನ್ನೊಂದು ವರ್ಷ ಕಾಯುತ್ತೇನೆ' ಅಂದಳು. 'ನನ್ನ ಸ್ವಂತ ಅತ್ತಿಗೆಯ ಮುಖ ನೋಡುವುದೂ ಇಷ್ಟು ಕಷ್ಟ ಎಂದು ನನಗೆ ಗೊತ್ತಿರಲಿಲ್ಲ ಬಾಬಿ' ಅಂದಿದ್ದೆ. 'ಬಾವುಜಿ, ನನ್ನ ಮುಖ ನೋಡಲು ಎಷ್ಟು ಸಮಯ ಕಾಯುತ್ತೀರೋ ಅಷ್ಟು ಹೊತ್ತೂ ನಿಮ್ಮ ಕುತೂಹಲ ಹೆಚ್ಚುತ್ತದೆ. ವಯಸ್ಸು ಹೆಚ್ಚಿದಂತೆ ಕುತೂಹಲ ಕಡಿಮೆಯಾಗುತ್ತದಂತೇನಿಲ್ಲ. ಕೆಲವು ಸಲ ಆಸೆಗಳು ಕೈಗೂಡದಿದ್ದಾಗ ಕೆಲವರು ಅವುಗಳಿಂದ ವಿಮುಖರಾಗುತ್ತಾರೆ. ನಿಮಗೆ ಏನು ಆಸೆ ಆಕಾಂಕ್ಷೆಗಳಿವೆಯೋ ಗೊತ್ತಿಲ್ಲ. ನನಗೆ ತಿಳಿದಂತೆ ಈಗ ನಿಮಗಿರುವ ಒಂದೇ ಒಂದು ಆಸೆ, ನನ್ನ ಮುಖ ನೋಡುವುದು. ಅದನ್ನೇಕೆ ಇಷ್ಟು ಬೇಗ ಕೊನೆಗೊಳಿಸುತ್ತೀರಿ? ಆ ಆಸೆ ಹೆಚ್ಚಲಿ, ಇನ್ನೂ ದೃಢವಾಗಲಿ' ಅಂದಿದ್ದಳು. ಅಲ್ಲಿಯವರೆಗೂ ಆಕೆಯ ಮುಖ ನೋಡುವ ಕುತೂಹಲ ಕೇವಲ ಹುಡುಗಾಟಿಕೆ ಎಂದು ತಿಳಿದಿದ್ದೆ. ಆದರದು ಹಠವಾಗಿ ಬೆಳೆಯುತ್ತಿದೆ. ನನ್ನ ಗಳಿಕೆಯಿಂದಲೇ ಅವಳಿಗೆ ಉಡುಗೊರೆ ಕೊಡುವೆನೆಂದು ಮಾಡಿದ ನಿರ್ಧಾರವೀಗ ಮತ್ತಷ್ಟು ದೃಢವಾಗಿದೆ.

ನಾನೊಂದು ತಿಳಿದರೆ ದೈವವೊಂದು ಬಗೆಯಿತು. ಹತ್ತನೆಯ ತರಗತಿ ಮುಗಿದ ನಂತರ ಕಾಲೇಜೊಂದಕ್ಕೆ ಸೇರಬೇಕಾಯಿತು. ಮೂರು ವರ್ಷ ಕಾಲೇಜಿನಲ್ಲಿ ಓದಿದ್ದಕ್ಕೆ ದುಡಿಯಲು, ದುಡ್ಡು ಗಳಿಸಲು ಆಗಲೇ ಇಲ್ಲ. ತಂದೆ ತೀರಿಹೋದದ್ದರಿಂದ ನನ್ನ ಕಾಲೇಜಿನ ಖರ್ಚನ್ನು ಬೇರೆಯವರು ನೋಡಿಕೊಂಡರು. ಹೊಲ – ಮನೆ ನೋಡಿಕೊಳ್ಳಲು ಯಾರೂ ಇಲ್ಲದ ಕಾರಣ ಡಿಗ್ರಿ ಮುಗಿಸಿ ಮನೆಗೆ ಹಿಂದಿರುಗಿದೆ. ನನ್ನ ಮದುವೆಯೂ ಆಯಿತು. ಆದರೆ ರಹೀಮ್ ಬೀಬಿ ಮಾತ್ರ ಮುಖಗವಸು ತೆಗೆಯಲೇ ಇಲ್ಲ. ನಾನವಳಿಗೆ ಉಡುಗೊರೆ ಕೊಡಲೂ ಆಗಲಿಲ್ಲ. ಆಕೆ ಭೇಟಿಯಾದಾಗೆಲ್ಲಾ, 'ಬಾವುಜಿ, ನೀವು ಉಡುಗೊರೆ ಕೊಡದೆ ನಾನು ಮುಖಗವಸು ತೆಗೆಯುವುದಿಲ್ಲ' ಅನ್ನುತ್ತಿದ್ದಳು. ಆಕೆ ಬೆಳ್ಳಗೆ ಸುಂದರವಾಗಿದ್ದು ಮೈಕಟ್ಟೂ ಅಷ್ಟೇ ಆಕರ್ಷಕವಾಗಿತ್ತು. ಅವಳ ಸೌಂದರ್ಯ ನನ್ನ ಹೆಂಡತಿಯಲ್ಲೂ ಮತ್ಸರ ಮೂಡಿಸಿತ್ತು. ಮದುವೆಯಲ್ಲಿ ಕೊಂಡ ನನ್ನಾಕೆಯ ಬೆಳ್ಳಿ ಬಣ್ಣದ ಎಂಬ್ರಾಯಿಡರಿ ಸ್ಯಾಂಡಲ್ಸ್ ಇನ್ನೂ ಹಾಗೆ ಮಿಂಚುತ್ತಿದ್ದವು. ರಹೀಮ್ ಬೀಬಿಯ ಸ್ಯಾಂಡಲ್ಸ್ ಮಾಸಿದಂತಾಗಿದ್ದರೂ, ಅವಳ ಆ ಮೈಬಣ್ಣ ಮತ್ತು




ಚೆಲುವಿನಿಂದಾಗಿ ನವವಧುಗಳು ಕಸಿವಿಸಿಯಾದದ್ದಂತೂ ಸುಳ್ಳಲ್ಲ.

'ರಹೀಮು ಮುಖಗವಸು ಹಾಕಿಕೊಂಡೇ ಏಕೆ ನಿಮ್ಮ ಜೊತೆ ಮಾತಾಡುತ್ತಾಳೆ' ಎಂದೊಂದು ದಿನ ನನ್ನಾಕೆ ಕೇಳಿದಳು. 'ರಹೀಮು ಬಾಬಿ ನನ್ನ ಕಡೆಯಿಂದ ಉಡುಗೊರೆ ಪಡೆದ ಮೇಲೆಯೆ ಮುಖಗವಸು ತೆಗೆಯುತ್ತಾಳೆ. ಆದರೆ ಸರ್‌ಯು ಬಾಬಿಯಂತೆಯೆ ಆಪ್ತವಾಗಿ ಮಾತಾಡುತ್ತಾಳೆ' ಅಂದೆ. 'ಸರ್‌ಯು ಬಾಬಿ ನಿಮ್ಮ ಅಣ್ಣನ ಹೆಂಡತಿ ಆದರೆ ಆಕೆ ಮುಸ್ಲಿಂ ಹೆಣ್ಮಗಳು. ಆಕೆಯೊಂದಿಗೆ ನಿಮ್ಮದೆಂಥ ಸಂಬಂಧ?' ಅಂದಳು. 'ಪೂಜಿಸುವ ದೇವರು ಬೇರೆಯಾದರೇನು? ನಾವು ಒಂದೇ. ನಮ್ಮಲ್ಲಿ ಬಿರುಕು ಮೂಡಲು ಸಾಧ್ಯವಿಲ್ಲ'. 'ನೀವು ಹಾಗೆ ಹೇಳಬಹುದು ಆದರೆ ಜನ ಹಾಗಿಲ್ಲ', ಅಂದಳು. 'ಇಲ್ಲಿ, ಬೇರೆಯವರು ಹೇಳಿದಂತೆ ನಾನು ನಡೆಯುವುದಿಲ್ಲ. ಈ ವಿಷಯದಲ್ಲಿ ನಾನು ಹೇಳಿದಂತೆ ಅವರು ಕೇಳಲೆಂದು ಬಯಸುತ್ತೇನೆ. ಜನರಿದ್ದಂತೆ ಜಗತ್ತು. ಆದರೆ ಜನರು ಯಾರನ್ನು ಅನುಸರಿಸಿ ನಡೆಯುತ್ತಾರೆ ಹಾಗೂ ಬದುಕುತ್ತಾರೆ?' ಎಂಬ ನನ್ನ ಪ್ರಶ್ನೆಗೆ ಆಕೆ ಉತ್ತರಿಸಲಿಲ್ಲ.

ರಮಜಾನ್ ಹಬ್ಬದ ದಿನ, ರಹೀಮು ಬೀಬಿಗೆ 'ಮುಸ್ಲಿಮರು ಉಪವಾಸ ಮಾಡುತ್ತಾರೆ. ನೀವು ಮಾಡುವುದಿಲ್ಲವೆ?' ಅಂದೆ.

'ನನಗೆ ಹಸಿವು ತಡೆದುಕೊಳ್ಳಲಾಗುವುದಿಲ್ಲ. ಅಷ್ಟು ದಿನಗಳವರೆಗೆ ಉಪವಾಸ ಇರಲಾಗುವುದಿಲ್ಲ.'

'ಹಾಗಾದರೆ ನೀವು ಯಾವ ದಿನ ಉಪವಾಸ ಮಾಡುತ್ತೀರಿ?'

'ನಾನು ನೀರು ತರಲು ಯಾವ ದಿನ ಬಾವಿಗೆ ಬರುವುದಿಲ್ಲವೊ ಆ ದಿನ ಉಪವಾಸ ಇದ್ದೇನೆಂದು ತಿಳಿಯಿರಿ'.

'ಹಾಗಾದರೆ ನಾನಂದು ತಂದುಕೊಡುವ ಸಿಹಿತಿನಿಸು ತಿಂದು ನಿಮ್ಮ ಉಪವಾಸ ಬಿಡಬಾರದೇಕೆ?'

'ಬೇಡ ಬೇಡ, ಹಾಗಾಗುವುದಿಲ್ಲ. ಅದನ್ನು ತಂದು ಕೊಡಬೇಕಾದವರು ತಂದರೇ ಚೆಂದ.'

'ಮತ್ತೆ ಇನ್ನೇನು ತರಲಿ?'

'ಉಡುಗೊರೆ. ನೀವು ಉಡುಗೊರೆ ತಂದುಕೊಟ್ಟ ಮೇಲೆಯೆ ನಾನು ಈದ್‌ನ ಚಂದಿರನನ್ನು ನೋಡುವುದು'.

'ಆಯ್ತು. ಆದರೆ ಚಂದಿರನೆಲ್ಲಿ ಕಾಣುತ್ತಾನೆ ಹೇಳಿ? ಮುಖದ ಮೇಲೆ ನೀವು ಇಳಿಬಿಟ್ಟ ಪರದೆಯ ಗ್ರಹಣದಿಂದ ಪೂರ್ಣಿಮೆ ಚಂದಿರ ಕಾಣುವುದೇ ಇಲ್ಲ'.

ಆರು ತಿಂಗಳ ನಂತರ, ಯಾಕೋ ಶಂಸು ನೀರಿಗೆ ಬರತೊಡಗಿದ. ನಾನು ಬೀಬಿಯ ಬಗ್ಗೆ ಕೇಳಿದೆ. ಅವಳಿಗೆ ಆರೋಗ್ಯ ಸರಿಯಿಲ್ಲವೆಂದು ತಿಳಿಯಿತು. ಜ್ವರದಿಂದ ಶುರುವಾದ ಕಾಯಿಲೆ ಟೈಫಾಯ್ಡ್ ಆಗಿ ನ್ಯೂಮೋನಿಯಾಕ್ಕೆ ತಿರುಗಿತ್ತು. ದಿನದಿಂದ ದಿನಕ್ಕೆ ರೋಗ ಉಲ್ಬಣಿಸುತ್ತಲೇ ಹೋಯಿತು. ಹಕೀಮರು ಈ ವಿಷಯದಲ್ಲಿ ಕೈಚೆಲ್ಲಿದರು. ವೈದ್ಯರಿಗೂ ಅವಳ ಆರೋಗ್ಯದ ಚೇತರಿಕೆಯ ಲಕ್ಷಣಗಳು ಕಂಡುಬರಲಿಲ್ಲ. ಒಂದು ದಿನ ಶಂಸು ಓಡಿಬಂದು, "ನಿನ್ನೆ ರಾತ್ರಿಯಿಂದ ಬೀಬಿಯ ಆರೋಗ್ಯ ತೀರಾ ಹದಗೆಟ್ಟಿದೆ. ಅವಳು 'ಬಾವುಜಿಯನ್ನು ಕರೆದುಕೊಂಡು ಬನ್ನಿ. ನಾನು ಹೋಗುತ್ತಿದ್ದೇನೆ. ಕೊನೆಯ ಸಾರಿ ಅವರ ಮುಖ ತೋರಿಸಿ ಹೋಗೆಂದು ಅವರಿಗೆ ಹೇಳಿ' ಎಂದು ಎಲ್ಲರಿಗೂ ಹೇಳುತ್ತಿದ್ದಾಳೆ. ಅದಕ್ಕೆ ನಾನು ಬಂದೆ" ಅಂದ.

ನಾನು ತತ್‌ಕ್ಷಣವೇ ಶಂಸು ಜೊತೆಗೆ ಓಡಿ ಹೋದೆ. ಆಕೆಯನ್ನು ಮಂಚದ ಮೇಲೆ ಮಲಗಿಸಿದ್ದರು. ಮುಖ ಸ್ಪಷ್ಟವಾಗಿ ಕಾಣುತ್ತಿತ್ತು. ಸುಂದರ ಮುಖದಲ್ಲಿ ಹೊಳೆವ ಅದೇ ಆ ಕಪ್ಪು ಕಂಗಳು, ಗಲ್ಲದ ಮೇಲಿನ ನೇರಳೆ ಬಣ್ಣದ ಮೊಡವೆಗಳನ್ನು ನೋಡಿದಾಗ ನನಗೊಂದು ಕ್ಷಣ ಗ್ರೀಕ್ ಸೌಂದರ್ಯ ದೇವತೆಯನ್ನು ನೋಡಿದಂತಾಯಿತು. ಆಕೆ ನಿಧಾನವಾಗಿ ನನ್ನೆಡೆ ತಿರುಗಿ, 'ನಾನು ನಿಮ್ಮಿಂದ ಉಡುಗೊರೆ ಪಡೆಯದೇ ಇಂದು ಮುಖಗವಸು ತೆಗೆದಿದ್ದೇನೆ. ನೀವೀಗ ನನ್ನ ಮುಖ ನೋಡಬಹುದು. ನಿಮ್ಮನ್ನು ನೋಡಲೆಂದೇ ನಾನು ನನ್ನ ಜೀವ ಕಣ್ಣಲ್ಲಿ ಹಿಡಿದಿದ್ದೆ. ನೀವು ಸ್ಮಶಾನದವರೆಗೂ ಬಂದು ನನಗೊಂದು ಹಿಡಿ ಮಣ್ಣು ಹಾಕಿದರೆ ಅದೇ ನೀವು ನನಗೆ ಕೊಡುವ ಉಡುಗೊರೆ. ಇಲ್ಲವೆಂದರೆ ಅದರ ಬಗೆಗಿನ ನನ್ನಾಸೆ ಸಮಾಧಿಯಲ್ಲೂ ಹಾಗೇ ಉಳಿಯುತ್ತದೆ' ಅಂದು ಕಣ್ಮುಚ್ಚಿದಳು.

**ಪರಿಮಳ ಜಿ. ಕಮತಾರ್**
ರೀಸರ್ಚ್ ಸ್ಕಾಲರ್ (ಪಿಎಚ್.ಡಿ.), ಇಂಗ್ಲಿಷ್ ವಿಭಾಗ
ಸ್ಕೂಲ್ ಆಫ್ ಹುಮ್ಯಾನಿಟೀಸ್ ಅಂಡ್ ಲಾಂಗ್ವೇಜಸ್
ಸೆಂಟ್ರಲ್ ಯೂನಿವರ್ಸಿಟಿ ಆಫ್ ಕರ್ನಾಟಕ
ಕಲಬುರಗಿ – ೫೮೫ ೩೬೭

## ಸದಾಶಿವ ಮರ್ಜಿ

# ದಮನಿತ ಅಸ್ಪೃಶ್ಯ ತಳ ಸಮುದಾಯಗಳು ಮತ್ತು ಸಾಮಾಜಿಕ ಬಹಿಷ್ಕೃತತೆ-ಸಮಾಜಶಾಸ್ತ್ರೀಯ ವಿಶ್ಲೇಷಣೆ

ಸಾಮಾಜಿಕ ಬಹಿಷ್ಕೃತತೆ ಸಂಬಂಧಿತ ಸಾಮಾಜಿಕ ತಾರತಮ್ಯದ ಸ್ವರೂಪ ಮತ್ತು ಆಯಾಮಗಳನ್ನು ದಮನಿತ ಅಸ್ಪೃಶ್ಯ ತಳ ಸಮುದಾಯಗಳ ಅಧ್ಯಯನದಿಂದ ಮಾತ್ರ ಅರ್ಥೈಸಬಹುದು. ಜಾತಿಯೊಂದು ಶ್ರೇಣೀಕೃತ ವ್ಯವಸ್ಥೆ ಮಾತ್ರವಲ್ಲ, ಅದೊಂದು ಸಾಂಸ್ಥೀಕರಣಕ್ಕೊಳ್ಳಪಟ್ಟ, ಸಾಮಾಜಿಕ ತಾರತಮ್ಯಗಳನ್ನೊಳಗೊಂಡ ಸಂಕೀರ್ಣವಾದ ವ್ಯವಸ್ಥೆಯಾಗಿರುವದು. ಜಾತಿ ಆಧಾರಿತ ಸಾಮಾಜಿಕ ಬಹಿಷ್ಕೃತತೆಯಿಂದಾಗಿ ಭಾರತೀಯ ಸಮಾಜದಲ್ಲಿ ಕೆಲವು ಜಾತಿಗಳಿಗೆ ನಾಗರಿಕ, ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಹಕ್ಕುಗಳನ್ನು ನಿರಾಕರಿಸಲಾಗಿದ್ದು, ಮೂಲಭೂತ ಸೌಕರ್ಯಗಳಾದ ವಸತಿ, ಕುಡಿಯುವ ನೀರು, ಆರೋಗ್ಯ, ಶಿಕ್ಷಣ ಮುಂತಾದವುಗಳಿಂದ ಅವರನ್ನು ವಂಚಿತರನ್ನಾಗಿ ಮಾಡಲಾಗಿದೆ. ಸಮಾಜದ ಅಂಚಿಗೆ ತಳ್ಳಲ್ಪಟ್ಟ ದಮನಿತ ತಳಸಮುದಾಯಗಳಿಗೆ ಮೂಲಭೂತ ಹಕ್ಕುಗಳು ಮತ್ತು ಸೌಲಭ್ಯಗಳನ್ನು ನಿರಾಕರಿಸಿರುವುದರ ಮೂಲ ಬೇರುಗಳು ಸಾಮಾಜಿಕ ಅಸಮಾನತೆಯನ್ನು ಪೋಷಿಸಿಕೊಂಡು ಬಂದಿರುವ ಜಾತಿಪದ್ಧತಿಯಲ್ಲಿ ಹುದುಗಿಕೊಂಡಿವೆ. ರಾಷ್ಟ್ರೀಯ, ನೈಸರ್ಗಿಕ ಮತ್ತು ಇತರೆ ಸಂಪನ್ಮೂಲಗಳ ಹಂಚಿಕೆಯು ತಾರತಮ್ಯದಿಂದ ಕೂಡಿದ್ದು, ಸಮಾಜದ ಕೆಳ ಸಮುದಾಯಗಳು ಅವುಗಳಿಂದ ವಂಚಿತಗೊಂಡು ಸಮಾಜದ ಅಂಚಿಗೆ ತಳ್ಳಲ್ಪಟ್ಟಿರುವದು ವಾಸ್ತವ ಸಂಗತಿಯಾಗಿದೆ.

ಸಮಾಜದ ಕೆಲವು ಜಾತಿಗಳನ್ನು ಜಾತಿಯ ಆಧಾರದ ಮೇಲೆ ಸಾಮಾಜಿಕ ಬಹಿಷ್ಕೃತತೆಗೆ ಒಳಪಡಿಸಿ ಅವುಗಳಿಗೆ ನಾಗರಿಕ, ಆರ್ಥಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಹಕ್ಕುಗಳನ್ನು ಹಾಗೂ ಕೃಷಿಭೂಮಿ, ಉದ್ಯೋಗ, ಶಿಕ್ಷಣ ಮತ್ತು ಸಾಮಾಜಿಕ ಮೂಲಭೂತ ಅವಶ್ಯಕತೆಗಳಾದ ವಸತಿ, ನೀರು, ವಿದ್ಯುತ್, ಆರೋಗ್ಯ, ಶಿಕ್ಷಣ ಮುಂತಾದವುಗಳನ್ನು ನಿರಾಕರಿಸಿರುವದು ವಾಸ್ತವವಾದ ಸ್ಥಿತಿಯಾಗಿದೆ. ಇದರಿಂದಾಗಿ ಈ ಸಮುದಾಯಗಳು ಸಮಾಜದ ಮುಖ್ಯವಾಹಿನಿಯಿಂದ ದೂರ ಸರಿಸಲ್ಪಟ್ಟು ಸಮಾಜದ ಅಂಚಿಗೆ ತಳ್ಳಲ್ಪಟ್ಟು ಬಹಿಷ್ಕೃತತೆಗೊಳಗಾಗಿರುವದು ವಾಸ್ತವ ಸಂಗತಿಯಾಗಿದೆ. ಮೊದಲನೆಯದು, ಸಾಮಾಜಿಕ ಬಹಿಷ್ಕೃತತೆಯೆಂದರೆ ಸಮಾಜದ ಕೆಲವು ವರ್ಗಗಳನ್ನು ಹಾಗೂ ಜಾತಿಗಳ ಸಮೂಹಗಳನ್ನು ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ ಮತ್ತು ಧಾರ್ಮಿಕ ಕ್ಷೇತ್ರಗಳಿಂದ ಬಹಿಷ್ಕರಿಸುವದು ಮತ್ತು ಅದನ್ನು ಸಾಂಸ್ಥೀಕರಿಸುವದು. ಎರಡನೆಯದು ಜಾತಿ ಆಧಾರಿತ ಬಹಿಷ್ಕೃತತೆ ಮತ್ತು ಹಕ್ಕುಗಳ ನಿರಾಕರಣೆಯಿಂದಾಗಿ ತಳ ಸಮುದಾಯಗಳಿಗೆ ನಾಗರಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಆರ್ಥಿಕ ಹಕ್ಕುಗಳನ್ನು ನಿರಾಕರಿಸಿರುವುದರ ಫಲಶ್ರುತಿಯಿಂದಾಗಿ ಅವರು ಕೃಷಿ ಭೂಮಿ, ಉದ್ಯೋಗ, ಶಿಕ್ಷಣ ಮತ್ತಿತರ ಮೂಲಭೂತ ಸೌಲಭ್ಯಗಳಾದ ವಸತಿ, ನೀರು, ಆರೋಗ್ಯ ಮತ್ತು ವಿದ್ಯುತ್‌ನಂತಹ ಅವಶ್ಯಕತೆಗಳಿಂದ ಬಹಿಷ್ಕೃತತೆ ಅನುಭವಿಸುವಂತಾಗಿದೆ. 'ಸಾಮಾಜಿಕ ಬಹಿಷ್ಕೃತತೆ' ಎಂಬುದು ಭಾರತೀಯ ಸಮಾಜದ ದಮನಿತ ತಳ ಸಮುದಾಯಗಳನ್ನು ಎಲ್ಲ ಮೂಲಭೂತ ಪ್ರಕ್ರಿಯೆಗಳಿಂದ ಬಹಿಷ್ಕೃತತೆಗೊಳಿಸುವದು. ಜಾತಿ ಆಧಾರಿತ ಸಾಂಸ್ಥೀಕರಣಗೊಂಡ ಸಾಮಾಜಿಕ ಬಹಿಷ್ಕೃತತೆ ಪರಿಣಾಮ ಎಂದರೆ ಕೆಲವು ಜಾತಿಗಳನ್ನು ಮುಖ್ಯವಾಹಿನಿಯಿಂದಲೇ ಭೌತಿಕವಾಗಿ ಪ್ರತ್ಯೇಕಿಸುವದಾಗಿದೆ.

ಡೆಹಾನ್‌ರವರ ಪ್ರಕಾರ 'ತಾವು ಜೀವಿಸುವ ಸಮಾಜದ ಮುಖ್ಯವಾಹಿನಿಯಲ್ಲಿ ಭಾಗವಹಿಸುವುದನ್ನು ಇಡಿಯಾಗಿ ಇಲ್ಲವೇ ಪ್ರತ್ಯೇಕವಾಗಿ ವ್ಯಕ್ತಿ ಅಥವಾ ಸಮೂಹಗಳನ್ನು ಬಹಿಷ್ಕೃತತೆಗೊಳಪಡಿಸುವ ಪ್ರಕ್ರಿಯೆಯೇ ಸಾಮಾಜಿಕ ಬಹಿಷ್ಕೃತತೆ. ಅಂದರೆ ಜಾತಿವ್ಯವಸ್ಥೆಯೇ ಸಾಮಾಜಿಕ ಬಹಿಷ್ಕೃತತೆಯ ಮೂಲ'.

ವಾಕರ್ ಮತ್ತು ವಾಕರ್‌ರವರ ಪ್ರಕಾರ 'ಸಾಮಾಜಿಕ ಬಹಿಷ್ಕೃತತೆ ಎಂದರೆ ನಾಗರಿಕನಿಗೆ ನಾಗರಿಕ, ರಾಜಕೀಯ ಮತ್ತು ಸಾಮಾಜಿಕ ಹಕ್ಕುಗಳನ್ನು ನಿರಾಕರಿಸುವದೇ ಆಗಿದೆ'.

**ಗೋರೆ ಮತ್ತು ಫಿಗೇರೇಡೋರವರ ವಿಶ್ಲೇಷಣೆ**

ಸಾಮಾಜಿಕ ಬಹಿಷ್ಕೃತತೆಯ ಮೂಲಭೂತ ಗುಣಲಕ್ಷಣಗಳನ್ನು ಈ ಕೆಳಕಂಡಂತೆ ವಿಶ್ಲೇಷಿಸಿದ್ದಾರೆ. ಅವುಗಳೆಂದರೆ :

೧) ಸಾಮಾಜಿಕ ಬಹಿಷ್ಕೃತತೆಯು ಋಣಾತ್ಮಕ ಸ್ವಭಾವದ ಪ್ರಕ್ರಿಯೆಯಾಗಿದ್ದು, ಕೆಲವು ವ್ಯಕ್ತಿಗಳು ಮತ್ತು ಸಮುದಾಯಗಳನ್ನು ಸಂಪನ್ಮೂಲ ಹಂಚಿಕೆಯ ಪ್ರಕ್ರಿಯೆಯಿಂದ ದೂರವಿಡುವದು ಮತ್ತು ರಾಜಕೀಯ ಭಾಗವಹಿಸುವಿಕೆ

ಕೆಳಮಟ್ಟದ ನಗರೀಕರಣ, ಉದ್ಯೋಗಗಳ ಅವಕಾಶಗಳ ಕೊರತೆ, ಸಾಕ್ಷರತೆಯ ಪ್ರಮಾಣದ ಕುಸಿತ, ಕಡಿಮೆ ದಿನಗೂಲಿ ಹಾಗೂ ಸಾಮಾಜಿಕ ಅಭಿವೃದ್ಧಿಯಲ್ಲಿ ಅವಕಾಶಗಳಿಲ್ಲದಿರುವುದರಿಂದ ತಳ ಸಮುದಾಯಗಳು ತಾರತಮ್ಯದಿಂದ ತತ್ತರಿಸಿವೆ. ದಮನಿತ ಅಸ್ಪೃಶ್ಯ ತಳ ಸಮುದಾಯಗಳು ಮೂಲಭೂತ ಸಂಪನ್ಮೂಲ ವಂಚಿತರಾಗಿದ್ದಾರೆ. ಅದರ ಪರಿಣಾಮದಿಂದ ಉದ್ಯೋಗದ ಅವಕಾಶ ಕಡಿಮೆಯಾಗಿ ಆರ್ಥಿಕ ಸಂಕಷ್ಟದಿಂದ ಬಳಲುವ ಪರಿಸ್ಥಿತಿ ಉಂಟಾಗಿದೆ. ಬೇರೆ ಸಮುದಾಯಗಳಿಗೆ ಹೋಲಿಸಿದಲ್ಲಿ ಅಸ್ಪೃಶ್ಯ ತಳ ಸಮುದಾಯಗಳು ಕೃಷಿ, ಕೈಗಾರಿಕೆ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಕಡಿಮೆ ಪ್ರಾತಿನಿಧ್ಯವನ್ನು ಹೊಂದಿವೆ. ಅಸ್ಪೃಶ್ಯ ಜಾತಿಗಳಲ್ಲಿ ನಿರುದ್ಯೋಗ ಸಮಸ್ಯೆಯು ಇತರೆ ಸಮುದಾಯಗಳಿಗೆ ಹೋಲಿಸಿದಲ್ಲಿ ತೀವ್ರವಾಗಿರುವದು ಕಂಡುಬರುತ್ತದೆ.



ನಿರಾಕರಣೆ, ಸಾಂಸ್ಕೃತಿಕ ಮತ್ತು ಸಾಮಾಜಿಕ ಅಸ್ಮಿತೆಯನ್ನು ಅಲ್ಲಗಳೆಯುವದು.

೨) ಬಹಿಷ್ಕೃತತೆಯು ವ್ಯಕ್ತಿಗಳು ಮತ್ತು ಸಮುದಾಯಗಳು ಸಾಮಾಜಿಕ ಕೀಳರಿಮೆಯಿಂದ ನರಳುವಂತೆ ಮಾಡುತ್ತದೆ.

೩) ಸಾಮಾಜಿಕ ಬಹಿಷ್ಕೃತತೆಯು ವ್ಯಕ್ತಿಗಳ ದೌರ್ಬಲ್ಯವೆಂದು ಪರಿಗಣಿಸಲ್ಪಟ್ಟಿದೆ.

೪) ವ್ಯಕ್ತಿಗಳು ಮತ್ತು ಸಮೂಹಗಳಿಗೆ ಕೆಲವು ವಸ್ತುಗಳು, ಸೇವೆಗಳು, ಸಾಂಸ್ಕೃತಿಕ ಚಟುವಟಿಕೆಗಳು ಹಾಗೂ ನಾಗರಿಕತ್ವದೊಂದಿಗೆ ಬೆಸೆದುಕೊಂಡ ಕೆಲವು ಪ್ರಕ್ರಿಯೆಗಳಿಂದ ನಿರಾಕರಿಸುವುದಾಗಿದೆ.

ಎಸ್ಟಾನಿಸ್ಲೋಆ ಗೋರಿಟೋ ಅವರ ಪ್ರಕಾರ 'ಸಮಾಜದ ಕೆಲವು ಸಮೂಹಗಳು ಸಾಮಾಜಿಕ ಚಲನೆಗೊಳಗಾಗದಂತೆ ನಿರ್ಬಂಧಿಸಿ, ಅವುಗಳ ಭೌತಿಕ ಪ್ರತ್ಯೇಕತೆಯನ್ನು ಕಾಪಾಡಿಕೊಳ್ಳುವದು ಮತ್ತು ಅವರ ವಾಸಸ್ಥಳ, ಹೆಸರು, ಲಿಂಗ ಹಾಗೂ ವಯಸ್ಸಿನ ಆಧಾರದ ಮೇಲೆ ಸಮಾಜದ ಅಂಚಿಗೆ ತಳ್ಳುವ ಪ್ರಕ್ರಿಯೆಯೇ ಸಾಮಾಜಿಕ ಬಹಿಷ್ಕೃತತೆ'. ಹಿಲ್ಲರಿ ಸಿಲ್ವರ್ ಅವರ ಪ್ರಕಾರ 'ಸಾಮಾಜಿಕ ಬಹಿಷ್ಕೃತೆಯು ಅತ್ಯುಗ್ರತೆ, ಅಪ್ರಸ್ತುತತೆ, ಅಂಚಿಗೆ ತಳ್ಳಲ್ಪಟ್ಟ ಸ್ಥಿತಿ, ಪರಕೀಯತೆ, ಪ್ರತ್ಯೇಕೀಕರಣಗೊಳ್ಳುವದು, ಮುಚ್ಚಿಕೊಳ್ಳುವಿಕೆ, ಬೇರ್ಪಟ್ಟಿರುವಿಕೆ, ಹೊರ ದೂಡಲ್ಪಟ್ಟಿರುವಿಕೆ, ಉಚ್ಚಾಟಿತ ಸ್ಥಿತಿ, ವಂಚಿತ ಸ್ಥಿತಿ, ನಿರ್ಗತೀಕರಣಗೊಳ್ಳುವಿಕೆ ಮುಂತಾದ ಶಬ್ದಗಳೊಂದಿಗೆ ಬೆಸೆದುಕೊಂಡಿದೆ' ಎಂದು ಅಭಿಪ್ರಾಯಪಟ್ಟಿದ್ದಾರೆ.

**ದಮನಿತ ತಳ ಸಮುದಾಯಗಳು ಮತ್ತು ಸಾಮಾಜಿಕ ಬಹಿಷ್ಕೃತತೆ**

೧) ದಮನಿತ ತಳ ಸಮುದಾಯಗಳೆಂದರೆ ಬಡತನ, ಹಸಿವು ಮತ್ತು ಬದುಕಿನ ಸವಾಲುಗಳಿಗೆ ತೀವ್ರವಾಗಿ ಬಲಿಯಾದವರು, ಅವರ ಬದುಕು ಅಪ್ರಸ್ತುತವಾದುದು, ಅವರು ಅಂಚಿಗೆ ತಳ್ಳಲ್ಪಟ್ಟವರು, ತಮ್ಮ ತಾಯ್ನಾಡಿನಲ್ಲಿಯೇ ಪರಕೀಯರಾಗಿರುವವರು, ಅವಕಾಶಗಳು ಅವರಿಗೆ ಮುಚ್ಚಿಕೊಂಡಿರುವ ಸ್ಥಿತಿಯಲ್ಲಿರುವದು, ಸಮಾಜದ ಪ್ರತಿ ಸಮೂಹವು ದಮನಿತ ತಳ ಸಮುದಾಯಗಳಿಂದ ಸಂಬಂಧ ಕಡಿದುಕೊಂಡಿರುವದು, ಇಡೀ ಸಮಾಜವು ಅವರನ್ನು ವಂಚಿತ ಸ್ಥಿತಿಗೆ ತಳ್ಳಿರುವದು. ಅಂತೂ ಒಟ್ಟಾರೆ ದಮನಿತ ತಳ ಸಮುದಾಯಗಳು ಎಲ್ಲ ಹಕ್ಕುಗಳಿಂದ ವಂಚಿತವಾದ, ಸಮಾಜದ ಅಂಚಿಗೆ ತಳ್ಳಲ್ಪಟ್ಟ ಸಮುದಾಯವಾಗಿರುವದು.

ಅರ್ಜನ್ ಡೇ ಹಾನ್‌ರವರು 'ತಾವು ಜೀವಿಸುವ ಸಮಾಜದಲ್ಲಿ ನಾಗರಿಕರಾಗಿ ಭಾಗವಹಿಸುವುದನ್ನು ಪ್ರತಿಬಂಧಿಸುವ ಪ್ರಕ್ರಿಯೆ ಹಾಗೂ ಕೆಲವು ವ್ಯಕ್ತಿಗಳು ಮತ್ತು ಸಮೂಹಗಳನ್ನು ಪ್ರತ್ಯೇಕೀಕರಣಕ್ಕೊಳಪಡಿಸಿ ಸಮಾಜದ ಅಂಚಿಗೆ ತಳ್ಳಿ ಅವರು ಮುಖ್ಯವಾಹಿನಿಯಿಂದ ದೂರ ಉಳಿಯುವಂತೆ ಮಾಡುವುದೇ ಸಾಮಾಜಿಕ ಬಹಿಷ್ಕೃತತೆ ಆಗಿರುವದು' ಎಂದು ಅಭಿಪ್ರಾಯಪಟ್ಟಿದ್ದಾರೆ.

ಅಮರ್ತ್ಯ ಸೇನ್‌ರವರ ಪ್ರಕಾರ ಸಮಾಜದಲ್ಲಿ ಕೆಲವು ಸಮುದಾಯಗಳನ್ನು ಬಹಿಷ್ಕರಿಸುವ ಹಾಗೂ ಇನ್ನು ಕೆಲವು ಸಮುದಾಯಗಳನ್ನು ಒಳಗೊಳ್ಳುವ ಪ್ರಕ್ರಿಯೆಗಳು ನಿರಂತರವಾಗಿ ನಡೆಯುತ್ತಲೇ ಇರುತ್ತವೆ. 'ಅಹಿತಕರ ಬಹಿಷ್ಕೃತತೆ (Unfavorable exclusion) ಮತ್ತು 'ಅಹಿತಕರ ಒಳಗೊಳ್ಳುವಿಕೆ' (Unfavorable exclusion) ಎಂದು ಅವರು ಅಭಿಪ್ರಾಯಪಟ್ಟಿರುವರು. ಮುಂದುವರಿದು, ಬಹಿಷ್ಕೃತತೆಯನ್ನು ಕ್ರಿಯಾಶೀಲ ಮತ್ತು ಜಡತ್ವ ಬಹಿಷ್ಕೃತತೆ ಎಂದು ಎರಡು ವಿಧದ ಬಹಿಷ್ಕೃತತೆಗಳನ್ನು ಅವರು ಗುರುತಿಸುತ್ತಾರೆ. ಕ್ರಿಯಾಶೀಲ ಬಹಿಷ್ಕೃತತೆ ಎಂದರೆ ಸರಕಾರ ಕೆಲವು ಯೋಜನೆ ಮತ್ತು ಧೋರಣೆಯ ಮೂಲಕ ಕೆಲವು ಸಮೂಹಗಳನ್ನು ಮುಖ್ಯವಾಹಿನಿಯಲ್ಲಿ ಭಾಗವಹಿಸದಂತೆ ನಿರ್ಬಂಧಿಸುವದು. ಜಡ ಬಹಿಷ್ಕೃತತೆ ಎಂದರೆ ಕೆಲವು ಜನ ಅಥವಾ ಸಮೂಹಗಳು ಬೇರೆ ಜನ ಅಥವಾ ಸಮೂಹಗಳೊಂದಿಗೆ ಹೊಂದಾಣಿಕೆ ಮಾಡಿಕೊಳ್ಳದ ಸ್ಥಿತಿಯಿಂದಾದ ಬಹಿಷ್ಕೃತತೆಯಾಗಿದೆ ಎಂದು ವಿಶ್ಲೇಷಿಸಿದ್ದಾರೆ.

**ಜಾತಿಯ ಬಹಿಷ್ಕೃತತೆ ಮತ್ತು ತಾರತಮ್ಯ ಪರಿಕಲ್ಪನೆ**

ಜಾತಿಯ ಅಸ್ಮಿತೆ ಮತ್ತು ಜನಾಂಗೀಯ ಹಿನ್ನೆಲೆಯ ಆಧಾರದ ಮೇಲೆ ಕೆಲವು ಸಮೂಹಗಳನ್ನು ಸಾಮಾಜಿಕ ಪ್ರಕ್ರಿಯೆಗಳಿಂದ ತಾರತಮ್ಯ, ಪ್ರತ್ಯೇಕತೆ ಹಾಗೂ ವಂಚನೆಗೊಳಪಡಿಸುತ್ತವೆ. ಜಾತಿ ಆಧಾರಿತ ಬಹಿಷ್ಕೃತತೆಯ ಮೂಲ ಬೇರುಗಳು ಐತಿಹಾಸಿಕವಾಗಿ ಉಳಿದುಕೊಂಡಿರುವದು ಶ್ರೇಣೀಕೃತ ಅಸಮಾನ ಜಾತಿ ವ್ಯವಸ್ಥೆಯಲ್ಲಿಯೇ ಜಾತಿಯ ಮೂಲ ಹುಟ್ಟು ಹಾಗೂ ವಂಶ ಪಾರಂಪರಿಕ ವೃತ್ತಿಗಳು ಅದನ್ನು ಮುಂದುವರಿಸಿಕೊಂಡು ಹೋಗುವಿಕೆಯೇ ಜಾತಿಪದ್ಧತಿಯ ಬಹುಮುಖ್ಯ ಲಕ್ಷಣವಾಗಿರುವದು. ಜಾತಿಯು ಸಾಮಾಜಿಕ ಮತ್ತು ಆರ್ಥಿಕ ಆಳ್ವಿಕೆ ಮತ್ತು ಆಧಿಪತ್ಯದ ರೂಪವಾಗಿದ್ದು, ಉತ್ಪಾದನೆ ಮತ್ತು ಹಂಚಿಕೆಯನ್ನು ನಿರ್ವಹಿಸುವ ಮತ್ತು ನಿಭಾಯಿಸುವ ಜವಾಬ್ದಾರಿ ಹೊಂದಿರುವ ಆಳ್ವಿಕೆಯ ರೂಪವಾಗಿದೆ. ಅದು ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡು ಬರಲು ಕೆಲವು ಸಂಪ್ರದಾಯ, ನಿಯಮಗಳು ಮತ್ತು ಮೌಲ್ಯಗಳನ್ನು ರೂಢಿಗತಗೊಳಿಸಿದ್ದು, ಅವು ಅನೂಚಾನವಾಗಿ ಪಾಲಿಸಿಕೊಂಡು ಬರುವಂತೆ ಸಾಮಾಜಿಕ ಕಟ್ಟಳೆಗಳನ್ನು ವಿಧಿಸುತ್ತವೆ. ಅವುಗಳನ್ನು ಧಿಕ್ಕರಿಸುವ ಸಮೂಹಗಳ ಮೇಲೆ ಸಾಮಾಜಿಕ ಬಹಿಷ್ಕಾರ ಹೇರುತ್ತ ಅವುಗಳ ಉಲ್ಲಂಘನೆಯಾಗದಂತೆ ತೀವ್ರ ನಿಗಾವಹಿಸುತ್ತದೆ. ಜಾತಿ ಎಂದರೆ ಶ್ರೇಣೀಕೃತ ವ್ಯವಸ್ಥೆ. ಇಂತಹ ವ್ಯವಸ್ಥೆ ಸಮಾಜದ ಎಲ್ಲ ಸಮೂಹಗಳನ್ನು ಅವುಗಳ ಹುಟ್ಟು ಮತ್ತು ವಂಶ ಪಾರಂಪರ್ಯಕ್ಕೊಳಪಟ್ಟ ವೃತ್ತಿಯ ಆಧಾರದ ಮೇಲೆ ವಿಭಜಿಸುತ್ತವೆ. ಈ ಸಾಮಾಜಿಕ ವಿಭಜನೆಯು ಶ್ರೇಣೀಕೃತವಾಗಿದ್ದು, ಅದು ಅಸಮಾನತೆಯನ್ನು ಪೋಷಿಸುವದು. ಈ ವ್ಯವಸ್ಥೆಯಲ್ಲಿ ಪ್ರತಿಯೊಂದು ಜಾತಿಗೆ ಅದರ ನಾಗರಿಕ, ಸಾಮಾಜಿಕ ಮತ್ತು ಆರ್ಥಿಕ ಹಕ್ಕುಗಳನ್ನು ಪೂರ್ವನಿರ್ಧಾರಿತಗೊಳಿಸಲಾಗಿರುತ್ತದೆ. ಆದುದರಿಂದ ನಾಗರಿಕ, ಸಾಂಸ್ಕೃತಿಕ, ಸಾಮಾಜಿಕ ಮತ್ತು ಆರ್ಥಿಕ ಹಕ್ಕುಗಳನ್ನು ಅಸಮಾನ ಮತ್ತು ಶ್ರೇಣೀಕೃತ ಆಧಾರದ ಮೇಲೆ ನೀಡುತ್ತಿರುವದು ಸಾಮಾಜಿಕ ಅಸಮಾನತೆಗೆ ಕಾರಣವಾಗಿದೆ. ಇದರಿಂದಾಗಿ ಕೆಲವು ಜಾತಿಗಳು ಮುಖ್ಯವಾಹಿನಿಯಿಂದ ಹೊರಗೆ ವ್ಯವಸ್ಥಿತವಾಗಿ ತಳ್ಳಲ್ಪಡುತ್ತವೆ.

ಆರ್ಥಿಕ ಮತ್ತು ಸಾಮಾಜಿಕ ದಂಡಗಳನ್ನೊಳಗೊಂಡ ಸಾಮಾಜಿಕ ಬಹಿಷ್ಕಾರದ ಸಾಧನದಿಂದ ಸಾಮಾಜಿಕ ಮತ್ತು ಆರ್ಥಿಕ ಸಂಘಟನೆಯನ್ನು ನಿರ್ವಹಿಸುವ ನಿಯಂತ್ರಣ ಕಾರ್ಯತಂತ್ರವನ್ನು ವ್ಯವಸ್ಥಿತವಾಗಿ ಜಾತಿಪದ್ಧತಿಯ ಮೂಲಕ ರೂಪಿಸಿರುತ್ತವೆ. ಡಾ. ಅಂಬೇಡ್ಕರ್ ಅವರ ಪ್ರಕಾರ 'ಹಿಂದೂ ಧರ್ಮದಲ್ಲಿಯ ತಾತ್ವಿಕ ಅಂಶಗಳ ಮೂಲಕ, ಅಂದರೆ ಕರ್ಮಸಿದ್ಧಾಂತ, ಸ್ವರ್ಗ–ನರಕ, ಪಾಪ–ಪುಣ್ಯ ಮತ್ತು ಪವಿತ್ರ–ಅಪವಿತ್ರ, ಶುದ್ಧ–ಅಶುದ್ಧತೆಗಳ ಆಧಾರಿತ ವ್ಯವಸ್ಥೆಯ ಮೂಲಕ ಜಾತಿಯ ನಿಯಮಗಳು ಉಲ್ಲಂಘನೆಯಾಗದಂತೆ ನೋಡಿಕೊಳ್ಳುತ್ತವೆ.'

ಜಾತಿಪದ್ಧತಿಯ ಮೂಲ ಲಕ್ಷಣವೆಂದರೆ ಪ್ರತಿಯೊಂದು ಜಾತಿಗೂ ಪೂರ್ವನಿರ್ಧರಿತ ಸಾಮಾಜಿಕ, ನಾಗರಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಹಕ್ಕುಗಳನ್ನು ನೀಡಿರುವದು ಮತ್ತು ಅದನ್ನು ಬದಲಾಯಿಸಲು ನಿರ್ಬಂಧಗಳಿರುವುದರಿಂದಲೇ ಅದನ್ನು ಬಲಪ್ರಯೋಗದ ಬಹಿಷ್ಕೃತತೆ ಎಂದು ಕರೆಯಬಹುದು. ಉದ್ಯೋಗ ಮತ್ತು ವೃತ್ತಿಗಳ ಮೇಲಿನ ನಿರ್ಬಂಧನೆಗಳು ದಮನಿತ ತಳ ಸಮುದಾಯಗಳ ಹಕ್ಕುಗಳನ್ನು ಮೊಟಕುಗೊಳಿಸಿ ಅವು ಸಮಾಜದ ಅಂಚಿಗೆ ಸೇರುವಂತೆ ಮಾಡುತ್ತವೆ. ಜಾತಿ ಆಧಾರಿತ ಸಾಮಾಜಿಕ ವ್ಯವಸ್ಥೆಯು ಸಮಾನತೆ ಮತ್ತು ಸ್ವಾತಂತ್ರ್ಯದ ವಿರೋಧಿಯಾಗಿರುವದು. ದಮನಿತ ತಳ ಸಮುದಾಯಗಳನ್ನು ಮೂಲಭೂತ ಮಾನವ ಹಕ್ಕುಗಳಿಂದ ವಂಚಿಸಿ ಸಾಮಾಜಿಕ ತಾರತಮ್ಯಕ್ಕೊಳಪಡಿಸಿ ಅವು ಅಭಿವೃದ್ಧಿ ಹೊಂದದಂತೆ ಮಾಡುತ್ತವೆ. ಜಾತಿಪದ್ಧತಿಯು ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ವಿರೋಧಿಸುತ್ತಲೇ ತಳ ಸಮುದಾಯಗಳನ್ನು ಸಾಮಾಜಿಕ ಬಹಿಷ್ಕೃತತೆಗೊಳಪಡಿಸುವ ಸಾಂಸ್ಥಿಕ ರೂಪದ ವ್ಯವಸ್ಥೆಯಾಗಿದೆ.

ಸಾಮಾಜಿಕ ಉದ್ದೇಶಗಳಿಗಾಗಿ ಜಾತಿಪದ್ಧತಿಯು ವ್ಯಕ್ತಿಯನ್ನು ಮತ್ತು ಆತನ ವೈಯಕ್ತಿಕ ಸಾಮರ್ಥ್ಯಗಳನ್ನು ಗುರುತಿಸುವುದಿಲ್ಲ. ಅದರ ಬದಲಿಗೆ ವ್ಯಕ್ತಿಯನ್ನು ಮುಖ್ಯ ಘಟಕವೆಂದು ಪರಿಗಣಿಸುವ ಬದಲಿಗೆ ಸಮಾಜದ ಮುಖ್ಯ ಘಟಕವೇ ಜಾತಿಪದ್ಧತಿಯಾಗಿರುತ್ತದೆ. ಹಿಂದೂ ಸಮಾಜದಲ್ಲಿ ಕುಟುಂಬವನ್ನು ಸಾಮಾಜಿಕ ಘಟಕವೆಂದೇ ಪರಿಗಣಿಸಿಲ್ಲ. ವಿವಾಹ ಮತ್ತು ಉತ್ತರಾಧಿಕಾರದ ಹಕ್ಕುಗಳಿಗೆ ಮಾತ್ರ ಕುಟುಂಬ ಸೀಮಿತಗೊಂಡಿದೆ. ಹೀಗಾಗಿ ಜಾತಿಯೇ ಹಿಂದೂ ಸಮಾಜದ ಪ್ರಾಥಮಿಕ ಘಟಕವಾಗಿರುವದು. ಹಿಂದೂ ಸಮಾಜದ ಪ್ರಾಥಮಿಕ ಮತ್ತು ಮುಖ್ಯ ಘಟಕವೆಂದರೆ ಜಾತಿ. ಆದುದರಿಂದ ವ್ಯಕ್ತಿಗಳ ಹಕ್ಕುಗಳು ಮತ್ತು ಸವಲತ್ತುಗಳು ಆ ಜಾತಿಯ ಆಧಾರದ ಮೇಲೆ ಹಂಚಿಕೆಯಾಗುತ್ತವೆ ಎಂದು ಡಾ॥ ಅಂಬೇಡ್ಕರ್ ಹೇಳುತ್ತಾರೆ.

ಆದುದರಿಂದ ಜಾತಿ ಎಂದರೆ 'ಬಲಪ್ರಯೋಗದ ಸಾಮಾಜಿಕ ಬಹಿಷ್ಕೃತತೆ' ಯಾಗಿದೆ. ಕೆಲವು ಸಮೂಹಗಳಿಗೆ ಜಾತಿಯು ಸಾಮಾಜಿಕ ಅನುಕೂಲತೆಯನ್ನು ಉಂಟುಮಾಡಿದರೆ ಇನ್ನುಳಿದ ದಮನಿತ ಸಮುದಾಯಗಳಿಗೆ ಅದು ಸಾಮಾಜಿಕ ಅನಾನುಕೂಲತೆಯನ್ನು ಉಂಟುಮಾಡುವ ಸಾಮಾಜಿಕ ವ್ಯವಸ್ಥೆಯಾಗಿರುವದು.

**ಜಾತಿ ಬಹಿಷ್ಕೃತತೆ ಮತ್ತು ತಾರತಮ್ಯಗಳ ಸ್ವರೂಪಗಳು**

ಆರ್ಥಿಕ ಹಕ್ಕುಗಳು ಮಾತ್ರವಲ್ಲ, ಇತರೆ ನಾಗರಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಹಕ್ಕುಗಳ ಪ್ರಾಪ್ತಿಗಾಗಿ ನಿರ್ಬಂಧ ವಿಧಿಸುವಂತಹದ್ದೇ ಜಾತಿ ಆಧಾರಿತ ಬಹಿಷ್ಕೃತತೆ. ಜಾತಿ, ಅಸ್ಪೃಶ್ಯತೆ ಮತ್ತು ಜನಾಂಗೀಯ ಆಧಾರಿತ ಬಹಿಷ್ಕೃತತೆಯು ಸಮಾಜದ ಇತರ ಸಮೂಹಗಳೊಂದಿಗೆ ದಮನಿತ ತಳ ಸಮೂಹಗಳು ಮತ್ತು ಆದಿವಾಸಿ ಸಮೂಹಗಳು ಸಾಮಾಜಿಕ ಸಂಪರ್ಕದಿಂದ ದೂರ ತಳ್ಳಲ್ಪಡುತ್ತಲೇ ಸಮಾಜದ ಅಂಚಿಗೆ ದೂಡಲ್ಪಡುತ್ತವೆ. ಅವು ಮುಕ್ತವಾಗಿ ಬೆರೆಯುವಂತಹ ವಾತಾವರಣವಿರುವುದಿಲ್ಲ. 'ಅಪೂರ್ಣ ನಾಗರಿಕತ್ವ' ಅಥವಾ ನಾಗರಿಕ ಹಕ್ಕುಗಳ ನಿರಾಕರಣೆ ಅಂದರೆ ಅಭಿವ್ಯಕ್ತಿ ಸ್ವಾತಂತ್ರ್ಯ, ಕಾನೂನು, ಆಡಳಿತ, ನ್ಯಾಯದ ಹಕ್ಕುಗಳು, ರಾಜಕೀಯ ಹಕ್ಕುಗಳು, ಸಮಾಜೋ-ಆರ್ಥಿಕ ಹಕ್ಕುಗಳು ಮುಂತಾದವುಗಳಿಂದ ವಂಚನೆಗೊಳಗಾಗಿ ದಮನಿತ ಸಮೂಹಗಳು ಶೋಷಣೆಗೆ ಒಳಗಾಗುತ್ತವೆ (ಜೋನಾಸ್, ರ್ಥೋನಿನ್‌ಸೆನ್ ೨೦೦೫).

ಆರ್ಥಿಕ ಕ್ಷೇತ್ರಗಳಲ್ಲಿ ನಡೆಯುವ ಬಹಿಷ್ಕೃತತೆ ಮತ್ತು ತಾರತಮ್ಯ ಅಥವಾ ಹಕ್ಕುಗಳ ನಿರಾಕರಣೆಯು ಮಾರುಕಟ್ಟೆ ಮತ್ತು ಮಾರುಕಟ್ಟೆಯೇತರ ಕ್ಷೇತ್ರದಲ್ಲಿ ನಡೆಯುವ ವ್ಯವಹಾರಗಳು ಹಾಗೂ ಆರ್ಥಿಕ ವಿನಿಮಯದೊಂದಿಗೆ ಬೆಸೆದುಕೊಂಡಿದೆ. ಮೊದಲನೆಯದಾಗಿ, ಲೇಬರ್ ಮಾರುಕಟ್ಟೆಯಲ್ಲಿ ದಮನಿತ ತಳ ಸಮುದಾಯಗಳಿಗೆ ಅವಕಾಶಗಳನ್ನು ನಿರಾಕರಿಸುವುದರ ಮೂಲಕ ಬಹಿಷ್ಕೃತತೆ ಆಚರಿಸಲ್ಪಡುತ್ತದೆ. ಮಾರುಕಟ್ಟೆಯಲ್ಲಿ ಲಭ್ಯವಿರುವ ಉದ್ಯೋಗಗಳ ನಿರಾಕರಣೆ, ಸಂಪತ್ತು ಹಂಚಿಕೆಯ ತಾರತಮ್ಯ ಮತ್ತು ಹಂಚಿಕೆಯ ನಿರಾಕರಣೆ, ಕೃಷಿ ಕ್ಷೇತ್ರದಲ್ಲಿ ಭೂಮಿ ಒಡೆತನ ಹೊಂದದಂತೆ ನಿರ್ಬಂಧಗಳು, ದಿನ ಬಳಕೆಯ ವಸ್ತುಗಳ ಖರೀದಿ, ವಿಕ್ರಿ ಮತ್ತು ಮಾರಾಟದಂತಹ ವೃತ್ತಿಗಳ ಮೇಲೆ ನಿರ್ಬಂಧಗಳು ಮತ್ತು ನಿರಾಕರಣೆ.

ಎರಡನೆಯದಾಗಿ, ಅಮರ್ತ್ಯ ಸೇನ್‌ರ ಪ್ರಕಾರ ದಮನಿತ ತಳ ಸಮುದಾಯಗಳ ಮೇಲೆ ಅನಿಯಂತ್ರಿತ ಬೆಲೆಗಳ ಹೇರಿಕೆ. ಅಂದರೆ ಈ ಶೋಷಿತ ಸಮುದಾಯಗಳು ಹೆಚ್ಚಿನ ಬೆಲೆ ತೆತ್ತು ವಸ್ತು ಮತ್ತು ಸಾಮಗ್ರಿಗಳ ಖರೀದಿಗೆ ಒತ್ತಾಯ ಮತ್ತು ಈ ಒತ್ತಾಯಕ್ಕೆ ಮಣಿಯದಿದ್ದರೆ ವಸ್ತುಗಳು ಮತ್ತು ಸೇವೆಗಳ ನಿರಾಕರಣೆ.

ಮೂರನೆಯದಾಗಿ, ಸರಕಾರಿ ಯಂತ್ರ, ಏಜೆನ್ಸಿಗಳು ಮತ್ತು ವಿವಿಧ ಸಾರ್ವಜನಿಕ ಆಡಳಿತದ ಘಟಕಗಳು ಒದಗಿಸುವ ಸೇವೆಗಳಲ್ಲಿ ತಾರತಮ್ಯ. ಶಿಕ್ಷಣ, ವಸತಿ, ಆರೋಗ್ಯ, ಕುಡಿಯುವ ನೀರಿನ ವ್ಯವಸ್ಥೆ, ಹುಲ್ಲುಗಾವಲು ಮತ್ತು ಇತರೆ ಮೂಲಭೂತ ಸೌಲಭ್ಯಗಳನ್ನು ದೊರಕಿಸಲು ಆಡಳಿತ ಯಂತ್ರ ನಡೆಸುವ ತಾರತಮ್ಯ ಮತ್ತು ನಿರಾಕರಣೆಯಿಂದಾಗಿ ತಳ ಸಮುದಾಯಗಳು ಸಾಮಾಜಿಕ ಬಹಿಷ್ಕೃತತೆಗೊಳಗಾಗುತ್ತವೆ.

ನಾಲ್ಕನೆಯದಾಗಿ, ಪರಿಶುದ್ಧತೆ ಮತ್ತು ಅನೈರ್ಮಲ್ಯ – ಅಥವಾ ಅಪರಿಶುದ್ಧತೆಯ ಪರಿಕಲ್ಪನೆ ಹಾಗೂ ಆಚರಣೆಗಳಿಂದಾಗಿ ದಮನಿತ ಅಸ್ಪೃಶ್ಯ ತಳ ಸಮುದಾಯಗಳಿಗೆ ಕೆಲವೊಂದು ವೃತ್ತಿಗಳನ್ನು ಕೈಗೊಳ್ಳುವಲ್ಲಿನ ಜಾತಿ ನಿರ್ಬಂಧಗಳು ಹಾಗೂ ಅಂತಹ ನಿರ್ಬಂಧಗಳನ್ನು ಮುರಿಯುವವರ ವಿರುದ್ಧ ಸಾಮಾಜಿಕ ಬಹಿಷ್ಕಾರದ ಬೆದರಿಕೆಯಿಂದಾಗಿ ತಲೆದೋರುವ ಅವಕಾಶ ಹೀನತೆಯಿಂದ ಬಳಲುವ ಪರಕೀಯ ಸ್ಥಿತಿ. ಈ ಎಲ್ಲ ಕಾರಣಗಳಿಂದಾಗಿ ಅಪರಿಶುದ್ಧ ಅಥವಾ ಅನೈರ್ಮಲ್ಯ ಸಮೂಹಗಳೆಂದು ಪರಿಗಣಿತವಾಗಿರುವ ಅಸ್ಪೃಶ್ಯ ತಳ ಸಮುದಾಯಗಳು ಸಾಮಾಜಿಕ ಬಹಿಷ್ಕಾರದ ಶೂಲಕ್ಕೆ ಬಲಿಯಾಗುತ್ತವೆ.

(i) ನಾಗರಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ದಮನಿತ ಅಸ್ಪೃಶ್ಯ ತಳ ಸಮುದಾಯಗಳು ಸಾರ್ವಜನಿಕ ದೇವಾಲಯಗಳು, ನೀರಿನ ಮೂಲಗಳು, ಶಿಕ್ಷಣ, ಆರೋಗ್ಯ ಮತ್ತು ಇತರೆ ಸಾರ್ವಜನಿಕ ಸೇವೆಗಳನ್ನೊದಗಿಸುವ ಸಂಸ್ಥೆಗಳಿಂದ ಬಹಿಷ್ಕೃತತೆ ಮತ್ತು ತಾರತಮ್ಯಕ್ಕೊಳಗಾಗುವುದು ವಾಸ್ತವ ಸಂಗತಿಯಾಗಿದೆ.

(ii) ರಾಜಕೀಯ ಕ್ಷೇತ್ರದಲ್ಲಿ ರಾಜಕೀಯ ಹಕ್ಕುಗಳು, ರಾಜಕೀಯ, ಸಾರ್ವಜನಿಕ ಆಡಳಿತ ಮತ್ತು ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಗಳಿಂದ ತಾರತಮ್ಯವನ್ನು ಆ ಸಮೂಹಗಳು ಎದುರಿಸುತ್ತವೆ.

(iii) ವಸತಿ ಮತ್ತು ಭೌತಿಕ ಪ್ರತ್ಯೇಕತೆಯಿಂದ ಅಸ್ಪೃಶ್ಯ ತಳ ಸಮುದಾಯಗಳು ಸಮಾಜದ ಅಂಚಿಗೆ ತಳ್ಳಲ್ಪಡುತ್ತವೆ. ಈ ಕಾರಣಗಳಿಂದ ಸಮಾಜದ ಮುಖ್ಯವಾಹಿನಿಯಿಂದಲೇ ಅವು ಬೇರ್ಪಟ್ಟು ತೀವ್ರ ಸಾಮಾಜಿಕ ಬಹಿಷ್ಕೃತತೆ ಮತ್ತು ತಾರತಮ್ಯಕ್ಕೊಳಗಾಗುತ್ತವೆ.

(iv) ಜಾತಿಪದ್ಧತಿಯ ಸಾಂಪ್ರದಾಯಿಕ ನೀತಿ-ನಿಯಮ ಮತ್ತು ಆಚರಣೆಗಳ ಸಾಮಾಜಿಕ ನಿಯಂತ್ರಣಕ್ಕೊಳಪಟ್ಟ ಅಸ್ಪೃಶ್ಯ ಸಮೂಹಗಳು ಅವುಗಳನ್ನು ಉಲ್ಲಂಘಿಸುವ ಧೈರ್ಯ ಅಥವಾ ಧಾರ್ಷ್ಟ್ಯತೆ ತೋರಿಸಿದ್ದಲ್ಲಿ ಸಾಮಾಜಿಕ ಬಹಿಷ್ಕಾರಕ್ಕೊಳಗಾಗಬೇಕಾದ ಪರಿಸ್ಥಿತಿ ಇದೆ. ಸಾಂಪ್ರದಾಯಿಕ ಆಚರಣೆ, ರೂಢಿಗಳು, ನೀತಿ-ನಿಯಮಗಳನ್ನು ಉಲ್ಲಂಘಿಸಿದ ಸಂದರ್ಭಗಳಲ್ಲಿ ಅಸ್ಪೃಶ್ಯ ಸಮುದಾಯಗಳನ್ನು ದೌರ್ಜನ್ಯ ಮತ್ತು ಹಿಂಸೆಗೆ ಗುರಿಪಡಿಸಿ ಸಾಮಾಜಿಕ ಬಹಿಷ್ಕಾರ ಹೇರುವಂತಹ ಸ್ಥಿತಿ ನಿರ್ಮಾಣ ಮಾಡಲಾಗುತ್ತದೆ.

ದಲಿತರು ತಮ್ಮ ಹಕ್ಕುಗಳಿಗಾಗಿ ಪ್ರತಿಪಾದಿಸಿದರೆ ಅದನ್ನು ಜಾತಿಪದ್ಧತಿಯ ವಿರುದ್ಧದ ದಂಗೆ ಎಂದು ಪರಿಗಣಿಸಿ ಅಂತಹ ಪ್ರಯತ್ನಗಳನ್ನು ನಿರ್ದಾಕ್ಷಿಣ್ಯವಾಗಿ ಸಾಮಾಜಿಕ ಬಹಿಷ್ಕಾರದ ಮೂಲಕ ಹತ್ತಿಕ್ಕಲಾಗುತ್ತದೆ. ಅಸ್ಪೃಶ್ಯರಿಗೆ ಮೂಲಭೂತ ಸೇವೆ ಹಾಗೂ ಸೌಕರ್ಯಗಳನ್ನು ನಿರಾಕರಿಸಿ ಬಲವಂತವಾಗಿ ಅವರನ್ನು ಒಕ್ಕಲೆಬ್ಬಿಸಲಾಗುತ್ತದೆ. ಜಾತಿ ಮತ್ತು ಅಸ್ಪೃಶ್ಯತೆಯಾಧಾರಿತ ಸಾಮಾಜಿಕ ಬಹಿಷ್ಕೃತತೆಯು ನೈಜದಲ್ಲಿ ಸಾಮಾಜಿಕ ಸಂರಚನೆಯ ಭಾಗವೇ ಆಗಿದ್ದು, ಜಾತಿಪದ್ಧತಿಯ ಮೂಲಕ ಅದು ಸಾಂಸ್ಥೀಕರಣಗೊಂಡಿರುವದು.

**ಜಾತಿ ಬಹಿಷ್ಕೃತತೆ ಮತ್ತು ತಾರತಮ್ಯ-ವಾಸ್ತವಿಕ ಸಾಕ್ಷ್ಯಾಧಾರಗಳು**

ದಮನಿತ ತಳ ಸಮುದಾಯಗಳು ಆರ್ಥಿಕವಾಗಿ ತೀರಾ ಹಿಂದುಳಿದಿರುವುದರಿಂದ ಭೂ ಒಡೆತನ ಹೊಂದುವ ಪರಿಸ್ಥಿತಿಯೇ ಇರುವುದಿಲ್ಲ. ಔದ್ಯೋಗಿಕ ಕ್ಷೇತ್ರಗಳಲ್ಲಿ ಅವಕಾಶಗಳಿಂದ ವಂಚಿತರಾಗಿದ್ದು, ಭೂಮಿ ಮತ್ತು ಕೈಗಾರಿಕೋದ್ಯಮಗಳ ಅವಕಾಶಗಳಿಂದ ಅವರು ತಾರತಮ್ಯಕ್ಕೊಳಗಾಗಿರುವರು. ಅಲ್ಲದೆ ಕೆಳಮಟ್ಟದ ನಗರೀಕರಣ, ಉದ್ಯೋಗಗಳ ಅವಕಾಶಗಳ ಕೊರತೆ, ಸಾಕ್ಷರತೆಯ ಪ್ರಮಾಣದ ಕುಸಿತ, ಕಡಿಮೆ ದಿನಗೂಲಿ ಹಾಗೂ ಸಾಮಾಜಿಕ ಅಭಿವೃದ್ಧಿಯಲ್ಲಿ ಅವಕಾಶಗಳಿಲ್ಲದಿರುವುದರಿಂದ ತಳ ಸಮುದಾಯಗಳು ತಾರತಮ್ಯದಿಂದ ತತ್ತರಿಸಿವೆ. ದಮನಿತ ಅಸ್ಪೃಶ್ಯ ತಳ ಸಮುದಾಯಗಳು ಮೂಲಭೂತ ಸಂಪನ್ಮೂಲ ವಂಚಿತರಾಗಿದ್ದಾರೆ. ಅದರ ಪರಿಣಾಮದಿಂದ


## ಓದುಗರಲ್ಲಿ ಮನವಿ

ಓದುಗರ ಮತ್ತು ಜಾಹೀರಾತುದಾರರ ಪ್ರೋತ್ಸಾಹದಿಂದಾಗಿ ಕಳೆದ ಹತ್ತೊಂಬತ್ತು ವರ್ಷಗಳಿಂದ 'ಹೊಸತು' ಪತ್ರಿಕೆ ನಿರಂತರವಾಗಿ ಪ್ರಕಟವಾಗುತ್ತಿದೆ. ಆದರೆ, ಇತ್ತೀಚಿನ ದಿನಗಳಲ್ಲಿ ಕಾಗದ, ಮುದ್ರಣ, ಕಛೇರಿ ನಿರ್ವಹಣೆ ಮುಂತಾದ ಖರ್ಚುಗಳು ವಿಪರೀತ ಹೆಚ್ಚಾಗಿರುವುದರಿಂದ 'ಹೊಸತು' ಬಿಡಿ ಪ್ರತಿಗಳ ಮತ್ತು ಚಂದಾ ದರಗಳನ್ನು ಹೆಚ್ಚಿಸಲೇಬೇಕಾದ ಅನಿವಾರ್ಯ ಪರಿಸ್ಥಿತಿ ಉಂಟಾಗಿದೆ.

**೨೦೧೮ ಸೆಪ್ಟೆಂಬರ್ ೧ರಿಂದ ಅನ್ವಯಿಸುವಂತೆ ದರಗಳು ಈ ರೀತಿ ಹೆಚ್ಚಾಗಲಿವೆ:**

| | | |
|---|---|---|
| ಬಿಡಿ ಪ್ರತಿ (ವಾರ್ಷಿಕ ವಿಶೇಷಾಂಕ ಹೊರತುಪಡಿಸಿ) | ... | ರೂ. ೨೫/- |
| ಒಂದು ವರ್ಷದ ಚಂದಾ | ... | ರೂ. ೩೦೦/- |
| ಮೂರು ವರ್ಷಗಳ ಚಂದಾ | ... | ರೂ. ೬೦೦/- |

೨೦೧೮ ಆಗಸ್ಟ್ ೩೧ರೊಳಗಾಗಿ ಚಂದಾ ಪಾವತಿಸಿದಲ್ಲಿ / ನವೀಕರಿಸಿದಲ್ಲಿ ಹಳೆಯ ದರಗಳೇ ಅನ್ವಯಿಸುವುವು. ನಂತರವಷ್ಟೇ ಹೊಸ ದರಗಳು ಜಾರಿಯಾಗಲಿವೆ.

ಓದುಗರು ಸಹಕರಿಸಬೇಕಾಗಿ ವಿನಂತಿ.

– ಪ್ರಕಾಶಕ

ಉದ್ಯೋಗದ ಅವಕಾಶ ಕಡಿಮೆಯಾಗಿ ಆರ್ಥಿಕ ಸಂಕಷ್ಟದಿಂದ ಬಳಲುವ ಪರಿಸ್ಥಿತಿ ಉಂಟಾಗಿದೆ. ಬೇರೆ ಸಮುದಾಯಗಳಿಗೆ ಹೋಲಿಸಿದಲ್ಲಿ ಅಸ್ಪೃಶ್ಯ ತಳ ಸಮುದಾಯಗಳು ಕೃಷಿ, ಕೈಗಾರಿಕೆ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ ಕಡಿಮೆ ಪ್ರಾತಿನಿಧ್ಯವನ್ನು ಹೊಂದಿವೆ. ಅಸ್ಪೃಶ್ಯ ಜಾತಿಗಳಲ್ಲಿ ನಿರುದ್ಯೋಗ ಸಮಸ್ಯೆಯು ಇತರೆ ಸಮುದಾಯಗಳಿಗೆ ಹೋಲಿಸಿದಲ್ಲಿ ತೀವ್ರವಾಗಿರುವದು ಕಂಡುಬರುತ್ತದೆ. ಕೃಷಿ ಆಧಾರಿತ ಉದ್ಯೋಗ ಮಾಡುವ ಕೃಷಿರಹಿತ ದಿನಗೂಲಿ ಅಸ್ಪೃಶ್ಯರ ಸರಾಸರಿ ಆದಾಯ ಅತ್ಯಂತ ಕಡಿಮೆ. ಏಕೆಂದರೆ ಕೃಷಿ ಕ್ಷೇತ್ರದಲ್ಲಿ ಸಿಗುವ ಆದಾಯವು ತೀರಾ ನಿಕೃಷ್ಟವಾದುದು. ಇತರೆ ಸ್ಪೃಶ್ಯ ಜಾತಿಗಳಿಗೆ ಹೋಲಿಸಿದಲ್ಲಿ ಅಸ್ಪೃಶ್ಯ ತಳ ಸಮುದಾಯಗಳಲ್ಲಿ ಸಾಕ್ಷರತೆ ಪ್ರಮಾಣ, ಶಿಕ್ಷಣ ಕ್ಷೇತ್ರದಲ್ಲಿಯ ಸಾಧನೆ ಕಡಿಮೆಯಾಗಿದೆ ಎಂಬುದೇ ದೊಡ್ಡ ಪ್ರಶ್ನೆಯಾಗಿದೆ. ಕೃಷಿ, ಉದ್ಯೋಗ, ಮಾನವ ಅಭಿವೃದ್ಧಿ, ಬಂಡವಾಳ ಸ್ವತ್ತುಗಳು, ಮಾರುಕಟ್ಟೆ ಮತ್ತು ಮಾರುಕಟ್ಟೆಯೇತರ ಆರ್ಥಿಕ ಚಟುವಟಿಕೆಗಳಲ್ಲಿ ಭಾಗವಹಿಸುವ ನಿರ್ಬಂಧಗಳಿಂದಾಗಿ ಆರ್ಥಿಕ ಸಂಕಷ್ಟವನ್ನೆದುರಿಸುವ ಪರಿಸ್ಥಿತಿ ಇದೆ. ವಾಸ್ತವವಾಗಿ ಆರ್ಥಿಕ ಕ್ಷೇತ್ರಗಳಲ್ಲಿ ಅವಕಾಶಗಳ ಕೊರತೆ ಹಾಗೂ ಮುಕ್ತವಾಗಿ ಭಾಗವಹಿಸಲು ಇರುವ ಜಾತಿ ಆಧಾರಿತ ನಿರ್ಬಂಧಗಳಿಂದಾಗಿ ಅಸ್ಪೃಶ್ಯ ತಳ ಸಮುದಾಯಗಳು ಆರ್ಥಿಕ ಬಹಿಷ್ಕೃತತೆಗೆ ಬಲಿಯಾಗಿವೆ.




**ಆರ್ಥಿಕ ಬಹಿಷ್ಕೃತತೆ ಮತ್ತು ತಾರತಮ್ಯ–ಪ್ರಾಯೋಗಿಕ ಸಾಕ್ಷ್ಯಾಧಾರಗಳು**

ಅಸ್ಪೃಶ್ಯ ತಳ ಸಮುದಾಯಗಳು ತೀವ್ರ ಆರ್ಥಿಕ ಹಿಂದುಳಿದಿರುವಿಕೆ ಹಾಗೂ ಬಡತನದಿಂದಾಗಿ ಇತರರಿಗೆ ಹೋಲಿಸಿದಲ್ಲಿ ಆರ್ಥಿಕ ಕ್ಷೇತ್ರಗಳಲ್ಲಿ ಅದರಲ್ಲೂ ಮಾರುಕಟ್ಟೆ ಮತ್ತು ಮಾರುಕಟ್ಟೆಯೇತರ ಆರ್ಥಿಕ ವ್ಯವಹಾರಗಳು, ಹೂಡಿಕೆ ಮತ್ತು ಬಂಡವಾಳ ವಿನಿಯೋಗಗಳಲ್ಲಿ ಹಾಗೂ ಔದ್ಯೋಗಿಕ ಕ್ಷೇತ್ರಗಳಲ್ಲಿ ಅವರ ಪಾಲ್ಗೊಳ್ಳುವಿಕೆ ತೀರಾ ಕಡಿಮೆ ಎಂದೇ ಹೇಳಬೇಕು. ಅಸ್ಪೃಶ್ಯ ತಳ ಸಮುದಾಯಗಳು ಲೇಬರ್ ಮಾರುಕಟ್ಟೆಯಲ್ಲಿ ನಡೆಯುವ ಲೇಬರ್ ಹೈರಿಂಗ್ ಮತ್ತು ಕಡಿಮೆ ವೇತನಗಳಂತಹ ತಾರತಮ್ಯಕ್ಕೊಳಗಾಗುತ್ತಿವೆ. ಶೇ. ೩೬ರಷ್ಟು ಗ್ರಾಮಗಳಲ್ಲಿ ಅಸ್ಪೃಶ್ಯ ಜಾತಿಗಳಿಗೆ ಕೃಷಿ ಕ್ಷೇತ್ರದಲ್ಲಿ ಉದ್ಯೋಗವನ್ನು ನಿರಾಕರಿಸಲಾಗುತ್ತದೆ. ಶೇ. ೨೫ ಗ್ರಾಮಗಳಲ್ಲಿ ಅಸ್ಪೃಶ್ಯರು ವೇತನ ತಾರತಮ್ಯಕ್ಕೊಳಗಾಗುತ್ತಾರೆ. ಸ್ಪೃಶ್ಯರಿಗೆ ಹೋಲಿಸಿದಲ್ಲಿ ಅಸ್ಪೃಶ್ಯರ ವೇತನವು ಅವರಿಗಿಂತ ಕಡಿಮೆ ಮಟ್ಟದಲ್ಲಿದೆ. ಬಹುತೇಕ ಗ್ರಾಮಗಳಲ್ಲಿ ಪರಿಶುದ್ಧತೆ ಮತ್ತು ಅಪರಿಶುದ್ಧತೆಯ ಪರಿಕಲ್ಪನೆಯಿಂದಾಗಿ ಅಸ್ಪೃಶ್ಯ ಜಾತಿಗಳಿಗೆ ವಸತಿ ನಿರ್ಮಾಣದಲ್ಲಿ ಉದ್ಯೋಗವನ್ನು ನಿರಾಕರಿಸಲಾಗುತ್ತದೆ. ದೇಶದ ಬಹುತೇಕ ಕಡೆ ಅಸ್ಪೃಶ್ಯ ಜಾತಿಗಳಿಗೆ ನೀರಾವರಿ ಸೌಲಭ್ಯಗಳನ್ನು ನಿರಾಕರಿಸಲಾಗುತ್ತಿದೆ. ಕೃಷಿ ಕ್ಷೇತ್ರದಲ್ಲಿ ಅಸ್ಪೃಶ್ಯರಿಗೆ ನೀರಾವರಿ ಸೌಲಭ್ಯದಲ್ಲಿ ತಾರತಮ್ಯವೆಸಗುವದು ಕೂಡ ವಾಸ್ತವ ಸಂಗತಿ. ಶೇ. ೨೧ರಷ್ಟು ಗ್ರಾಮಗಳಲ್ಲಿ ಸಾರ್ವಜನಿಕ ಪ್ರದೇಶಗಳಾದ ಹುಲ್ಲುಗಾವಲು ಮತ್ತು ಮೀನು ಸಾಕಿದ ನೀರಿನ ಕೆರೆಯ ಬಳಕೆಗೆ ಅವಕಾಶಗಳನ್ನು ನಿರಾಕರಿಸಲಾಗುತ್ತಿರುವದು.

ಪರಿಶುದ್ಧತೆ ಮತ್ತು ಅಪರಿಶುದ್ಧತೆಯ ಜಾತಿಯ ರೂಢಿಗತ ಮೌಲ್ಯಗಳಿಂದಾಗಿ ಜೀವನಾವಶ್ಯಕಗಳ ಖರೀದಿ ಮತ್ತು ಮಾರಾಟ ಮಾಡುವಂತಹ ವೃತ್ತಿಗಳನ್ನು ಕೈಕೊಳ್ಳಲು ಅಸ್ಪೃಶ್ಯ ಜಾತಿಗಳಿಗೆ ಅವಕಾಶ ನಿರಾಕರಿಸ್ಪಟ್ಟಿರುವದರಿಂದ ಆರ್ಥಿಕ ದೌರ್ಬಲ್ಯದಿಂದ ಈ ಸಮುದಾಯಗಳು ನರಳುವಂತಾಗಿವೆ. ಹಾಲು, ಹಾಲಿನ ಉತ್ಪಾದನೆಗಳು, ತರಕಾರಿ ಮತ್ತು ಕಿರಾಣಿ ಸಾಮಗ್ರಿಗಳ ವ್ಯಾಪಾರ ಕೈಕೊಳ್ಳಲು ಅಸ್ಪೃಶ್ಯರಿಗೆ ಜಾತಿ ಆಧಾರಿತ ತಾರತಮ್ಯವಿರುವುದರಿಂದ ಅವರು ಆರ್ಥಿಕ ಕ್ಷೇತ್ರದಲ್ಲಿ ತೀರಾ ಹಿಂದುಳಿದಿದ್ದಾರೆ. ಶೇ. ೩೫ರಷ್ಟು ಗ್ರಾಮಗಳಲ್ಲಿ ಅಸ್ಪೃಶ್ಯರು ಗ್ರಾಮಗಳ ಮಾರುಕಟ್ಟೆ ಮತ್ತು ಸಂತೆಗಳಲ್ಲಿ ಜೀವನಾವಶ್ಯಕ ವಸ್ತುಗಳನ್ನು ಮಾರುವಂತಿಲ್ಲ. ಅದಕ್ಕೆ ಅಸ್ಪೃಶ್ಯತೆಯ ಕಳಂಕವಿರುವುದರಿಂದ ಯಾವ ಅಸ್ಪೃಶ್ಯನೂ ಮಾರುಕಟ್ಟೆಯಲ್ಲಿ ಜೀವನಾವಶ್ಯಕ ವಸ್ತುಗಳ ಖರೀದಿ ಮತ್ತು ವಿಕ್ರಿ ಮಾಡುವಂತಹ ಪರಿಸ್ಥಿತಿ ಇರುವುದಿಲ್ಲ. ಶೇ. ೪೭ರಷ್ಟು ಗ್ರಾಮಗಳಲ್ಲಿ ಅಸ್ಪೃಶ್ಯರು ಹಾಲು ಮಾರುವುದನ್ನು ನಿಷೇಧಿಸಲಾಗಿದೆ. ಗ್ರಾಮಗಳಲ್ಲಿರುವ ಸಹಕಾರಿ ಕ್ಷೇತ್ರದ ಹಾಲಿನ ಕೇಂದ್ರಗಳಿಗೆ ಮುಕ್ತವಾಗಿ ಹಾಲು ಮಾರುವ ಪರಿಸ್ಥಿತಿಯು ಇರುವುದಿಲ್ಲ.

ಶೇ. ೩೫.೫ರಷ್ಟು ಅಸ್ಪೃಶ್ಯ ಕೃಷಿ ಕಾರ್ಮಿಕರಿಗೆ ಉದ್ಯೋಗಾವಕಾಶಗಳು ನಿರಾಕರಿಸ್ಪಟ್ಟಿವೆ. ಶೇ. ೨೮.೭ರಷ್ಟು ಅಸ್ಪೃಶ್ಯ ಕೂಲಿಕಾರರಿಗೆ ಮನೆ ಕಟ್ಟುವ ಉದ್ಯೋಗವನ್ನು ನಿರಾಕರಿಸಲಾಗಿದೆ. ಶೇ. ೩೨.೬ರಷ್ಟು ಅಸ್ಪೃಶ್ಯ ಕುಟುಂಬ ಗಳಿಗೆ ನೀರಾವರಿ ಸೌಲಭ್ಯಗಳನ್ನು ನಿರಾಕರಿಸಲಾಗಿದೆ. ಗ್ರಾಮೀಣ ಗಾಂವಠಾಣ, ಹುಲ್ಲುಗಾವಲು ಮತ್ತು ಊರಿನ ಕೆರೆ ಪ್ರದೇಶಕ್ಕೆ ಶೇ. ೨೦.೯ರಷ್ಟು ಅಸ್ಪೃಶ್ಯರಿಗೆ ಅವಕಾಶವನ್ನು ನಿರಾಕರಿಸಲಾಗಿದೆ.

ಸಾರ್ವಜನಿಕ ಸೌಲಭ್ಯಗಳು ಹಾಗೂ ಸೇವೆಗಳಲ್ಲಿ ಅಸ್ಪೃಶ್ಯರಿಗೆ ಆಗುವ ತಾರತಮ್ಯಗಳ ಜೊತೆಗೆ ಆಹಾರದ ಹಕ್ಕು ಪಡೆಯಲು ಅವರಿಗೆ ಸಮಾನ ಅವಕಾಶಗಳು ನಿರಾಕರಿಸ್ಪಟ್ಟಿರುವದು ವಾಸ್ತವಿಕ ಸಂಗತಿ. ಮಧ್ಯಾಹ್ನ ಉಪಾಹಾರ ಯೋಜನೆ ಹಾಗೂ ನ್ಯಾಯಬೆಲೆ ಅಂಗಡಿಗಳಲ್ಲಿ ವಿತರಿಸುವ ಆಹಾರಧಾನ್ಯಗಳಲ್ಲಿಯೂ ಕೂಡಾ ತಾರತಮ್ಯವಿದೆ. ಕರ್ನಾಟಕದ ಬಹುತೇಕ ಜಿಲ್ಲೆಗಳಲ್ಲಿ ಮಧ್ಯಾಹ್ನ ಉಪಾಹಾರ ಯೋಜನೆಯಡಿ ಪರಿಶಿಷ್ಟ ಜಾತಿಯವರನ್ನು ಮುಖ್ಯ ಅಡುಗೆಯವರು ಮತ್ತು ಅವರ ಸಹಾಯಕರ ಹುದ್ದೆಗೆ ನೇಮಕ ಮಾಡಲು ಜಾತಿಯು ಅಡ್ಡ ಬಂದ ಪ್ರಕರಣಗಳು ವರದಿಯಾಗಿರುವದು ಕಳವಳಕಾರಿ ಸಂಗತಿ. ಕೆಲವು ಪ್ರಕರಣಗಳಲ್ಲಿ ಮೀಸಲಾತಿ ಆಧಾರದ ಮೇಲೆ ಅಸ್ಪೃಶ್ಯರನ್ನು ಈ ಯೋಜನೆಯಡಿ ನೇಮಕ ಮಾಡಿದ್ದಲ್ಲಿ ಅಂತಹ ಕಡೆ ಮೇಲ್ಜಾತಿಯ ಜನ ತಮ್ಮ ಮಕ್ಕಳು ಮಧ್ಯಾಹ್ನ ಉಪಾಹಾರ ಯೋಜನೆಯಡಿ ಅಸ್ಪೃಶ್ಯ ಅಡುಗೆಯವರು ಸಿದ್ಧಪಡಿಸಿದ ಆಹಾರವನ್ನು ಸೇವಿಸಲು ನಿರಾಕರಿಸಿರುವುದು ವರದಿಯಾಗಿದೆ. ಹಲವಾರು ಸಮಾಜಶಾಸ್ತ್ರೀಯ ಅಧ್ಯಯನಗಳು ಭಾರತೀಯ ಗ್ರಾಮಗಳಲ್ಲಿ ಇಂದಿಗೂ ಅಸ್ಪೃಶ್ಯತೆ ಆಚರಿಸಲ್ಪಡುತ್ತಿರುವುದನ್ನು ಹಾಗೂ ಅಸ್ಪೃಶ್ಯರು ಸಾಮಾಜಿಕ ಬಹಿಷ್ಕೃತತೆಗೊಳಗಾಗಿ ಹಕ್ಕುಗಳಿಂದ ವಂಚಿತರಾಗಿರುವ ಪರಿಸ್ಥಿತಿಯನ್ನು ವಿಶ್ಲೇಷಿಸುವ ವರದಿಯನ್ನು ಪ್ರಕಟಿಸಿವೆ. ಶೇ. ೪೮.೪ರಷ್ಟು ಗ್ರಾಮಗಳಲ್ಲಿ ಅಸ್ಪೃಶ್ಯರಿಗೆ ನೀರಿನ ಮೂಲ ಹಾಗೂ ನೀರಿನ ಸೌಲಭ್ಯಗಳಿಂದ ನಿರಾಕರಿಸಲಾಗಿದೆ. ಶೇ. ೪೫.೬ರಷ್ಟು ಗ್ರಾಮಗಳಲ್ಲಿ ಅಸ್ಪೃಶ್ಯರಿಗೆ ಕ್ಷೌರಿಕರ ಸೇವೆ ನಿರಾಕರಿಸಲ್ಪಟ್ಟಿದ್ದರೆ, ಶೇ. ೩೫.೮ರಷ್ಟು ಕಿರಾಣಿ ಅಂಗಡಿಯನ್ನು ಮುಟ್ಟಲು, ಶೇ. ೨೫.೬ರಷ್ಟು ಗ್ರಾಮಗಳ ಹೋಟೆಲುಗಳಿಗೆ ಪ್ರವೇಶ ನಿರಾಕರಿಸಲಾಗಿದೆ. ಶೇ. ೨೧.೩ರಷ್ಟು ಖಾಸಗಿ ಮತ್ತು ಸಾರ್ವಜನಿಕ ಆಸ್ಪತ್ರೆಗೆ ಪ್ರವೇಶ ನಿರಾಕರಣೆಯಂತಹ ಸಾಮಾಜಿಕ ಬಹಿಷ್ಕಾರವು ಅಸ್ತಿತ್ವದಲ್ಲಿದೆ.

ಸಾಮಾಜಿಕ ಬಹಿಷ್ಕಾರವನ್ನು ತೊಡೆದುಹಾಕಲು ಭಾರತೀಯ ಸಂವಿಧಾನವು ಒಳಗೊಳ್ಳುವ ಧೋರಣೆಯನ್ನು ಅನುಸರಿಸಿರುವುದರಿಂದ ಕೊಂಚಮಟ್ಟಿಗಾದರೂ ಸಾಮಾಜಿಕ ಪರಿಸ್ಥಿತಿಯಲ್ಲಿ ಸುಧಾರಣೆಯಾಗಿರುವುದು ಆಶಾದಾಯಕವಾದ ಸಂಗತಿಯಾಗಿದೆ. ಸಾಮಾಜಿಕ ಬಹಿಷ್ಕಾರವನ್ನು ಪ್ರತಿಭಟಿಸುವ ದಮನಿತ ಅಸ್ಪೃಶ್ಯ ತಳ ಸಮುದಾಯಗಳ ಪ್ರಯತ್ನಗಳನ್ನು ದೇಶ ವಿರೋಧಿ ಚಟುವಟಿಕೆಗಳೆಂದು ಬಿಂಬಿಸುತ್ತಿರುವದು ಹಾಗೂ 'ಸರ್ವರಿಗೂ ಸಮಬಾಳು ಸರ್ವರಿಗೂ ಸಮಪಾಲು' ತತ್ವದ ಆಧಾರದ ಮೇಲೆ ರಚಿತವಾಗಿರುವ ಮತ್ತು ಒಳಗೊಳ್ಳುವ ಧೋರಣೆಯನ್ನು ಅನುಸರಿಸಿ ಸಾಮಾಜಿಕ ನ್ಯಾಯದ ಪ್ರತೀಕದಂತಿರುವ ಸಂವಿಧಾನವನ್ನು ಬದಲಿಸುವ ಪ್ರಯತ್ನಗಳು ಭಾರತವನ್ನು ಹಿಂದಕ್ಕೆ ಒಯ್ಯುವ ಪ್ರಯತ್ನಗಳಾಗಿವೆ. ಇಂದು ಅಂತಹ ಕ್ರಮ ವಿರೋಧಿಸುವ ಸಂಕ್ರಮಣ ಕಾಲವಾಗಿದೆ.

**ಸದಾಶಿವ ಮರ್ಜಿ**
ರಸೋನೆ ಬಿಲ್ಡಿಂಗ್, ಬರಕೋಟ್ರಿ ರಸ್ತೆ
ಧಾರವಾಡ – ೫೮೦ ೦೦೭

## ‘ಸ್ಮೃತಿ ಚಿತ್ರೆ’

ಲಕ್ಷ್ಮಿಬಾಯಿ ಟಿಳಕರ ‘ಸ್ಮೃತಿ ಚಿತ್ರೆ’ (ನೆನಪಿನ ಚಿತ್ರಗಳು) ಮರಾಠಿಯ ಅತ್ಯಂತ ಶ್ರೇಷ್ಠ ಆತ್ಮಕಥೆಗಳಲ್ಲಿ ಒಂದು. ವಾಚಕರು, ವಿಮರ್ಶಕರು, ಓದಿ ಇಂದಿಗೂ ಮೆಲುಕು ಹಾಕುತ್ತಿರುವ ಕೃತಿ. ಅಪಾರ ಬೇಡಿಕೆಯಿರುವ ಪುಸ್ತಕ.

೧೯೩೪–೧೯೩೬ರಲ್ಲಿ ಪ್ರತಿಷ್ಠೆ ಜನಪ್ರಿಯತೆ ಗಳಿಸಿರುವಂತಹದು. ಅವರ ಬರವಣಿಗೆಯಲ್ಲಿ ಕಾರುಣ್ಯ, ಹಾಸ್ಯ, ಭೀಷಣ ಪ್ರಸಂಗ ಸತತ ಜಿನುಗುತ್ತ ಇರುತ್ತವೆ. ಸಾಕಷ್ಟು ನಾಟ್ಯಮಯ ಪ್ರಸಂಗಗಳಿವೆ. ಅನುಭವ ಸಂಪನ್ನ ಘಟನೆಗಳು, ಆಕರ್ಷಕ ಕಥನ ಶೈಲಿ, ಕಲೆ ಮತ್ತು ಸತ್ಯದ ಸವಿಯಾದ–ನವಿರಾದ ಮಿಶ್ರಣ ಇಲ್ಲಿವೆ. ಸಹಜ ಸುಂದರ ಅಭಿವ್ಯಕ್ತಿ.

ಲಕ್ಷ್ಮಿಬಾಯಿಯವರು ಕವಿ ನಾರಾಯಣ ರಾವ್ ಟಿಳಕರ ಪತ್ನಿ. ಪತಿ ನಾರಾಯಣ ರಾವ್ ಅವರು ಕ್ರೈಸ್ತಧರ್ಮಕ್ಕೆ ಮತಾಂತರಗೊಂಡರು. ಆಗ ಲಕ್ಷ್ಮಿಬಾಯಿಯವರು ಒಬ್ಬ ಸನಾತನ ಬ್ರಾಹ್ಮಣ ಹೆಂಗಸಾಗಿ ಅನುಭವಿಸಿದ ತೊಳಲಾಟ, ಸಂಕಟ, ಮತಾಂತರದ ಬವಣೆ, ಧರ್ಮಸಂಕಟ ಇಂಥ ಎಷ್ಟೋ ಭೀಕರ ಪ್ರಸಂಗಗಳು ಈ ಆತ್ಮಕಥೆಯಲ್ಲಿ ತುಂಬಿಕೊಂಡಿವೆ. ೨೪ ಫೆಬ್ರವರಿ ೧೯೩೬ರಲ್ಲಿ ಅವರು ತಮ್ಮ ಜೀವನಯಾತ್ರೆಯನ್ನು ಮುಗಿಸಿದರು.

ನಾಲ್ಕು ಭಾಗಗಳಿಂದ ಕೂಡಿದ ಈ ಆತ್ಮಕಥೆಯು ಸುಮಾರು ೫೦೦ ಪುಟಗಳಷ್ಟು ಬೃಹದಾಕಾರವನ್ನು ಪಡೆದಿದೆ. ಇವತ್ತಿಗೂ ಮರಾಠಿಯ ಜನಮಾನಸರಲ್ಲಿ ಹಾಗೂ ಸಾಹಿತ್ಯ ಪ್ರಪಂಚದಲ್ಲಿ ಚಿರಂತನವಾದ ಸ್ಥಾನವನ್ನು ಉಳಿಸಿಕೊಂಡಿರುವುದೇ ಈ ಅನನ್ಯ ಕೃತಿಯ ಹೆಗ್ಗಳಿಕೆ.

# ವಿನಾಶಕಾಲೇ ವಿಪರೀತ ಬುದ್ಧಿ

ನಾನಾ ಚಿಕ್ಕವನಾಗಿದ್ದ. ರೂಢ್‌ಳ ತವರಿನಲ್ಲಿ ನಾಗಪಂಚಮಿಯ ದೊಡ್ಡ ಸಂತೆ ತುಂಬುತ್ತಿತ್ತು. ಇಂದವಳು ಅದನ್ನು ನೋಡಲು ತವರಿಗೆ ಹೋದಳು. ನಮ್ಮ ಬೋರ್ಡಿಂಗ್ ಹುಡುಗಿಯರಿಗೂ ಅದನ್ನು ನೋಡುವ ಆಸೆಯಿತ್ತು. ಹಿಂದೂಗಳ ಉತ್ಸವ, ಜಾತ್ರೆ ನೋಡುವದು ಸರಿಯಲ್ಲ ಎಂಬುದು ನಮ್ಮ ಸಮಾಜದ ಹಾಗೂ ಅಧಿಕಾರಿಗಳ ಭಾವನೆಯಾಗಿದ್ದರಿಂದ ಆ ಹುಡುಗಿಯರಿಗೆ ಹೋಗುವುದು ಸಾಧ್ಯವಾಗಲಿಲ್ಲ.

ಇತ್ತೀಚೆಗೆ ನಮ್ಮ ಮೇಡಂ ಹಾಗೂ ಅವಳ ಪತಿಗೆ ಈಜುವ ವ್ಯಾಮೋಹ ಅಂಟಿಕೊಂಡಿತು. ಅವರು ಹುಡುಗಿಯರನ್ನೂ ಕರೆದೊಯ್ಯಲಾರಂಭಿಸಿದರು. ಇಂದು ರಜೆಯಿರುವದರಿಂದ ಹುಡುಗಿಯರನ್ನು ಕರೆದೊಯ್ದರು. ನಾವೆಲ್ಲ ಬೆಳಿಗ್ಗೆ ಎದ್ದು ಸಿದ್ಧತೆ ಮಾಡಿಕೊಂಡೆವು. ಒಂದೆರಡು ತುತ್ತೂ ತಿಂದೆವು. ಮೇಡಂ ಸಾಹೇಬರ ಜೊತೆಗೆ ಮುಂದೆ ಹೋದರು. ನಾವು ರೈಲಿನಿಂದ, ಬಳಿಕ ನಡೆದು ಹೊರಟೆವು. ನಾನು ಮಕ್ಕಳೊಂದಿಗೆ ವಾತ್ಸಲ್ಯದಿಂದ ವರ್ತಿಸುತ್ತಿದ್ದೆ.

ನಾವು ಸುಮಾರು ಹತ್ತೂವರೆಗೆ ಜುಹೂ ಬೀಚಿಗೆ ಹೋಗಿ ತಲುಪಿದೆವು. ಎಲ್ಲರೂ ಬೀಚ್‌ನಲ್ಲಿ ಆಟ ಆಡಲಾರಂಭಿಸಿದರು. ನಾನು ಎಂದೂ ಕಡಲು ನೋಡಿದವಳಲ್ಲ. ನಾಗಪಂಚಮಿಗೆ ಕಡಲಿನಲ್ಲಿ ಸುಮಾರು ಎರಡು ಗಂಟೆಗೆ ಉಬ್ಬರ ಬರುತ್ತದೆ ಎಂದು ಯಾರೋ ಹೇಳಿದ್ದರು. ಮೇಡಂ ಮತ್ತು ಸಾಹೇಬರು ಅದನ್ನು ನಂಬಿದ್ದರು.

ಹುಡುಗಿಯರು ಹಸಿವೆಯಾಗಿದೆ, ನಮಗೇನಾದರೂ ತಿಂಡಿ ಕೊಡಿ ಅಂದರು. ಏನಾದರೂ ತಿಂದೇ ಹೋಗುವುದು ನಮ್ಮ ದೇಶದ ರೀತಿ, ತಿಂದುಂಡ ಬಳಿಕ ಸ್ನಾನ ಮಾಡಬಾರದು ಇದು ವಿದೇಶಿಗಳ ಪದ್ಧತಿ. ಕೊನೆಗೆ ಮೇಡಂ ಹೇಳಿದಂತೆ ಮೊದಲು ಸ್ನಾನ, ಬಳಿಕ ತಿಂಡಿ ಎಂಬ ಮಾತನ್ನು ನಾವೆಲ್ಲ ಒಪ್ಪಬೇಕಾಯಿತು. ಈಜು ಕಲಿಯುವ ಕೆಲವು ಹುಡುಗಿಯರೇ ಮೇಡಂ ಜೊತೆಗೆ ಇದ್ದರು. ೩೦–೪೦ ಚಿಕ್ಕ ಹುಡುಗಿಯರು ನನ್ನ ಜೊತೆಗಿದ್ದರು. ಈ ಹುಡುಗಿಯರ ಜೊತೆಗೆ ಒಬ್ಬ ಬಾಲಕನಿದ್ದ. ಕುರುಡರ ಶಾಲಾ ಮಕ್ಕಳೂ ಬಂದಿದ್ದರು.

ಹನ್ನೊಂದರ ಸುಮಾರು ಭರ್ತಿಯ ನೀರು ಬರಲಾರಂಭಿಸಿತು. ನೀರು ಮೊಣಕಾಲವರೆಗೆ ಬಂತು. ಅಷ್ಟರಲ್ಲಿ ಕಾಲ ಕೆಳಗಿನ ಮರಳು ಜರಿಯುವದನ್ನು ಕಂಡು ಯಾರೋ ‘ಉಬ್ಬರ ಬಂತು, ಹೊರಗೆ ಬನ್ನಿ’ ಎಂದು ಕೂಗಿ ಹೇಳಿದರು. ಸನಿಹ ಯಾರೂ ಗಂಡಸರು ಇರಲಿಲ್ಲ. ಕಾಲ ಕೆಳಗೆ ಕಲ್ಲು ಇರಲಿಲ್ಲ. ಮಾತಾಡಿದ್ದೂ ಕೇಳಿಸುತ್ತಿರಲಿಲ್ಲ. ಮೇಡಂ ಈಜುವುದರಲ್ಲಿ, ಹುಡುಗಿಯರು ಚಿಪ್ಪು ಆಯುವುದರಲ್ಲಿ ತಲ್ಲೀನರಾಗಿದ್ದರು. ಸದಾ ಜನಸಂದಣಿಯಿಂದ ಗಿಜಿಗುಡುವ ಮುಂಬೈ, ಈ ಬೀಚಿನಲ್ಲಿ ನೋಡಿದರೆ ಒಬ್ಬ ನರಪಿಳ್ಳೆಯೂ ಇಲ್ಲ! ಹೀಗೆ ಆ ಕಾಲದಲ್ಲಿ ಬಲಿ ತೆಗೆದುಕೊಳ್ಳುವದರಲ್ಲಿ ದೇವರಿಚ್ಛೆ ಏನಿತ್ತೋ ಯಾರಿಗ್ಗೊತ್ತು. ನೀರು ಮೊಣಕಾಲಿಂದ ಏರುತ್ತ ಸೊಂಟದವರೆಗೂ ಬಂತು. ನೀರು ಶಾಂತವಾಗಿದ್ದುದರಿಂದ ಅದರ ಗಂಡಾಂತರ

ಮರಾಠಿ ಮೂಲ : **ಲಕ್ಷ್ಮಿಬಾಯಿ ಟಿಳಕ**
ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**

ಯಾರ ಅರಿವಿಗೂ ಬರಲಿಲ್ಲ. ನಾನು ಸರಸರ ನನ್ನ ಬಳಿಯಿರುವ ಹುಡುಗಿಯರನ್ನು ರಕ್ಷಿಸಿ ನೀರಿನಿಂದ ಹೊರಗೆ ತೆಗೆದೆ.

ಅಷ್ಟರಲ್ಲಿ ಅಂಬಿಗರು ನಾವೆಯಿಂದ ಅಲ್ಲಿಗೆ ಬಂದರು. ಅವರು ಕುರುಡರ ಶಾಲೆಯ ಒಬ್ಬ ಹುಡುಗನನ್ನು ಹೊರಗೆ ತೆಗೆದರು. ಅದೇ ದಿನ ತೆಂಗಿನಮರದಿಂದ ಕೆಳಗೆ ಬಿದ್ದು ಒಬ್ಬ ಹುಡುಗ ತೀರಿಕೊಂಡಿದ್ದನಂತೆ.

ನನ್ನ ಸುತ್ತಲೂ ಬರೇ ಬಾಲಕಿಯರೇ ಇದ್ದರು. ಅವರಲ್ಲಿ ಅನಾರೋಗ್ಯದಿಂದ ಇರುವ ವೀರಸ್ವಾಮಿ ಎಂಬ ಬಾಲಕಿ ದಡದಲ್ಲೇ ನಿಂತಿದ್ದಳು. ನನ್ನ ಸುತ್ತಲಿರುವ ಬಾಲಕಿಯರನ್ನು ಹೊರಗೆಳೆದು ನಾನು ಅವರನ್ನೆಲ್ಲ ಆ ದೊಡ್ಡ ಬಾಲಕಿಯ ಬಳಿಗೆ ಕರೆದೊಯ್ದೆ. ಅಲ್ಲಿಗೆ ಹೋಗಿ ತಲುಪುವಷ್ಟರಲ್ಲಿ ಬೇರೊಂದು ಸಂಕಟ ಎದುರಾಯಿತು. ಅಲ್ಲಿರುವ ಸಾಮಾನು ಸರಂಜಾಮು ಕಂಡು 'ಈ ಸಾಮಾನು ಇಲ್ಲಿಂದ ತೆಗೆಯಿರಿ' ಎಂದು ಕಾವಲುಗಾರ ಹೇಳಲಾರಂಭಿಸಿದ. ಸನಿಹದಲ್ಲಿ ಸಹಾಯಕ್ಕೆ ಯಾರೂ ಇಲ್ಲ. ನನಗಂತೂ ಬ್ರಹ್ಮಾಂಡವೇ ಕುಸಿದಂತಾಯಿತು. ಆದರೂ ಏಸೂನನ್ನು ಸ್ಮರಿಸುತ್ತ ಸಾಮಾನು ಹೊತ್ತು ಬೇರೆಡೆ ಹಾಕಿದೆ. ಅಷ್ಟರಲ್ಲಿ ಬಾಲಕಿಯರು ಅತ್ತಿತ್ತ ಕುಣಿದು ಕುಪ್ಪಳಿಸಲಾರಂಭಿಸಿದರು. ಚೆಪ್ಪಿನ ಬೆನ್ನುಹತ್ತಿದವರು ದೂರದಲ್ಲಿದ್ದರು. ಯಾರೋ ಕೈಬೀಸಿ ಕರೆಯುತ್ತಿದ್ದಾರೆ, ಮತ್ತೆ ಕೆಲವರು ಬಂಡೆ ಏರಿ ಕೂತಿದ್ದಾರೆ. ಯಾರ ಧ್ವನಿಯೂ ಕೇಳಿಸುತ್ತಿರಲಿಲ್ಲ. ಸಮುದ್ರ ಮಾತ್ರ ಉಗ್ರರೂಪವನ್ನು ಧಾರಣೆ ಮಾಡಿತ್ತು.

ಅಂಬಿಗರು ಐನೂರು ರುಪಾಯಿ ಬೇಡುತ್ತಿದ್ದರು. ಬಾಲಕಿಯರನ್ನು ರಕ್ಷಿಸಿರಿ ಕೊಡುತ್ತೇನೆ ಎಂದೆ. ಅವರು ಮೊದಲು ಹಣ ಎಂದರು. ಆಗ ನನ್ನ ಹತ್ತಿರ ವಿಮೆಯ ಎರಡೂವರೆ ಸಾವಿರ ರುಪಾಯಿಯಿತ್ತು. ಅದರಲ್ಲಿಯ ಹಣ ನೀಡಿದರೆ ಟಿಳಕರು ಬೇಡವೆನ್ನುವದಿಲ್ಲ ಎಂಬ ಖಾತ್ರಿ ನನಗಿತ್ತು. ಆ ಅಂಬಿಗರಿಗೆ ಮೇಡಂರಿಂದ ವಚನ ಬೇಕಿತ್ತು. ಮೇಡಂ ಸನಿಹದಲ್ಲಿರುವ ಹುಡುಗಿಯರ ರಕ್ಷಣೆ ಮಾಡಿ, ಸಾಹೇಬರಿಗೆ ಫೋನು ಮಾಡಲು ಹೋಗಿದ್ದರು. ಈ ಘಟನೆ ನಡೆದಾಗ ಸಾಹೇಬರು ಅಲ್ಲಿರಲಿಲ್ಲ.

ಈ ಎಲ್ಲ ಆಟ ಹನ್ನೊಂದುವರೆಗೆ ಜರುಗಿತು. ಎರಡಕ್ಕೆ ಬರಬೇಕಿದ್ದ ಉಬ್ಬರ ಹತ್ತೂವರೆಗೆ ಬಂದಿತ್ತು. ಹನ್ನೆರಡರ ಸುಮಾರಿಗೆ ಹುಡುಗಿಯರು ದಡಕ್ಕೆ ಬರುವಂತಾಯಿತು. ಸಮುದ್ರ ತಾನಾಗಿಯೇ ಹುಡುಗಿಯರನ್ನು ದಡಕ್ಕೆ ತಳ್ಳಿತು. ಹನ್ನೆರಡೂವರೆಯಾಯಿತು ಹುಡುಗಿಯರಂತೂ ಹಸಿವೆಯಿಂದ ಕಂಗಾಲಾಗಿದ್ದರು. ಸಾಹೇಬರು ಬಂದರು. 'ಅದೇ ಕಾಲಕ್ಕೆ ಸನಿಹದ ಬಂಗಲೆಯಿಂದ ಜನರೂ ಧಾವಿಸಿ ಬಂದರು. ಎಷ್ಟು ಹುಡುಗಿಯರು ಇದ್ದರು? ಮುಳುಗಿದವರೆಷ್ಟು ? ಇಂದು ನಾಗಪಂಚಮಿ, ಬಂದಿದ್ದೇ ತಪ್ಪು, ಆದರೂ ನೀವೆಲ್ಲ ತಿನ್ನುತ್ತ ಕೂತಿರಲ್ಲ?' ಈ ಮಾತು ಕೇಳಿ ಮೇಡಂ ಮತ್ತು ಸಾಹೇಬರ ತುತ್ತು ಗಂಟಲ ಕೆಳಗೆ ಇಳಿಯಲೇ ಇಲ್ಲ. 'ನೀವು ಒಬ್ಬರೂ ಸಹಾಯ ಮಾಡದೆ ಬರೇ ಭಾಷಣ ಬಿಗಿಯುತ್ತಿದ್ದೀರಲ್ಲ, ಹೋಗಿ ನೀವು' ಎಂದು ನಾನು ಬೆದರಿಸಿದಾಗ ಅವರೆಲ್ಲ ಚೆದುರಿದರು. ಬಳಿಕ ಒಬ್ಬೊಬ್ಬರಾಗಿ ಹನ್ನೊಂದು ಬಾಲಕಿಯರು, ಒಬ್ಬ ಬಾಲಕ ಹೊರಗೆ ಬಂದರು. ನನಗಂತೂ ಇದೇನು ಕನಸೋ ಎಂದೆನಿಸಿತು. ಅವರನ್ನೆಲ್ಲ ಒಂದು ಜಟಕಾ ಗಾಡಿಯಲ್ಲಿ ಹೇರಿ ಜೆ. ಜೆ. ಆಸ್ಪತ್ರೆಗೆ ಕಳಿಸಿದೆವು. ಅವರ ಹೊಟ್ಟೆ ಸೇರಿದ ನೀರು ಹೊರಗೆ ತೆಗೆದರೆ ಅವರು ಚೇತರಿಸಿಕೊಳ್ಳುತ್ತಾರೆ ಎಂದು ನನ್ನ ಭಾವನೆಯಾಗಿತ್ತು. ಉಳಿದ ನಾಲ್ವರನ್ನು ಸಾಹೇಬರು ತಮ್ಮ ಮೋಟಾರಿಗೆ ಹಾಕಿದರು. ನಾನು ನಡೆಯುತ್ತ ಹೊರಟೆ. ಮುಂದೆ ಪೋಲೀಸರು ಅಡ್ಡಗಟ್ಟಿದರು. ಸಾಹೇಬರೇನೋ ಪಾರಾದರು. ನಾವೆಲ್ಲರೂ ನಡೆಯುತ್ತಲೇ ಹೋಗಬೇಕಾಯಿತು. ಬರುವಾಗಿನ ಉತ್ಸಾಹ, ಉಲ್ಲಾಸ ಈಗಿರಲಿಲ್ಲ. ಕಾಲು ಜಡ, ಎದೆಯಲ್ಲಿ ನಡುಕ, ಮನದೊಳಗೆ ಚಿಂತೆ ತುಂಬಿಕೊಂಡಿತ್ತು ! ಎಲ್ಲರೂ ಮೌನವಾಗಿ ಸಾಗಿದೆವು. ವೈರಿಯ ಪಾಲಿಗೂ ಇಂಥ ಪ್ರಸಂಗ ಬರಬಾರದು.

ನಾವು ರೇಲ್ವೆ ಸ್ಟೇಷನ್ ತಲುಪುವಷ್ಟರಲ್ಲಿ ಆಯಾ ಬಾಲಕಿಯರ ಪಾಲಕರು ಸುದ್ದಿ ಕೇಳಿ ಧಾವಿಸಿ ಬಂದಿದ್ದರು. ಎಲ್ಲರೂ ನನ್ನತ್ತ ಬೆರಳು ಮಾಡುವವರೇ. ಅವರ ಪ್ರಶ್ನೆಗೆ ನಾನೇನು ಉತ್ತರಿಸಲಿ? ಪ್ರಿಯ ಓದುಗರೇ, ನನ್ನ ಮೇಲೆ ಎಂಥ ಧರ್ಮಸಂಕಟ ಎರಗಿತ್ತು ಗೊತ್ತೇ? ಸತ್ಯ ಹೇಳಿದರೂ ಪಾಪ, ಸುಳ್ಳು ಹೇಳಿದರೂ ಪಾಪ. ಅವರೆಲ್ಲ ಎಲ್ಲಿದ್ದಾರೋ, ಗೊತ್ತಿಲ್ಲ, ಕೆಲವರು ಮುಂದೆ ಹೋಗಿದ್ದಾರೆ ಮತ್ತೆ ಕೆಲವರು ಹಿಂದೆ ಇದ್ದಾರೆ ಎಂದೆ. ರೈಲು ಏರಿದೆವು. ಏಳು ಗಂಟೆಗೆ ನಮ್ಮ ತಾಣ ಸೇರಿದೆವು.

ಬಂಗಲೆಯಿಂದ ಸಾಹೇಬರ ಆಜ್ಞೆ ಬಂತು. 'ಗೇಟು ಮುಚ್ಚಿ, ಯಾರನ್ನೂ ಒಳಗೆ ಬಿಡಬೇಡಿ. ಅನುಮತಿಯಿಲ್ಲದೆ ಹುಡುಗಿಯರನ್ನು ಹೊರಗೂ ಕಳಿಸಬೇಡಿ. ಯಾರು ಯಾರೋ ಬಂದು ಹೋದರು. ಸಾಹೇಬರ ಸಮಕ್ಷಮ ಆಗಿದ್ದಕ್ಕೆ ಸರಿಹೋಯ್ತು. ಇಲ್ಲದಿದ್ದರೆ ಎಲ್ಲ ನಿಮ್ಮ ತಲೆಗೇ ಬರುತ್ತಿತ್ತು' ಎಂದರು ಕೆಲವರು. ನಾರಾಯಣರಾವ್ ದೇಶಮುಖ ಎಂಬ ಹುಡುಗ ನನ್ನ ಸಹಾಯಕ್ಕೆ ಧಾವಿಸಿ ಬಂದ.

ಗೇಟು ಮುಚ್ಚಲಾಯಿತು. ಜಹಗೀರ್ದಾರ ಎಂಬ ಮುಸಲ್ಮಾನ ಕಾವಲುಗಾರ ಕೈಯಲ್ಲಿ ಕೋಲು. ಹಿಡಿದು ನಿಂತ. ಹೊರಗೆ ಜನಸಂದಣಿ ಸೇರಿತು. ಅವರ ಕೈಯಲ್ಲೂ ಕೋಲು. ಕೆಲವರು ಕಲ್ಲು ಬೀಸಿ ಒಗೆಯುತ್ತಿದ್ದರು. 'ಬಾಗಿಲು ತೆರೆಯಿರಿ. ನಮ್ಮ-ನಮ್ಮ ಹುಡುಗಿಯರನ್ನು ನಮಗೆ ತೋರಿಸಿ. ಇಲ್ಲದಿದ್ದರೆ ನಿಮ್ಮನ್ನು ಕೊಲ್ಲದೆ ಬಿಡೋದಿಲ್ಲ.' ಜನರ ಆಕ್ರೋಶ. ಮನೆಯಲ್ಲಿ ಊಟ ಸಾಕಷ್ಟಿತ್ತು. ಆದರೆ ಯಾರಿಗೂ ಊಟ ಮಾಡುವ ಮನಸ್ಸಾಗಲಿಲ್ಲ. ಹುಡುಗಿಯರೆಲ್ಲ ಶಿಕ್ಷಕಿಯರ ಆಸರೆ ಪಡೆದು ಅಲ್ಲಲ್ಲಿ ಬಿದ್ದುಕೊಂಡಿದ್ದರು – ಇಂಥ ಕೋಲಾಹಲಕ್ಕೆ ದೊಡ್ಡವರೇ ಕಂಗಾಲಾಗುವಾಗ, ಇನ್ನು ಈ ಬಡಪಾಯಿಗಳ ಕಥೆ ಏನು! ಚೀರಾಟ-ಕೂಗಾಟ ನಡೆದೇ ಇತ್ತು. 'ನಾನು ನಿಮ್ಮನ್ನು ಒಳಗೆ ಬಿಡುತ್ತೇನೆ. ನೀವು ಬಂದು ನಿಮ್ಮ ಹುಡುಗಿಯರ ಗುರುತು ಹಿಡಿಯಿರಿ' ಎಂದು ಅವರಿಗೆ ಹೇಳಿ ಗೇಟು ತೆರೆದೆ. ಜನ ದಬದಬನೆ ಒಳಗೆ ನುಗ್ಗಿದರು. ಎಲ್ಲ ಹುಡುಗಿಯರ ಬಂಧು ಬಳಗದವರು ಬಂದಿದ್ದರು. ಹಲವರು ನನಗೂ, ಸಾಹೇಬರಿಗೂ ಬೈದರು. ಕೆಲವರು ತಮ್ಮ ಹುಡುಗಿಯರನ್ನು ಕರೆದೊಯ್ದರು. 'ಅಧಿಕಾರಿಗಳ ಅಪ್ಪಣೆ ಪಡೆದು ಕರೆದೊಯ್ಯಿರಿ' ಎಂದೆ. ಆದರವರು ಲೆಕ್ಕಿಸಲಿಲ್ಲ. 'ನಿಮ್ಮ ಅಧಿಕಾರಿಗೆ ಬೆಂಕಿ ಹಚ್ಚಿರಿ. ಎಷ್ಟೋ ಹುಡುಗಿಯರು ಸತ್ತರು. ನೀವು ಮಾತ್ರ ಹೇಗೆ ಬದುಕಿ ಉಳಿದಿರಿ?' ಮುಂಬೈ ಸುತ್ತಲಿನ ಜನರೂ ಧಾವಿಸಿ ಬಂದರು. ಹುಡುಗಿಯರು ಎಷ್ಟು ಹೆದರಿದ್ದರು ಎಂದರೆ ಹಾಸಿಗೆಯನ್ನೇ ಹಿಡಿದರು. ಅವರ ಉಪಚಾರ ಮಾಡಿ, ಚಹಾ, ಕಾಫಿ ತಿಂಡಿ ನೀಡಿ ಸಮಾಧಾನ ಮಾಡಬೇಕಾಯಿತು. ಒಂದೇ ರಾತ್ರಿಗೆ ನನ್ನ ೨೦-೨೫ ರುಪಾಯಿ ಖರ್ಚಾಯಿತು. ತೀರಾ ಚಿಕ್ಕ ಬಾಲಕಿಯರಂತೂ ಹೆದರಿ ಆಗಾಗ 'ಅಜ್ಜಿ, ಸಮುದ್ರ ಸಮುದ್ರ' ಎಂದು ಕಿರುಚುತ್ತಿದ್ದರು.

ಶ್ರೀಧರ ಎಂಬ ಮ್ಯಾನೇಜರ್ ಬಂದು 'ಪೆಟ್ಟಿಗೆ ಎಷ್ಟು ಬೇಕಾಗಬಹುದು, ಅದರ ಉದ್ದಳತೆ ಎಷ್ಟು?' ಎಂದು ನನಗೆ ಕೇಳುತ್ತಿದ್ದ. ನನಗೆ ಏನು ಹೇಳಬೇಕೋ ಗೊತ್ತಾಗಲಿಲ್ಲ. ಬೆಳಿಗ್ಗೆ ಸಾಹೇಬರು ಬಂದು 'ಅಜ್ಜಿ, ನೀವು ಹುಡುಗಿಯರ ಗುರುತು ಹಿಡಿಯುತ್ತೀರಾ! ಅವರ ಹೆಸರು ಹೇಳಬಲ್ಲಿರಾ?' ಎಂದು ಕೇಳಿದರು. ನಾನು ಒಪ್ಪಿದೆ. ನನಗಂತೂ ಒಬ್ಬ ಹುಡುಗಿಯನ್ನೂ ಗುರುತಿಸುವದಾಗಲಿಲ್ಲ. ಆದರೆ ಅಂಥ ಪ್ರಸಂಗ ಬರಲೇ ಇಲ್ಲ.

ನಾನು ಜೀವನದಲ್ಲಿ ಮೊದಲ ಸಲ ಕೋರ್ಟು ಕಟ್ಟೆ ಏರಬೇಕಾಯಿತು. ಟಿಳಕರ ಸಾವಿನ ಬಳಿಕ ಜೆ. ಜೆ. ಆಸ್ಪತ್ರೆಗೆ ಹೋಗುವ ಪ್ರಸಂಗ ಬಂತು. ನೂರಾರು ಜನರು ಅಲ್ಲಿ ಸೇರಿದ್ದರು. ನಾನಂತೂ ಅದೇ ಒದ್ದೆ ಸೀರೆಯಲ್ಲೇ ಇದ್ದೆ. ನಾನು ಟಾಂಗಾದಿಂದ ಇಳಿದೆ. ಚಿಕ್ಕೆಯ ಅಪ್ಪ ನನ್ನನ್ನು ಜ್ಯೂರಿಯ ಎದುರಿಗೆ ನಿಲ್ಲಿಸಿದ. ಅಲ್ಲಿದ್ದ ನನ್ನ ಗುರುತಿನ ಏಕೈಕ ವ್ಯಕ್ತಿ ಎಂದರೆ ಡಾ॥ ಕರಮದಕರ. ನನ್ನ ಹೆಸರು ಕರೆಯಲಾಯಿತು. ಅದೇ ಅಸ್ತವ್ಯಸ್ತ ಸ್ಥಿತಿಯಲ್ಲಿ ಕಟಕಟೆಗೆ ಹೋಗಿ ನಿಲ್ಲಬೇಕಾಯಿತು. ಕೋರ್ಟು ಕಾರ್ಯಕಲಾಪ ಶುರುವಾಯಿತು. ನನ್ನ ಅಲುಗಾಡುವ ಗೋಣು ಕಂಡು ಡಾ॥ ಕರಮದಕರ ಜ್ಯೂರಿಯ ಅಪ್ಪಣೆ ಪಡೆದು ನನ್ನ ಅಲುಗುವ ಗೋಣು ಹಿಡಿದು ನಿಂತನು. ಆಗ ನನಗೆ ಧೈರ್ಯ ಬಂತು. ಜ್ಯೂರಿ ಎದುರಿಗೆ ಅವರ ಪ್ರಶ್ನೆಗಳಿಗೆ ಉತ್ತರಿಸಿದೆ.

ಹುಡುಗಿಯರ ಮುಂದಿನ ಉತ್ಸವ ನೋಡುವ ಧೈರ್ಯ ನನಗಾಗಲಿಲ್ಲ. ಹೀಗಾಗಿ ನಾನು ಜೆ. ಜೆ. ಆಸ್ಪತ್ರೆಗೆ ಹೋಗಲಿಲ್ಲ. ಅಲ್ಲಿಯ ರೋದನ-ಆಕ್ರಂದನ ಬಣ್ಣಿಸಲು ನನ್ನ ಬಳಿ ಮಾತೇ ಇಲ್ಲ. ನೆನಪೂ ಕರುಳು ಹಿಂಡುವಂತಹದಾಗಿತ್ತು. ಜುಹೂ ಪಿಕ್‌ನಿಕ್ ಇಲ್ಲೇ ಮುಗಿಯಿತು. ಅದರ ಪ್ರಾಯಶ್ಚಿತ್ತ ಮುಂದೆ ಬಹಳ ದಿನ ಅನುಭವಿಸಬೇಕಾಯಿತು. ಮುಂದೆ ಎರಡು ತಿಂಗಳು ಅಳು-ರೋದನ-ಆಕ್ರಂದನ ಮುಂದುವರಿದಿತ್ತು.


ಮರಾಠಿ ಮೂಲ : **ಲಕ್ಷ್ಮೀಬಾಯಿ ಟಿಳಕ**
ಕನ್ನಡಕ್ಕೆ : **ಚಂದ್ರಕಾಂತ ಪೋಕಳೆ**
ನಂ. ೩೫೫, ಸ್ಕೀಮ್ ನಂ. ೪೦, ೩ನೇ ಹಂತ, ೪ನೇ ಅಡ್ಡರಸ್ತೆ
ಹನುಮಾನ್ ನಗರ, ಬೆಳಗಾವಿ – ೫೯೦ ೦೦೮


## ಚರಿತ್ರೆ – ಕಾವ್ಯ

ರೂಕ್ಷವಾದ
ಚರಿತ್ರೆಯನ್ನು
ಪಳಗಿಸಿ
ಸೂಕ್ಷ್ಮವಾದ
ಕವಿತೆಯನ್ನಾಗಿಸಲೇಬೇಕು!

ಸಿ.ಪಿ.ಕೆ.
ಮೈಸೂರು

# ಸಾಮಾಜಿಕ ಸೌಹಾರ್ದತೆಯ ಸವಾಲುಗಳು

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**

ಸಮಾಜದಲ್ಲಿ ಭಿನ್ನತೆಗಳಿವೆ. ಲಿಂಗ, ಜಾತಿ, ವರ್ಗ, ವರ್ಣ, ಶಿಕ್ಷಣ ಇತ್ಯಾದಿ ಇವುಗಳಿಗೆ ಕಾರಣವಾಗಿವೆ. ಹೀಗಿದ್ದಾಗಲೂ ಸಮಾಜದ ಎಲ್ಲಾ ಸಮುದಾಯಗಳು ಒಟ್ಟುಗೂಡಿ ಸೌಹಾರ್ದತೆಯಿಂದ ಬಾಳುವುದು ಕೆಲ ಅನಿವಾರ್ಯ. ಇಲ್ಲಿಯ ಸಾಮಾಜಿಕ ಭಿನ್ನತೆಗಳು ವಿಷದ ಮೂಲಗಳಾಗಬಾರದು. ಅಸ್ಮಿತೆ ಇರಬಹುದೇನೋ! ಆದರೆ ಆ ಅಸ್ಮಿತೆ ರಾಜಕೀಯದ ಹುಳಿ ಬೆರೆತಾಗ ಹಾಲು ನಂಜಾಗುವಂತೆ ನಂಜಾಗುತ್ತದೆ. ಅದರಿಂದ ಪಟ್ಟಭದ್ರರಿಗೆ ಲಾಭವಿದೆಯೇ ವಿನಾ ಸಾಮಾನ್ಯ ಜನರಿಗಲ್ಲ. ಹಾಗಾಗಿ ಜನತೆಯ ಸೌಹಾರ್ದ ಬದುಕಿಗೆ ಭಂಗ ತರುವಂತಹ ಸಂಗತಿಗಳ ಬಗೆಗೆ ಎಚ್ಚರ ಅಗತ್ಯ. ಇಂತಹ ಸಂಗತಿಗಳು ಹಿಂದೆಂದಿನಿಂದಲೂ ಇವೆ. ಇವುಗಳ ಸ್ವರೂಪ ಕಾಲದಿಂದ ಕಾಲಕ್ಕೆ ಕೊಂಚ ಭಿನ್ನವಿರಬಹುದು. ಆದರೆ ಅವುಗಳಲ್ಲಿ ಕೆಲವು ಮೇಲುಗೈ ಸಾಧಿಸಿದರೆ ಇನ್ನು ಕೆಲವು ಸ್ವಲ್ಪ ಕಡಿಮೆ ಹಂತದಲ್ಲಿ ಕ್ರಿಯಾಶೀಲವಾಗಿರಬಹುದು. ಉದಾಹರಣೆಗೆ, ಇಂದು ಭಾರತೀಯ ಸಂದರ್ಭದಲ್ಲಿ ಹಿಂದೂ ಕೋಮುವಾದ ಮೇಲುಗೈ ಸಾಧಿಸಿದೆ. ಉಪಜಾತಿ ರಾಜಕಾರಣದಂತಹ ಸಂಗತಿಗಳು ಅನಂತರದ ಸ್ಥಾನವನ್ನು ಪಡೆದಿವೆ.

ಹೀಗೆ ಜನತೆಯ ಸಾಮಾಜಿಕ ಸೌಹಾರ್ದತೆಗೆ ಭಂಗ ತರುವ ಹಲವು ಸಂಗತಿಗಳು ಇಂದು ನಮ್ಮೊಡನಿವೆ. ಇವುಗಳ ಬಗೆಗೆ ಎಚ್ಚರವಾಗಿದ್ದಾಗ ಮಾತ್ರ ಜನರ ಜುಟ್ಟು ಅವುಗಳ ಕೈಗೆ ಹೋಗುವುದು ತಪ್ಪುತ್ತದೆ. ಅಲ್ಲದೆ, ಅವು ಇವರ ಮೆಟ್ಟು ಆಗುವ ಸಾಧ್ಯತೆಯೂ ಇರುತ್ತದೆ. ಮೆಟ್ಟು ನಮ್ಮ ಇಚ್ಛಾನುಸಾರ ಪಾತ್ರ ನಿರ್ವಹಿಸುತ್ತದೆ. ಜುಟ್ಟು ಇನ್ನೊಬ್ಬರ ಕೈಗೆ ದಕ್ಕಿದಾಗ ಅವರೇ ಸೂತ್ರಧಾರರಾಗಿ ಜನರು ಪಾತ್ರಧಾರಿಗಳಾಗುವ ಸಂಭವವಿರುತ್ತದೆ. ಹಾಗಾಗಿ ಸಾಮಾಜಿಕ ಸೌಹಾರ್ದತೆಗೆ ಭಂಗ ತರುವಂತಹ ಇಂತಹ ಪಟ್ಟಭದ್ರರ ಬಗೆಗೆ ಅಥವಾ ಜುಟ್ಟು ಹಿಡಿಯುವವರ ಬಗೆಗೆ ಜನತೆಗೆ ಎಚ್ಚರದ ಅಗತ್ಯವಿದೆ. ಭಾರತದ ಪ್ರಸಕ್ತ ಸನ್ನಿವೇಶದಲ್ಲಿ ಸಾಮಾಜಿಕ ಸೌಹಾರ್ದತೆಗೆ ಭಂಗ ತಂದಿರುವ ಅತ್ಯಂತ ದೊಡ್ಡ ಸಂಗತಿ ಅಥವಾ ಸವಾಲು ಹಿಂದೂ ಕೋಮುವಾದ ಆಗಿದೆ.

ಹಿಂದೂಗಳು ಅನ್ಯಧರ್ಮೀಯರ ಎದುರಿನಲ್ಲಿ ಬಹುಸಂಖ್ಯಾತರಾಗಿ ಕಂಡುಬರುತ್ತಾರೆ. ಇಲ್ಲಿ ಅನ್ಯಧರ್ಮೀಯರ ಎದುರಿನಲ್ಲಿ ಎಂದು ಪ್ರಸ್ತಾಪಿಸಿದ್ದಕ್ಕೆ ಕಾರಣ, ಇವರಲ್ಲಿ ತಮ್ಮ ಬಗೆಗೆ ಎಚ್ಚರ ಪ್ರಕಟವಾಗುವುದೇ ಅನ್ಯಧರ್ಮೀಯರ ಎದುರಿನಲ್ಲಿ. ಉಳಿದಂತೆ ಇವರು ಜಾತಿಯ ಹೆಸರಿನಲ್ಲಿ ಆಂತರಿಕವಾಗಿ ಛಿದ್ರವಾಗಿದ್ದಾರೆ. ಜಾತಿ-ಜಾತಿಗಳ ನಡುವೆ ಇರುವ ಗೋಡೆ ಇವರ ನಡುವೆ ವೈವಾಹಿಕ ಸಂಬಂಧವನ್ನು ಆಗುಮಾಡಕೊಡುತ್ತಿಲ್ಲ. ಹಾಗಾಗಿ ಜಾತಿ ಇಲ್ಲಿ ಅತ್ಯಂತ ಮಹತ್ವದ ಸಾಮಾಜಿಕ ಅಸ್ಮಿತೆ ಮತ್ತು ಎಚ್ಚರವಾಗಿದೆ. ಇಂತಹ ಹಲವು ಜಾತಿಗಳು ಸೇರಿ, ತಮ್ಮ ಸುತ್ತಲೂ ನಿರ್ಮಿಸಿಕೊಂಡಿರುವ ಬೇಲಿ ಮಾತ್ರ ಹಿಂದೂ ಎಂಬ ಧರ್ಮದ ಹೆಸರನ್ನು ಪಡೆದಿದೆ. ಇಲ್ಲಿ ಧರ್ಮವಿದೆಯೋ ಅಧರ್ಮವಿದೆಯೋ ಅದು ಯಾರಿಗೂ ಬೇಕಾಗಿಲ್ಲ. ಅದರ ಬಗೆಗೆ ತಿಳುವಳಿಕೆಯಾಗಲೀ ಅದರ ಅಗತ್ಯವಾಗಲೀ ಯಾರಿಗೂ ಇಲ್ಲ. ಅಲ್ಲದೆ, ಹಿಂದೂ ಎಂಬುದರ ಸಿದ್ಧಾಂತದ ಬಗೆಗೆ ಸಹ ಒಮ್ಮತವಿಲ್ಲ. ಹಾಗೆ ಇರಲೂ ಸಾಧ್ಯವಿಲ್ಲ. ಕಾರಣ ಎಲ್ಲ ಧರ್ಮಗಳ ತಿರುಳೂ ಒಂದೇ. ಅದನ್ನೇ ಸತ್ಯಸ್ಯ ಸತ್ಯ ಎಂದು ಭಾವಿಸಿದರೆ ಯಾವುದೇ ಧರ್ಮಕ್ಕೂ ಪ್ರತ್ಯೇಕ ಅಸ್ಮಿತೆ ಸಾಧ್ಯವಾಗುವುದಿಲ್ಲ. ಆದರೆ ಆಚರಣೆಗಳು ಮಾತ್ರ ಭಿನ್ನ. ಅವುಗಳ ಆಧಾರದ ಮೇಲೆ ಮಾತ್ರ ಧರ್ಮಗಳನ್ನು ಗುರುತಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ಹಿಂದೂಧರ್ಮವನ್ನು ಸಹ ಹಬ್ಬಹರಿದಿನ ಇತ್ಯಾದಿಗಳ ಹೆಸರಿನಲ್ಲಿ ಗುರುತಿಸಲಾಗುತ್ತದೆಯಾದರೂ ಸಾಮಾಜಿಕ ಸಂಬಂಧಗಳ ನೆಲೆಯಲ್ಲಿ ಧರ್ಮಕ್ಕಿಂತ ಜಾತಿಯೇ ಇಲ್ಲಿ ಕಟುವಾಸ್ತವವಾಗಿದೆ. ಹಾಗಾಗಿ ಇದು ಆಂತರಿಕವಾಗಿ ಛಿದ್ರ. ಆದರೆ ಅನ್ಯಧರ್ಮೀಯರ ಪ್ರಸ್ತಾಪ ಬಂದಾಗ ಮಾತ್ರ ಇವರಲ್ಲಿ ತಾವು ಹಿಂದೂ ಎಂಬ ಜಾಗೃತಿ ಮೂಡುತ್ತದೆ. ಅದರಲ್ಲೂ ಬೌದ್ಧರು, ಕ್ರೈಸ್ತರು ಇವರಿಗಿಂತ ಮಿಗಿಲಾಗಿ ಮುಸಲ್ಮಾನರ ಎದುರಿನಲ್ಲಿ ಈ 'ಧರ್ಮ' ಪ್ರಜ್ಞೆ ಇವರಲ್ಲಿ ಹೆಚ್ಚು ಜಾಗೃತಿಯಾಗುವುದು. ಹಾಗಾಗಿ ಇದು ಹಿಂದೂ ಧರ್ಮದ ಜಾಗೃತಿಯೋ ಹಿಂದೂ ಕೋಮು ಜಾಗೃತಿಯೋ ಎಂಬುದು ಸ್ಪಷ್ಟ. ಅದರಲ್ಲೂ ನೆರೆಹೊರೆಯ ಯಾವುದೇ ರಾಷ್ಟ್ರಗಳಿಗಿಂತ ಪಾಕಿಸ್ತಾನದ ಪ್ರಸ್ತಾಪ ಬಂದಾಗಲೇ ಇವರ ರಾಷ್ಟ್ರಪ್ರಜ್ಞೆ ಸಹ ವಿಶೇಷ ಜಾಗೃತಿಗೇಳುವುದು. ಹಾಗಾಗಿ ಇದು ಜಾತ್ಯತೀತ ರಾಷ್ಟ್ರಪ್ರಜ್ಞೆಯೋ ಹಿಂದೂ ಮತೀಯವಾದಿ ರಾಷ್ಟ್ರಪ್ರಜ್ಞೆಯೋ ಸ್ಪಷ್ಟ. ಯಾವುದೇ ಮತೀಯವಾದಿ ರಾಷ್ಟ್ರಪ್ರಜ್ಞೆ ರಾಷ್ಟ್ರಪ್ರಜ್ಞೆಯೇ ಅಲ್ಲ. ಕಾರಣ, ನಮ್ಮ ಜಾತ್ಯತೀತತೆಯನ್ನು ಒಪ್ಪುವ, ಪ್ರತಿಪಾದಿಸುವ ಸಂವಿಧಾನ ನಮ್ಮದು. ಹಾಗಾಗಿ ರಾಷ್ಟ್ರಪ್ರಜ್ಞೆಯೆಂಬುದು ಜಾತ್ಯತೀತವಾದುದು ಮಾತ್ರ. ಇದಕ್ಕೆ ಭಿನ್ನವಾದ ಹಿಂದೂ ರಾಷ್ಟ್ರಪ್ರಜ್ಞೆ ಸೀಮಿತವಾದುದೂ ಅಲ್ಲ; ಸಂಕುಚಿತವಾದುದೂ ಅಲ್ಲ. ಬದಲಿಗೆ, ರಾಷ್ಟ್ರಪ್ರಜ್ಞೆಗೆ ಒಡಕು ಮೂಡಿಸುವ ಪ್ರಜ್ಞೆ ಅದು. ಆತ್ಯಂತಿಕವಾಗಿ ರಾಷ್ಟ್ರವಿರೋಧಿ ಪ್ರಜ್ಞೆಯೆಂದರೂ ಸರಿಯೇ ಆದೀತು. ಈ ದಿಸೆಯಲ್ಲಿ ಇಂದು ಹಿಂದೂ ಮತೀಯವಾದ ಎಲ್ಲೆಡೆ ತನ್ನ ಕರಾಳ ಬಾಹುಗಳನ್ನು ಚಾಚಿದೆ. ಸಂಘ-ಸಂಸ್ಥೆ, ರಾಜಕೀಯ ಪಕ್ಷ, ಮಠ – ಇತ್ಯಾದಿ ಈ ದುಷ್ಟ ಅಕ್ಟೋಪಸ್‌ಗೆ ತನ್ನ ಪೋಷಣೆಯನ್ನು ನೀಡುತ್ತಿದೆ. ಬಾಲ್ಯದಿಂದಲೂ ಧಾರ್ಮಿಕ ಪರಿಸರದಲ್ಲಿಯೇ ಮಕ್ಕಳು ಬೆಳೆಯುವ ಸನ್ನಿವೇಶವು ಭಾರತದಲ್ಲಿರುವುದರಿಂದ ಅವರ ಧರ್ಮಗಳಿಗೆ ಮತೀಯವಾದದ ಹುಳಿ ಹಿಂಡುವುದು ಸುಲಭ. ಇದನ್ನು ಅರಿತ ಮತೀಯವಾದಿಗಳು ಹಿಂದೂ ಕೋಮುವಾದದ ಹುಳಿಯನ್ನು ಎಲ್ಲೆಡೆಯೂ ಒಂದೊಂದು ತೊಟ್ಟನ್ನು ಹಾಕುತ್ತಿದೆ. ಇದರ ಪರಿಣಾಮವಾಗಿ ನಮ್ಮ ಸುತ್ತಲಿನ ಪ್ರತೀ ನಾಲ್ಕು ಜನರಲ್ಲಿ ಮೂರು ಜನ ಕೋಮುವಾದಕ್ಕೆ ಬಲಿಯಾಗಿದ್ದಾರೆ. ಇದರ ಪ್ರಮಾಣವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಿರಬಹುದು. ಆದರೆ ಇವುಗಳ ಸಾಂದ್ರತೆ ಲಿಂಗ, ಭಾಷೆ, ಜಾತಿ, ವರ್ಗ ಮುಂತಾದ ಸಮಾಜದ ವಲಯಗಳನ್ನು ವ್ಯಾಪಿಸಿದೆ. ಹಾಗಾಗಿಯೇ ಪೂರ್ವದ ಮನು ಸಂವಿಧಾನ ಇಂದು ಪ್ರಜಾಸತ್ತೆಯನ್ನು ಪೋಷಿಸುತ್ತಿರುವ ಭೀಮ ಸಂವಿಧಾನದ ಕೋಟೆಯನ್ನು ಕಿಂಡಿಗಳಿಂದ ನುಸುಳಿ ಭೇದಿಸಲು ಪ್ರಯತ್ನಿಸುತ್ತಿರುವುದು.

ಇಲ್ಲಿ ಜನರನ್ನು ಮತೀಯವಾದಿಗಳನ್ನಾಗಿ ಮಾಡುವುದು ಸುಲಭ. ಕಾರಣ, ಮೂಲತಃ ಅವರು ಧಾರ್ಮಿಕ ಸ್ವಭಾವದವರಾಗಿರುತ್ತಾರೆ. ಆದರೆ ಅವರನ್ನು ಧಾರ್ಮಿಕ ಚೌಕಟ್ಟುಗಳಿಂದ ಆಚೆಗೆ ತರುವುದಾಗಲೀ ಮತೀಯವಾದದ

ಸಾಮಾಜಿಕವಾಗಿ, ರಾಜಕೀಯವಾಗಿ, ವಿವಿಧ ಸಮುದಾಯಗಳಿಗೆ ನ್ಯಾಯವಾಗಿ ಸಲ್ಲಿಸಬೇಕಾದುದು ಸಂದ ನಂತರ ಈ ಪ್ರಕ್ರಿಯೆ ನಿಲ್ಲಬಹುದೆಂದು ಭಾವಿಸಬಹುದಾಗಿದೆ. ಈ ನೆಲೆಯಲ್ಲಿ ಕೆಳಜಾತಿಗಳು ಮಾತ್ರ ತಮ್ಮ ಹಕ್ಕುಗಳನ್ನು ಗಳಿಸಿಕೊಳ್ಳಲು ಸಂಘಟಿತ ಯತ್ನದ ಭಾಗವಾಗಿ ಸಂಘಟನೆಗಳನ್ನು ಮಾಡಿಕೊಳ್ಳಬಹುದು. ಆದರೆ ತಮ್ಮ ಪಾಲು ಅನೇಕ ಶತಮಾನಗಳ ಹಿಂದೆಯೇ ದಕ್ಕಿರುವ ಮೇಲ್‌ಜಾತಿಗಳು ಹೀಗೆ ಸಂಘಟಿತವಾಗುವುದು ಅನಗತ್ಯವೆಂದೇ ಭಾವಿಸುತ್ತೇನೆ. ಹಾಗೊಮ್ಮೆ ಸಂಘಟಿತವಾದಲ್ಲಿ ತಮ್ಮಲ್ಲಿ ಶೇಖರವಾಗಿರುವ ದ್ರವ್ಯವನ್ನು ತಮ್ಮ ಸಮುದಾಯದ ಬಡವರಿಗೆ ವಿತರಣೆ ಮಾಡಿಕೊಳ್ಳುವ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು. ಅಲ್ಲದೆ, ಕರ್ನಾಟಕ ಸರ್ಕಾರವು ಇತ್ತೀಚೆಗೆ ನಡೆಸಿದ ಜನಗಣತಿಯ ಆಧಾರದಲ್ಲಿ ತಮ್ಮ ಸಮುದಾಯದ ಪಾಲಿಗೆ ತಮ್ಮ ಜನಸಂಖ್ಯೆಗೆ ಅನುಗುಣವಾಗಿ ಶೈಕ್ಷಣಿಕ, ಔದ್ಯೋಗಿಕ, ಔದ್ಯಮಿಕ, ಆರ್ಥಿಕ, ಸಾಮಾಜಿಕ ಪಾಲು ದಕ್ಕಿದೆಯೇ, ಇಲ್ಲವೇ ಇನ್ನೂ ಹೆಚ್ಚಿನದು ದಕ್ಕಿದೆಯೇ? – ಎಂಬ ಪ್ರಶ್ನೆಯನ್ನು ಆತ್ಮಾವಲೋಕನದ ಸ್ತರದಲ್ಲಿ ಹಾಕಿಕೊಂಡು ಅಸಂಗ್ರಹ ತತ್ವದ ಅಡಿಯಲ್ಲಿ ಹೆಚ್ಚಾದ ಭಾಗವನ್ನು ಇತರೆ ಸಮುದಾಯಗಳಿಗೆ ಸಾಮಾಜಿಕವಾಗಿ ಹಂಚುವ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು.

> **ಅನಿರೀಕ್ಷಿತ**
>
> ಕೆಲವರ ಬರವಣಿಗೆ
> ನಿರೀಕ್ಷೆಯನ್ನು ಮೀರಿ
> ಸಾರವತ್ತಾಗಿರುವುದು:
> ಒಮ್ಮೊಮ್ಮೆ ನಿರೀಕ್ಷೆಯನ್ನು ಮೀರಿ
> ನೀರಸವಾಗಿ ಕೂಡ!
>
> ಸಿ.ಪಿ.ಕೆ., ಮೈಸೂರು

ಚೌಕಟ್ಟಿನಿಂದ ಆಚೆಗೆ ಜಾತ್ಯತೀತತೆಯ ಚೌಕಟ್ಟಿಗೆ ತರುವುದಾಗಲೀ ಅಷ್ಟು ಸುಲಭವಲ್ಲ. ಅಷ್ಟು ಸುಲಭವಲ್ಲದ ಕೆಲಸದಲ್ಲಿ ಶರಣರು, ದಾಸರು, ತತ್ವಪದಕಾರರು, ಹೊಸಗನ್ನಡದ ಕವಿಗಳು ವಿಶೇಷವಾಗಿ ದುಡಿದಿದ್ದಾರೆ. ಆದರೂ ಹರಿ–ಹರ ಸಮನ್ವಯ ಹಿಂದಿನ ಕಾಲದ ಕೋಮು ಸೌಹಾರ್ದತೆಯ ಒಂದು ನೆಲೆಯಾದರೆ, ರಾಮ–ರಾಬರ್ಟ್–ರಹೀಮ್ ಈ ಕಾಲದ ಅಂತಹ ಇನ್ನೊಂದು ಮುಖ್ಯ ನೆಲೆಯಾಗುತ್ತದೆ. 'ಸರ್ವಜನಾಂಗದ ಶಾಂತಿಯ ತೋಟ' ಎಂದು ದಿನನಿತ್ಯ ಹಾಡುವ ಜನರನೇಕರು ಮತೀಯವಾದಿ ಸಂಘಟನೆಗಳ ನೇತಾರರಾಗಿ, ಬಾಲಬಡುಕರಾಗಿ ತಾವು ಇರುವ ಕ್ಷೇತ್ರಗಳಲ್ಲಿಯೇ ಕ್ರಿಯಾಶೀಲರಾಗಿರುವುದು ಆತಂಕದ ಸಂಗತಿ. ಇವರು ಆಡುವ ಮಾತುಗಳಲ್ಲಿ, ಕಟ್ಟುವ ಚರಿತ್ರೆಗಳಲ್ಲಿ, ಸ್ವಭಾವದಲ್ಲಿ ಇದು ಪ್ರಕಟಗೊಳ್ಳುತ್ತದೆ. ಇದನ್ನು ಅರಿತು ಪೋಷಿಸಿ, ತಮ್ಮ ಬೇಳೆ ಬೇಯಿಸಿಕೊಳ್ಳುವ ಒಂದು ರಾಜಕೀಯ ಪಕ್ಷ ಸಹ ಇಂದು ಸುಲಭವಾಗಿ ಅಧಿಕಾರದ ಗದ್ದುಗೆಗೆ ಏರುತ್ತಿದೆ. ಬಹುಸಂಖ್ಯಾತ ಹಿಂದೂಗಳು ಇರುವ ದೇಶದಲ್ಲಿ ಮುಸಲ್ಮಾನರು, ಕ್ರೈಸ್ತರು ಮತ್ತು ಇತರೆ ಧಾರ್ಮಿಕ ಅಲ್ಪಸಂಖ್ಯಾತರ ಮತಗಳ ನೆರವಿಲ್ಲದೆಯೂ ಬಹುಮತವನ್ನು ಪಡೆದು ಚುನಾವಣೆಯಲ್ಲಿ ಗೆದ್ದು, ಅಧಿಕಾರದ ಗದ್ದುಗೆಗೆ ಏರಬಹುದು ಎಂಬ ತಿಳುವಳಿಕೆಯನ್ನು ಹೊಂದಿರುವ ಈ ಪಕ್ಷದ ನಾಯಕರು ಈ ವಿಚಾರಗಳನ್ನು ಬಹಿರಂಗವಾಗಿಯೇ ಹೇಳಿಕೊಳ್ಳುತ್ತಾರೆ. ಉದಾಹರಣೆಗೆ, ಮುಸಲ್ಮಾನರ ಮತಗಳೇ ಬೇಡ ಎಂದ ಉತ್ತರ ಕನ್ನಡ ಕ್ಷೇತ್ರ ಲೋಕಸಭಾ ಸದಸ್ಯ ಅನಂತಕುಮಾರ ಹೆಗ್ಗಡೆ ಅವರ ಮಾತನ್ನು ಇಲ್ಲಿ ನೆನಪಿಸಿಕೊಳ್ಳಬಹುದು.

ಹೀಗೆ ಪ್ರಮುಖವಾಗಿ ಮುಸಲ್ಮಾನರನ್ನು ತೋರಿಸಿ ಬಹುಸಂಖ್ಯಾತ ಹಿಂದೂಗಳ ವೋಟನ್ನು ಪಡೆಯುವ ಮತೀಯವಾದಿ ರಾಜಕಾರಣ ಇಲ್ಲಿದೆ. ಬದಲಿಗೆ, ಜಾತ್ಯತೀತ ರಾಜಕಾರಣವಾಗಲೀ ಜಾತ್ಯತೀತ ಸಂವಿಧಾನಕ್ಕೆ ಅನುಗುಣವಾಗಿ ನಡೆಯುವ ನಡೆಯಾಗಲೀ ಇಲ್ಲ. ಧಾರ್ಮಿಕ ಭಾವನಾತ್ಮಕತೆಗೆ ಸಿಲುಕುವ ಜನತೆ ಇಂತಹ ವ್ಯಕ್ತಿ, ಪಕ್ಷ, ಸಂಘಟನೆಗಳ ಕೈ ಹಿಡಿಯುವುದರಿಂದ ಧಾರ್ಮಿಕ ಸೌಹಾರ್ದತೆಗೆ ಕೊಡಲಿ ಪೆಟ್ಟು ಬೀಳುತ್ತದೆ. ಹೀಗೆ ಮತೀಯ ದ್ವೇಷವನ್ನು ಬಿತ್ತಿ ತಮ್ಮ ಬೇಳೆ ಬೇಯಿಸಿಕೊಳ್ಳುವ ಹಿಂದೂ ಮತೀಯವಾದಿಗಳು ಅಥವಾ ಕೋಮುವಾದಿಗಳು ನಮ್ಮ ನಡುವೆ ಕಳೆದ ಮೂರು ದಶಕಗಳಲ್ಲಿ ಹೆಚ್ಚು ಕ್ರಿಯಾಶೀಲರಾಗಿದ್ದಾರೆ. ಇದು ಮನು ಸಂವಿಧಾನದ ಪುನರಾಗಮನದ ಮುನ್ಸೂಚನೆಯಾಗಿದೆ. ಅಲ್ಲದೆ, ಜಾತ್ಯತೀತತೆಯನ್ನು ಪ್ರತಿಪಾದಿಸುವ ಭೀಮ ಸಂವಿಧಾನಕ್ಕೆ ಬೀಳುತ್ತಿರುವ ಆರಂಭಿಕ ಪೆಟ್ಟುಗಳಾಗಿವೆ. ಇದರ ಬಗೆಗೆ ಜಾಗೃತರಾಗುವ ಸ್ತರದಲ್ಲಿ ಬಸವಣ್ಣ ಮೊದಲಾದ ಶರಣರು, ಸಂತರು, ತತ್ವಪದಕಾರರು, ಕುವೆಂಪು ಮೊದಲಾದ ವಿಚಾರವಂತ ಕವಿಗಳು, ಫುಲೆ, ಅಂಬೇಡ್ಕರ್, ಪೆರಿಯಾರ್, ನಾರಾಯಣಗುರು ಮೊದಲಾದ ಸಾಮಾಜಿಕ ಸುಧಾರಕರು, ಕ್ರಾಂತಿಕಾರಿಗಳು ನಮಗೆ ಆದರ್ಶವಾಗಬೇಕು. ಹಾಗಾದಾಗ ಅವರ ಬೆಳಕು ದಾರಿದೀಪವಾಗುತ್ತದೆ. ನಾವು ನಡೆಯ ಬೇಕಾದ ದಾರಿಯನ್ನು ತೋರುತ್ತದೆ. ಆ ದಾರಿಯಲ್ಲಿ ಮಾತ್ರ ಎಲ್ಲ ಧರ್ಮಗಳ ಜನ ಸೌಹಾರ್ದತೆಯಿಂದ ಬಾಳುವುದು ಕಾಣುತ್ತದೆ. ಈ ದಿಸೆಯಲ್ಲಿ ಸರ್ವಜನ ಸೌಹಾರ್ದ ಸಂಪನ್ನತೆಯಿಂದ ಬಾಳುವುದು ಸಾಧ್ಯವಾಗುತ್ತದೆ. ಇಲ್ಲವಾದಲ್ಲಿ ಮುಸಲ್ಮಾನರು ಗುರಿಯಾಗಿರುವ ಇಂದಿನ ಹಿಂದೂ ಕೋಮುವಾದಕ್ಕೆ ಅನಂತರದಲ್ಲಿ ದಲಿತರು, ಶೂದ್ರರು, ಮಹಿಳೆಯರು ಅನುಕ್ರಮವಾಗಿ ಬಲಿಯಾಗುವುದು ಸಾಧ್ಯವಿದೆ. ಕಾರಣ, ಮೇಲ್ನೋಟದ ಹಿಂದೂ ಕೋಮುವಾದ ತನ್ನ ಆಂತರ್ಯದಲ್ಲಿ ಬ್ರಾಹ್ಮಣ್ಯವಾದವೇ ಆಗಿದೆ.

**ಮೀಸಲಾತಿ ಬಗೆಗಿನ ಅಪಕಲ್ಪನೆ :** ಮೀಸಲಾತಿ ಎಂಬುದು ಸಾಮಾಜಿಕ ನ್ಯಾಯದ ಪ್ರತೀಕ. ಸಾಮಾಜಿಕವಾಗಿ, ಆರ್ಥಿಕವಾಗಿ ಕೆಳಗಿರುವ ಸಮುದಾಯಗಳನ್ನು ಮೇಲೆತ್ತುವ ಸಂಗತಿ ಇದು. ಇಲ್ಲಿ ಆರ್ಥಿಕವಾಗಿ, ಸಾಮಾಜಿಕವಾಗಿ ಕೆಳಗಿರುವ ಸಮುದಾಯಗಳು ಸಾವಿರಾರು ವರ್ಷಗಳಿಂದ ಆ ಸ್ತರದಲ್ಲಿಯೇ ಇರುವ ಸಮುದಾಯಗಳಾಗಿವೆ. ಇದು ಚರಿತ್ರೆ, ವರ್ತಮಾನದಲ್ಲಿ ಇವುಗಳು ಮೇಲ್ವರ್ಗಗಳಿಗೆ ಸಾಮಾಜಿಕವಾಗಿ, ಆರ್ಥಿಕವಾಗಿ ಸಮನಾಗುವವರೆಗೂ ಮೀಸಲಾತಿಯನ್ನು ಶಿಕ್ಷಣ, ಉದ್ಯೋಗ, ಶಾಸಕಾಂಗ ಮುಂತಾದ ಕ್ಷೇತ್ರಗಳಲ್ಲಿ ಕೊಡಲಾಗಿದೆ. ಅವಕಾಶವಂಚಿತರಿಗೆ ಅವರ ಪಾಲನ್ನು ಕೊಡುವುದು ಇಲ್ಲಿಯ ಧ್ಯೇಯವಾಗಿದೆ. ಅವಕಾಶವಂಚಿತರ ಪಾಲಿನ ಸ್ಥಾನಗಳಲ್ಲಿ ಸಹ ಅನ್ಯರು ಇರುವುದನ್ನು ಮತ್ತು ಇವರು ತಮ್ಮ ಸಾಮಾಜಿಕ ಮತ್ತು ಆರ್ಥಿಕ ಬಲದಿಂದ ಇವರ ಸ್ಥಾನಗಳನ್ನು ಮತ್ತೆ ಮತ್ತೆ ಆಕ್ರಮಿಸುವುದನ್ನು ತಪ್ಪಿಸಲು ಮಾತ್ರ ಮೀಸಲಾತಿಯನ್ನು ಕಲ್ಪಿಸಲಾಗಿರುವುದು. ಇದರ ಪರಿಣಾಮವಾಗಿಯೇ ಶೇ. ೧೮ ಸ್ಥಾನಗಳು ಶಿಕ್ಷಣ, ಉದ್ಯೋಗ, ರಾಜಕೀಯ ಮುಂತಾದ ವಲಯಗಳಲ್ಲಿ ದಲಿತರಿಗೆ ಸಿಕ್ಕಿರುವುದು. ಈ ಮೀಸಲಾತಿಯ ಕಲ್ಪನೆ ಇಲ್ಲದೇ ಇದ್ದಿದ್ದರೆ ಇವರ ಸ್ಥಾನಗಳಲ್ಲಿ ಯಾರು ಇರುತ್ತಿದ್ದರು ಎಂಬುದನ್ನು ಸುಲಭವಾಗಿಯೇ ಊಹಿಸಬಹುದಾಗಿದೆ. ಇದನ್ನು ತಪ್ಪಿಸಲು ಮತ್ತು ದುರ್ಬಲ ವರ್ಗಗಳ ಜನರ ಪಾಲು ದುರ್ಬಲ ವರ್ಗಗಳಿಗೇ ಸಿಗಬೇಕು ಎಂಬ ಹಿನ್ನೆಲೆಯಲ್ಲಿ ಪ್ರಸ್ತುತ ಮೀಸಲಾತಿಯನ್ನು ಸಂವಿಧಾನದ ಬಲದಿಂದ ಸಹ ಕಲ್ಪಿಸಲಾಗಿದೆ. ಇದು ಕ್ರಮೇಣ ಹಿಂದುಳಿದ ವರ್ಗಗಳಿಗೆ, ಧಾರ್ಮಿಕ ಅಲ್ಪಸಂಖ್ಯಾತರಿಗೆ, ಮಹಿಳೆಯರಿಗೆ ಸಹ ಕಲ್ಪಿಸಲಾಗಿದೆ. ಕರ್ನಾಟಕದಲ್ಲಿ ಹಾವನೂರು ವರದಿಯ ಅನುಷ್ಠಾನ, ರಾಷ್ಟ್ರ ಮಟ್ಟದಲ್ಲಿ ಮಂಡಲ್ ವರದಿಯ ಅನುಷ್ಠಾನ ಈ ಕೆಲಸಗಳನ್ನು ಮಾಡಿವೆ. ಇದು ಮೀಸಲಾತಿಯ ಕಲ್ಪನೆ ಮತ್ತು ವರ್ತಮಾನದ ವಾಸ್ತವ.

ಆದರೆ ಸಾಮಾಜಿಕ ಮೂಲಭೂತವಾದಿಗಳ ದೃಷ್ಟಿಯಲ್ಲಿ ಮೀಸಲಾತಿ ಎಂದರೆ ಅದು ದಲಿತರಿಗೆ ಮಾತ್ರ ಎಂಬ ಅಪಕಲ್ಪನೆಯಿದೆ. ಇದನ್ನು ನಿವಾರಿಸುವುದು ಹೇಗೆ? ಹಾಗಾಗಿ ಮುಸಲ್ಮಾನ ಮುಂತಾದ ಅನ್ಯಧರ್ಮೀಯರ ಎದುರಿನಲ್ಲಿ 'ಹಿಂದೂ' ಎಂಬ ಚೌಕಟ್ಟಿನಲ್ಲಿ ಒಂದಾಗಿ ಗುರುತಿಸಿಕೊಳ್ಳುವ ಹಿಂದೂಗಳು ಮೀಸಲಾತಿಯ ಹೆಸರಿನಲ್ಲಿ ದಲಿತರ ಬಗೆಗೆ ಅಸಹಿಷ್ಣುತೆಯನ್ನು ಬೆಳೆಸಿಕೊಂಡಿದ್ದಾರೆ. ಇದು ಬಹುತೇಕ ಹಿಂದೂಗಳ ಕತೆ. ಇದು ಇತ್ತೀಚೆಗೆ ದಲಿತರ ಬಡ್ತಿ ಮೀಸಲಾತಿ ವಿಚಾರದಲ್ಲಿ ಸ್ಫೋಟವಾಗಿದೆ.

ದಲಿತರ ಬಡ್ತಿ ಮೀಸಲಾತಿ ಶೇ.೧೮ರ ಒಳಗಿನದು ಮಾತ್ರ. ಅವರ ಮೀಸಲಾತಿಯ ಚೌಕಟ್ಟಿನಲ್ಲಿಯೇ ಅವರಿಗೆ ನೇಮಕಾತಿಯಲ್ಲಿ ಮೀಸಲಾತಿ ಇರುವಂತೆ ಅವರ ಬಡ್ತಿ ವಿಚಾರದಲ್ಲಿಯೂ ಮೀಸಲಾತಿ ದೊರೆತರೆ ಅನ್ಯರಿಗೇನು ತೊಂದರೆ? ಅನ್ಯರ ಪಾಲಿಗೆ ಮೀಸಲಾತಿ ಪ್ರಮಾಣದ ಚೌಕಟ್ಟಿಗೆ ಏನೂ ಪ್ರವೇಶವಾಗಿಲ್ಲವಲ್ಲ. ಅವರವರ ಪಾಲಿನಲ್ಲಿ ಅವರು ಉನ್ನತ ಸ್ಥಾನಕ್ಕೆ ಹೋಗಬಹುದು. ಸಾವಿರಾರು ವರ್ಷಗಳಿಂದ ಇತರರ ಪಾಲಿನ ಸ್ಥಾನಗಳಲ್ಲಿಯೇ ಅನ್ಯರು ಕುಳಿತಿದ್ದನ್ನು ಹಾಗೂ ಇಂದಿಗೂ ಇವರ ಸ್ಥಾನಗಳಲ್ಲಿ ಅವರೇ ಮೇಲ್ದರ್ಜೆಗಳಲ್ಲಿ ಇರಬೇಕೆಂದು ಬಯಸುವುದು ಯಾವ ನ್ಯಾಯ? ಅವರ ಪಾಲಿನ ಸ್ಥಾನಗಳಲ್ಲಿ ಅವರು ಮೇಲಾದರೂ ಇರಲಿ, ಕೆಳಗಾದರೂ ಇರಲಿ, ತಮ್ಮ ಮೀಸಲು ಜಾಗಗಳಿಗೆ ಅವರು ಬಂದಿಲ್ಲವಲ್ಲ. ಇದನ್ನು ಮರೆಯಬಾರದು. ಹಾಗಾಗಿ ಮೀಸಲಾತಿ ಎಂಬ ಕಲ್ಪನೆಯನ್ನು ಅಕ್ಷರಶಃ ಸಾಮಾಜಿಕ ನ್ಯಾಯ ಎಂಬುದನ್ನು ಪರಿಭಾವಿಸಿಕೊಂಡಾಗ ಸಾವಿರಾರು ವರ್ಷಗಳಿಂದ ಮಡುಗಟ್ಟಿಕೊಂಡಿರುವ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯನ್ನು ಸಮಾನತೆಯ ವ್ಯವಸ್ಥೆಗೆ ಸ್ಥಿತ್ಯಂತರಗೊಳಿಸುವುದು ಸಾಧ್ಯವಾಗುತ್ತದೆ. ಇದಕ್ಕಾಗಿ ಎಲ್ಲಾ ಶ್ರೇಣಿಗಳ ಜನ ತಿಳುವಳಿಕೆಯನ್ನು ಪಡೆಯಬೇಕು ಮತ್ತು ಸಮಸಮಾಜದ ನಿರ್ಮಾಣದ ಬಗೆಗೆ ಬದ್ಧತೆಯನ್ನು ಕ್ರಿಯಾತ್ಮಕವಾಗಿ ಪ್ರಕಟಿಸಬೇಕು. ಇದು ರಾಷ್ಟ್ರದ ಶಿಕ್ಷಣ, ಉದ್ಯೋಗ, ಉದ್ಯಮ, ರಾಜಕಾರಣ ಮುಂತಾದ ಎಲ್ಲಾ ಕ್ಷೇತ್ರಗಳಲ್ಲಿ ಅನುಷ್ಠಾನವಾದಾಗ ಮಾತ್ರ ಸಮಾನತೆಯ ಭಾರತವು ಸಂವಿಧಾನದ ಆಶಯದಂತೆ ಅಸ್ತಿತ್ವಕ್ಕೆ ಬರುವುದು ಸಾಧ್ಯವಾಗುತ್ತದೆ. ಅಲ್ಲಿಯವರೆಗೂ ಎಲ್ಲಾ ವರ್ಗಗಳ ಜನರಿಗೆ ಸಾಮಾಜಿಕ ನ್ಯಾಯದ ಬಗೆಗೆ ಅರಿವು, ಸಹಿಷ್ಣುತೆ, ಬದ್ಧತೆ, ಕ್ರಿಯಾತ್ಮಕತೆಗಳು ಬೇಕು.

**ಉಪಜಾತಿ ರಾಜಕಾರಣ :** ಭಾರತದಲ್ಲಿ ಇತ್ತೀಚಿನ ದಶಕಗಳಲ್ಲಿ ಉಪಜಾತಿ ರಾಜಕಾರಣ ತಲೆಯೆತ್ತಿದೆ. ಒಂದು ಸಾಮಾಜಿಕ ಪ್ರವರ್ಗದಲ್ಲಿ ಗುರುತಿಸಿಕೊಂಡಿರುವ ಜಾತಿ–ಜಾತಿಗಳ ನಡುವೆ ವೈಷಮ್ಯ ಅಲ್ಲಲ್ಲಿ ಮೂಡುತ್ತಿದೆ. ಒಂದು ಸಮುದಾಯವು ನ್ಯಾಯವಾಗಿ ಪಡೆಯಬೇಕಿದ್ದ ಪಾಲಿನ ಒಂದಷ್ಟು ಅಂಶವನ್ನು ಅನ್ಯ ಸಮುದಾಯವು ಪಡೆದಿದೆ ಎಂಬ ನಿಲುವಿನಲ್ಲಿ ಈ ವೈಷಮ್ಯ ಮೂಡಿದೆ. ಉದ್ಯೋಗ, ರಾಜಕಾರಣ – ಈ ಎರಡೂ ಕ್ಷೇತ್ರಗಳಲ್ಲಿ ಪ್ರಧಾನವಾಗಿ ಮೀಸಲಾತಿಯ ಹೆಸರಿನಲ್ಲಿ ಪಡೆದ ಸೌಲಭ್ಯದ ಹಿನ್ನೆಲೆಯಲ್ಲಿ ಈ ವೈಷಮ್ಯವಿದೆ. ಉದಾಹರಣೆಗೆ, ಶೇ. ೧೫ ಮೀಸಲಾತಿಯ ಒಳಗೆ ಎಡಗೈ ಸಮುದಾಯಗಳ ಪಾಲಿನ ಒಂದಷ್ಟನ್ನು ಬಲಗೈ ಸಮುದಾಯಗಳು ಪಡೆದಿವೆ ಎಂಬ ಭಾವನೆ ಇಲ್ಲಿದೆ. ಆದರೆ ಈವರೆಗೆ ಇಲ್ಲಿಯ ಒಳಸಮುದಾಯಗಳಿಗೆ ಒಳಮೀಸಲಾತಿ ಪ್ರಮಾಣ ನಿಗದಿಯಾಗಿಲ್ಲ. ಹಾಗಾಗಿ ಹಂಚಿಕೆ ವೈಪರೀತ್ಯವಾಗಿರ ಬಹುದು. ಇದರ ನಿವಾರಣೆಗಾಗಿ ಇಂದು ವಿಶೇಷವಾಗಿ ಎಡಗೈ ಸಮುದಾಯಗಳು ಧ್ವನಿ ಎತ್ತಿವೆ. ಈ ದಿಸೆಯಲ್ಲಿ ಹೊರಬಂದಿರುವ ಎ. ಜೆ. ಸದಾಶಿವ ಆಯೋಗದ ವರದಿ

ಮತ್ತು ಅದರ ಶಿಫಾರಸ್ಸುಗಳನ್ನು ಜಾರಿಮಾಡಬೇಕೆಂಬ ಕೂಗು ಎದ್ದಿದೆ. ಇದು ನ್ಯಾಯಯುತವಾದುದು ಸಹ ಹೌದು. ಆದರೆ ಅದೇ ಸಂದರ್ಭದಲ್ಲಿ ದಲಿತರಿಗೆ ಮೀಸಲಾದ ಶೇ. ೧೮, ಅನ್ಯರಿಗೆ ಮೀಸಲಾದ ಶೇ. ೩೨ – ಈ ಪ್ರಮಾಣ ಒಟ್ಟು ಶೇ. ೫೦ರಷ್ಟಿದೆ. ಇವುಗಳ ಪ್ರಮಾಣ ಒಟ್ಟು ಶೇ. ೭೫ ಆದರೆ ಸಮಸ್ಯೆಯೇನು? ಇದರಿಂದ ಸಾಮಾಜಿಕ ನ್ಯಾಯದ ಅನುಷ್ಠಾನ ಇನ್ನಷ್ಟು ವ್ಯಾಪಕವಾಗಿ ಆಗುತ್ತದೆಯಲ್ಲವೇ? ಜನಾಂಗವಾರು ಪ್ರಾತಿನಿಧ್ಯ ಇದರಿಂದ ಇನ್ನಷ್ಟು ಹೆಚ್ಚಾಗುತ್ತದೆಯಲ್ಲವೇ? ಈ ನಿಟ್ಟಿನಲ್ಲಿ ಶೇ. ೭೦ರಷ್ಟು ಮೀಸಲಾತಿ ಜಾರಿಗೆ ತಂದಿರುವ ರಾಜ್ಯಗಳು ನಮ್ಮೊಂದಿಗೆ ಇವೆಯಲ್ಲವೇ? ಈ ನಿಟ್ಟಿನಲ್ಲಿ ಭಾರತದ ಸಂಸತ್ತು ಹೆಜ್ಜೆಯನ್ನಿಟ್ಟು ಮೀಸಲಾತಿಯ ಪ್ರಮಾಣವನ್ನು ಹೆಚ್ಚಿಸಿದರೆ ಸಾಮಾಜಿಕ ನ್ಯಾಯದ ಅನುಷ್ಠಾನ ವ್ಯಾಪಕವಾಗಿ ಆಗುವುದಲ್ಲದೆ ಇಂದು ಉದ್ಭವಿಸಿರುವ ಉಪಜಾತಿ ರಾಜಕಾರಣದ ವೈಷಮ್ಯವು ಸಹ ನಿವಾರಣೆಯಾಗುವುದು ಸಾಧ್ಯವಿದೆ. ಇಲ್ಲಿ ರಾಜಕೀಯ ಇಚ್ಛಾಶಕ್ತಿ ಮತ್ತು ಕ್ರಿಯೆ ಅಗತ್ಯ. ಮಂತ್ರಕ್ಕೆ ಮಾವು ಉದುರುವುದಿಲ್ಲ. ಬೋಧನೆಯಿಂದಷ್ಟೇ ಸೌಹಾರ್ದತೆ ಮೂಡುವುದಿಲ್ಲ. ಇದರ ಅರಿವು ಮತ್ತು ಕ್ರಿಯೆ ಇಂದಿನ ವರ್ತಮಾನಕ್ಕೆ ಅಪೇಕ್ಷಣೀಯ.

**ಜಾತಿಗಳ ಧ್ರುವೀಕರಣ :** ಇತ್ತೀಚಿನ ದಶಕಗಳಲ್ಲಿ ಜಾತಿಗಳ ಧ್ರುವೀಕರಣ ಹೆಚ್ಚಾಗುತ್ತಿದೆ. ಜಾತ್ಯತೀತ ವ್ಯವಸ್ಥೆ ಇರಬೇಕಾದ ಜಾಗದಲ್ಲಿ ಈ ಪ್ರಕ್ರಿಯೆ ಆಳದಲ್ಲಿ ಇರುಸು ಮುರುಸನ್ನು ಉಂಟುಮಾಡುತ್ತದೆ. ಸಾಮಾಜಿಕವಾಗಿ, ರಾಜಕೀಯವಾಗಿ, ವಿವಿಧ ಸಮುದಾಯಗಳಿಗೆ ನ್ಯಾಯವಾಗಿ ಸಲ್ಲಿಸಬೇಕಾದುದು ಸಂದ ನಂತರ ಈ ಪ್ರಕ್ರಿಯೆ ನಿಲ್ಲಬಹುದೆಂದು ಭಾವಿಸಬಹುದಾಗಿದೆ. ಈ ನೆಲೆಯಲ್ಲಿ ಕೆಳಜಾತಿಗಳು ಮಾತ್ರ ತಮ್ಮ ಹಕ್ಕುಗಳನ್ನು ಗಳಿಸಿಕೊಳ್ಳಲು ಸಂಘಟಿತ ಯತ್ನದ ಭಾಗವಾಗಿ ಸಂಘಟನೆಗಳನ್ನು ಮಾಡಿಕೊಳ್ಳಬಹುದು. ಆದರೆ ತಮ್ಮ ಪಾಲು ಅನೇಕ ಶತಮಾನಗಳ ಹಿಂದೆಯೇ ದಕ್ಕಿರುವ ಮೇಲ್‌ಜಾತಿಗಳು ಹೀಗೆ ಸಂಘಟಿತವಾಗುವುದು ಅನಗತ್ಯವೆಂದೇ ಭಾವಿಸುತ್ತೇನೆ. ಹಾಗೊಮ್ಮೆ ಸಂಘಟಿತವಾದಲ್ಲಿ ತಮ್ಮಲ್ಲಿ ಶೇಖರವಾಗಿರುವ ದ್ರವ್ಯವನ್ನು ತಮ್ಮ ಸಮುದಾಯದ ಬಡವರಿಗೆ ವಿತರಣೆ ಮಾಡಿ ಕೊಳ್ಳುವ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು. ಅಲ್ಲದೆ, ಕರ್ನಾಟಕ ಸರ್ಕಾರವು ಇತ್ತೀಚೆಗೆ ನಡೆಸಿದ ಜನಗಣತಿಯ ಆಧಾರದಲ್ಲಿ ತಮ್ಮ ಸಮುದಾಯದ ಪಾಲಿಗೆ ತಮ್ಮ ಜನಸಂಖ್ಯೆಗೆ ಅನುಗುಣವಾಗಿ ಶೈಕ್ಷಣಿಕ, ಔದ್ಯೋಗಿಕ, ಔದ್ಯಮಿಕ, ಆರ್ಥಿಕ, ಸಾಮಾಜಿಕ ಪಾಲು ದಕ್ಕಿದೆಯೇ, ಇಲ್ಲವೇ ಇನ್ನೂ ಹೆಚ್ಚಿನದು ದಕ್ಕಿದೆಯೇ? – ಎಂಬ ಪ್ರಶ್ನೆಯನ್ನು ಆತ್ಮಾವಲೋಕನದ ಸ್ತರದಲ್ಲಿ ಹಾಕಿಕೊಂಡು ಅಸಂಗ್ರಹ ತತ್ವದ ಅಡಿಯಲ್ಲಿ ಹೆಚ್ಚಾದ ಭಾಗವನ್ನು ಇತರೆ ಸಮುದಾಯಗಳಿಗೆ ಸಾಮಾಜಿಕವಾಗಿ ಹಂಚುವ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳಬೇಕು. ಇಲ್ಲವಾದಲ್ಲಿ ರೂಪಿಸಿ ಜಾತಿ ಮೂಲದ ಈ ಸಂಘಟನೆಗಳು ಜಾತೀಯತೆಯನ್ನು ಪೋಷಿಸುತ್ತವೆಯೇ ವಿನಾ ಸಮಾಜವಾದಿ ನೆಲೆಯಲ್ಲಿ ಪ್ರಜಾಸತ್ತೆಯನ್ನು, ಸಮತೆಯನ್ನು, ಜಾತ್ಯತೀತತೆಯನ್ನು ಪೋಷಿಸುವುದಿಲ್ಲ.

**ಬಂಡವಾಳಶಾಹಿ ರಾಜಕಾರಣ :** ಸಾಮಾಜಿಕ ಸೌಹಾರ್ದತೆಗೆ ಮೇಲ್ಕಾಣಿಸಿದ ಹಿಂದೂ ಕೋಮುವಾದ, ಸಾಮಾಜಿಕ ನ್ಯಾಯದ ಬಗೆಗಿನ ಅಪಕಲ್ಪನೆ, ಉಪಜಾತಿ ರಾಜಕಾರಣ, ಜಾತಿಗಳ ಧ್ರುವೀಕರಣ ಮುಂತಾದವು ಪ್ರಮುಖ ಸವಾಲುಗಳಾಗಿ ಕಂಡರೆ ಬಂಡವಾಳಶಾಹಿ ರಾಜಕಾರಣ, ವಿದ್ಯುನ್ಮಾನ ಮಾಧ್ಯಮಗಳ ಟಿ.ಆರ್.ಪಿ. ಮೂಲದ ಹಾವಳಿ ಅವುಗಳಿಗೆ ಪೂರಕವಾದ ಸವಾಲುಗಳಾಗಿ ಕಾಣುತ್ತವೆ.

ಇವತ್ತಿನ ರಾಜಕಾರಣ ಬಂಡವಾಳಶಾಹಿ ರಾಜಕಾರಣವಾಗಿದೆ. ಇಲ್ಲಿಯ ಪ್ರತೀ ಪಕ್ಷಗಳಿಂದ ಶಾಸನ ಸಭೆಗೆ ಹೋಗಬಯಸುವ ಉಮೇದುದಾರರು ತಮ್ಮ ಈ ಪ್ರವೇಶಕ್ಕೆ ಮೊದಲಿಗೆ ಬಂಡವಾಳವನ್ನು ಹೊಂಚುತ್ತಾರೆ. ಆನಂತರ ಅದನ್ನು ಚುನಾವಣೆಗೆ ಹೂಡುತ್ತಾರೆ. ಇಲ್ಲಿ ಸೋತವನು ಸತ್ತ. ಇನ್ನು ಗೆದ್ದವನು ಹೂಡಿದ ಅಸಲನ್ನು ಲಾಭ ಸಮೇತ ಪಡೆಯುವುದು ಹೇಗೆಂಬ ವಾಮಮಾರ್ಗಗಳತ್ತ ಯೋಚಿಸಿ, ಕ್ರಿಯಾಶೀಲನಾಗುತ್ತಾನೆ. ಕತ್ತಿಯಂಚಿನ ಈ ದಾರಿಯಲ್ಲಿ ಕೆಲವೊಮ್ಮೆ ಯಶಸ್ಸನ್ನು ಪಡೆಯಬಹುದು. ಆದರೆ ಆತ್ಮಸಾಕ್ಷಿಯೆಂಬ 'ಅದೇ ಕಣ್ಣು' ಎಂಬುದರ ಇದಿರಿನಲ್ಲಿ ವ್ಯಕ್ತಿತ್ವದ ಒಳಗೇನೆ ಆಂತರಿಕ ಸಂಘರ್ಷ ಏರ್ಪಟ್ಟು 'ನಾಳೆ ಬಪ್ಪ ಸಕ್ಕರೆ ಇಂದೇ ಬಪ್ಪುದು' ಎಂಬ ದುಃಸ್ಥಿತಿ ತಪ್ಪದೇ ಒದಗಿಬಿಡುತ್ತದೆ. ಇದರೊಂದಿಗೆ ಎಚ್ಚರ ತಪ್ಪಿದ ವ್ಯಕ್ತಿತ್ವವು ಕೃಷ್ಣನ ಲಂಚ ಪಡೆಯುವಾಗಲೋ ಆದಾಯ ತೆರಿಗೆ ಅಧಿಕಾರಿಗಳ ಕಾಕದೃಷ್ಟಿಗೆ ತಾಗಿಯೋ ಕೃಷ್ಣನ ಜನ್ಮಸ್ಥಾನವನ್ನು ಸಹ ಇವರು ಸೇರಿಬಿಡಬಹುದು. ಒಟ್ಟಾರೆ, ಇಲ್ಲಿ ಜನಕಲ್ಯಾಣ ಎಂಬುದು ಆನುಷಂಗಿಕ ಮಾತ್ರ. ಪ್ರಾಥಮಿಕ ಎಂಬುದು ಸ್ವಕಲ್ಯಾಣ ಮಾತ್ರ. ಹೀಗಿರುವಾಗ ಸಮಾಜವಾಗಲೀ ಸಾಮಾಜಿಕ ಸೌಹಾರ್ದತೆಯಾಗಲೀ ಪ್ರಮುಖ ಕಾಳಜಿಯಾಗುವುದು ಸಾಧ್ಯವಿಲ್ಲ. ಇಲ್ಲಿ ಅಧಿಕಾರ ಎಂಬುದು ಸಾಮಾಜಿಕ ಸೌಹಾರ್ದತೆಯನ್ನು ಕದಡುವ ಮತೀಯ ಪಕ್ಷಗಳಿಂದ ದೊರೆಯುತ್ತದೆ ಎಂದಾಗ ಯಾವುದೇ ಜಾತಿಯ ವರ್ಗದ ಲಿಂಗದ ಜನ ಅದಕ್ಕೆ ಹಾತೊರೆಯುವ ಸ್ಥಿತಿ ಇದೆ. ಹಾಗಾಗಿಯೇ ಇಂದಿನ ಮತೀಯವಾದಿ ಸಂಘಟನೆ, ರಾಜಕೀಯ ಪಕ್ಷಗಳಲ್ಲಿ ಶೋಷಿತ ಸಮುದಾಯಗಳ ಜನ ಸಹ ಅಧಿಕವಾಗಿರುವುದು. ತಾವು ಹೂಡುವ ಬಾಣ ಅಂತಿಮವಾಗಿ ಯಾರನ್ನು ತಾಕುತ್ತದೆ ಎಂಬುದರ ಅರಿವಿರದ ಜನ ಇಲ್ಲಿ ಹೆಚ್ಚಾಗಿ ಕಾಣುತ್ತಿದ್ದಾರೆ. ಹಾಗಾಗಿ ಪ್ರಜಾಸತ್ತೆಯ ಉಳಿವಿಗೆ, ಕಲ್ಯಾಣ ನಾಡಿನ ಸಾಕಾರಕ್ಕೆ, ಸೌಹಾರ್ದ ಸಮಾಜದ ಬಾಳುವೆಗೆ ಸಮಾಜವಾದೀ ರಾಜಕಾರಣ ಬೇಕು; ಬಂಡವಾಳಶಾಹಿ ರಾಜಕಾರಣ ಅಲ್ಲ.

**ವಿದ್ಯುನ್ಮಾನ ಮಾಧ್ಯಮಗಳ ಟಿ.ಆರ್.ಪಿ. ಮೂಲದ ಕಾರ್ಯಕ್ರಮಗಳು :** "ಸೂರ್ಯನತ್ತಲೇ ಸೂರ್ಯಕಾಂತಿ ಮೊಗವೆತ್ತಿ ತಿರುಗುವಂತೆ" ಎಂಬ ಬಿ. ಆರ್. ಲಕ್ಷ್ಮಣರಾವ್ ಅವರ ಕವಿತೆಯ ಒಂದು ಸಾಲಿನಂತೆ ವಿದ್ಯುನ್ಮಾನ ಮಾಧ್ಯಮಗಳು ಟಿ.ಆರ್.ಪಿ. ಕೊಡುವ ಕಾರ್ಯಕ್ರಮಗಳತ್ತ ಮಾತ್ರ ತಮ್ಮ ಚಿತ್ತವನ್ನು ಹರಿಸುತ್ತವೆ ಮತ್ತು ತಮ್ಮ ಕ್ಯಾಮರಾಗಳನ್ನು ತಿರುಗಿಸುತ್ತವೆ. ಉಳಿದಂತೆ ಸಮಾಜ, ಸೌಹಾರ್ದತೆ, ಸಂವಿಧಾನ, ಜಾತ್ಯತೀತತೆ, ಪ್ರಜಾಸತ್ತೆ ಇತ್ಯಾದಿಗಳೆಲ್ಲವೂ ಇವುಗಳಿಗೆ ನಗಣ್ಯ. ಈ ನಿಟ್ಟಿನಲ್ಲಿ ಹಲವು ಚಾನೆಲ್‌ಗಳ ತೀವ್ರ ಮತ್ತು ಅನೈತಿಕ ಸ್ಪರ್ಧೆಯಲ್ಲಿ ಈ ಪದಗಳ ಅಕ್ಷರಗಳನ್ನು ತಿಳಿಯುವ ವ್ಯವಧಾನವನ್ನು ಸಹ ಇವುಗಳು ಉಳಿಸಿಕೊಂಡಿಲ್ಲ. ಡಿ.ಡಿ.೧ ಮತ್ತು ಇತರೆ ಕೆಲವು ಚಾನೆಲ್‌ಗಳು ಮಾತ್ರ ಇದಕ್ಕೆ ಹೊರತಾಗಿವೆ. ಉಳಿದಂತೆ ಬಹುತೇಕ ಎಲ್ಲಾ ಚಾನೆಲ್‌ಗಳು ಇಲ್ಲಿ ನಾಗಾಲೋಟದಿಂದ ಓಡುತ್ತಿವೆ. ಎಡವಿಬಿದ್ದರೂ ಕಾಲೊರೆಸಿಕೊಳ್ಳುವ ವ್ಯವಧಾನವನ್ನು ತೋರದೇ ಇವು ಓಡುತ್ತಿವೆ.

ಹೀಗೆ ಖಾಸಗಿ ವಿದ್ಯುನ್ಮಾನ ದೂರದರ್ಶನ ಚಾನೆಲ್‌ಗಳು ಜನರ ನಡುವೆ ಪ್ರಭಾವೀ ಪಾತ್ರವನ್ನು ವಹಿಸುತ್ತಿವೆ. ಜನಸಾಮಾನ್ಯರನ್ನು ಪ್ರಭಾವಿಸುವ, ರೂಪಿಸುವ ಕ್ರಿಯೆಯಲ್ಲಿ ಇಂದು ಸಾಹಿತ್ಯ, ನಾಟಕ ಮುಂತಾದ ಪ್ರಕಾರಗಳಿಗಿಂತ ಹೆಚ್ಚು ಪ್ರಭಾವೀ ಪಾತ್ರವನ್ನು ವಹಿಸುತ್ತಿರುವುದು ಈ ಮಾಧ್ಯಮಗಳೇ. ಆದರೆ ಪ್ರಸಾರ ಭಾರತಿ ರೂಪಿಸಿದ ನೀತಿ ಸರ್ಕಾರಿ ದೂರದರ್ಶನ ಚಾನೆಲ್‌ಗಳ ಬಗ್ಗೆ ಹೊರತು ಖಾಸಗಿ ಚಾನೆಲ್‌ಗಳ ಬಗ್ಗೆ ಇದ್ದಂತೆ ಕಾಣುವುದಿಲ್ಲ. ಹಾಗಾಗಿಯೇ ದಿನವಿಡೀ ಏಕಮುಖವಾದ ಕಾರ್ಯಕ್ರಮಗಳು ಕಾಣುತ್ತಿರುವುದು. ಧಾರಾವಾಹಿ, ಮೌಢ್ಯ ಬಿತ್ತುವ ಸಂದರ್ಶನ, ಪ್ರವಚನ, ಸಿನಿಮಾ ಕಾರ್ಯಕ್ರಮಗಳೇ ಇಲ್ಲಿ ಸಿಂಹಪಾಲನ್ನು ಪಡೆದಿವೆ. ಸಿಂಹದ ಪಾಲಿನ ಆಚೆಗೆ ಇನ್ನೊಂದು ಪಾಲೂ ಇಲ್ಲ. ಇಂತಹ ಚಾನೆಲ್‌ಗಳು ಪ್ರತೀ ಮನೆಯನ್ನು ಪ್ರವೇಶಿಸಿ ಇತರೆ ಎಲ್ಲ ಮಾಧ್ಯಮಗಳಿಗಿಂತ ಹೆಚ್ಚಿನ ಪರಿಣಾಮವನ್ನು ಉಂಟುಮಾಡುತ್ತಿರುವಾಗ ಸಾಮಾಜಿಕ ಸೌಹಾರ್ದತೆಯ ಕಡೆಗೆ ಸಮಾಜ ತಿರುಗಬೇಕು ಎಂದು ಅದರಾಚೆಗಿನ ಜಾಗದಲ್ಲಿ ಹೇಳುತ್ತಿದ್ದರೆ ಏನು ಬಂತು? ಹಾಗಾಗಿ ಸಮಾಜದ ಸೌಹಾರ್ದತೆಗೆ ಇಂದು ಅವಶ್ಯವಾಗಿ ಬೇಕಾದ ಕಾರ್ಯಕ್ರಮಗಳು ಇಲ್ಲಿ ಪ್ರಸಾರವಾಗಬೇಕಾದರೆ ಇವುಗಳಿಗೆ ಸಂಸತ್ತು ರೂಪಿಸಿದ ಸಾಂಸ್ಕೃತಿಕ ನೀತಿ ಎಂಬ ಲಂಗುಲಗಾಮು ಬೇಕು. ಇಲ್ಲವಾದಲ್ಲಿ ಈ ಮಾಧ್ಯಮ ಬೀದಿ ಬಸವ ಆಗಿ ಮಾರ್ಪಾಟಾಗಿಬಿಡುವ ಸಾಧ್ಯತೆ ಇರುತ್ತದೆ. ಆ ಲಂಗುಲಗಾಮು ಇವುಗಳಿಗೆ ದಕ್ಕಿದಾಗ ಸಂವಿಧಾನವೇ ನೆಲಗಟ್ಟಾಗಿರುವ ಈ ದೇಶದಲ್ಲಿ ಸಂವಿಧಾನದ ಜಾತ್ಯತೀತತೆ, ವೈಚಾರಿಕತೆ, ವೈಜ್ಞಾನಿಕತೆ, ಪ್ರಜಾಸತ್ತೆ ಮುಂತಾದ ತತ್ವಗಳನ್ನು ತಿಳಿದು ಎಂತಹ ಕಾರ್ಯಕ್ರಮಗಳನ್ನು ಮನರಂಜನೆಯಷ್ಟೇ ಮುಖ್ಯವಾಗಿ ರೂಪಿಸಬೇಕು ಎಂಬುದನ್ನು ಇವು ಯೋಚಿಸುವಂತಾಗುತ್ತದೆ. ಅಲ್ಲಿಯವರೆಗೂ ಸಂವಿಧಾನದ ಆಶಯಗಳನ್ನು ಕನಿಷ್ಠ ಅಕ್ಷರಗಳ ಮಟ್ಟಿಗಾದರೂ ಇವು ಯೋಚಿಸಲು ಹೋಗುವುದಿಲ್ಲ.

ಒಟ್ಟಾರೆ, ಸಾಮಾಜಿಕ ಸೌಹಾರ್ದತೆಗೆ ಅಥವಾ ಸೌಹಾರ್ದ ಸಮಾಜಕ್ಕೆ ಹೀಗೆ ಹಲವು ಸವಾಲುಗಳು ಇಂದು ನಮ್ಮೆದುರಿಗಿವೆ. ಇವು ನಮ್ಮ ನಡುವೆ ಮನುಷ್ಯ ನಿರ್ಮಿತ. ಹಾಗಾಗಿ ಇವುಗಳ ನಿರ್ಮೂಲನೆ ನಮ್ಮಿಂದ ಸಾಧ್ಯ. ಈ ದಿಸೆಯಲ್ಲಿ ಚಿಂತನೆ ಮತ್ತು ಕ್ರಿಯೆಯು ಬದ್ಧತೆ ಅಥವಾ ಬದುಕಿನ ಭಾಗವಾಗಬೇಕು. ಅಲ್ಲಿ ಮೂಡುವ ವ್ಯಕ್ತಿ, ಸಂಘಟನೆ, ಪಕ್ಷ ಸಮಾಜಕ್ಕೆ ಬೆಳಕನ್ನು ಚೆಲ್ಲಬಲ್ಲದು. ಅಲ್ಲಿ ಸೌಹಾರ್ದ ಸಮಾಜ ಏಳ ಬಲ್ಲದು. ಈ ಸೌಹಾರ್ದತೆಯೇ ಅಭಿವೃದ್ಧಿಯಲ್ಲ. ಆದರೆ ಅಭಿವೃದ್ಧಿಗೆ ಬೇಕಾದ ಪ್ರಾಥಮಿಕ ವಾತಾವರಣ ಇದು. ಇದರ ನಿರ್ಮಾಣ ಇವತ್ತಿನ ಎಲ್ಲರ ಹೊಣೆಯಾಗಬೇಕಾಗಿದೆ.

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**
'ಅಕ್ಷರ', ನಂ. ೯೬೫, ೧ನೇ ಮುಖ್ಯರಸ್ತೆ, ಚೆನ್ನಣ್ಣ ಬಡಾವಣೆ, ಕಾವಲುಭೈರಸಂದ್ರ, ಬೆಂಗಳೂರು–೩೨




## ಹೆಣಮನೆಯ ಕಾವಲಿಗ




*ವಿಷ್ಣು ನಾಯ್ಕ*

**ಪುಟ: ೧೧೬ ಬೆಲೆ : ರೂ. ೧೫೦**

**ವಿಷ್ಣು ನಾಗಪ್ಪ ನಾಯ್ಕ**

**ಪ್ರಕಾಶನ,** ಅಂಬಾರಕೊಡ್ಲ

ಅಂಕೋಲ, ಉತ್ತರ ಕನ್ನಡ ಜಿ॥

*ಇದುವರೆಗೆ ಎಪ್ಪತ್ತಮೂರು ಕೃತಿಗಳನ್ನು ಪ್ರಕಟಿಸಿರುವ ಶ್ರೀವಿಷ್ಣು ನಾಯ್ಕ ಅವರ ಗ್ರಂಥ ರಾಶಿಯಲ್ಲಿ ಕವನ ಸಂಕಲನಗಳೇ ಹದಿನೆಂಟಿವೆ. ಅಂದರೆ ಅವರ ಬರವಣಿಗೆಯ ಮೊದಲ ಆದ್ಯತೆ ಕಾವ್ಯ ಕೃಷಿ. 'ಕಾವ್ಯ ಎಲ್ಲ ಅರ್ಥದಲ್ಲೂ ನನ್ನ ತಾಯಿ' ಎಂದು ಅವರೇ ಮುನ್ನುಡಿಯಲ್ಲಿ ಹೇಳಿದ್ದಾರೆ. ಅಂದರೆ ತಾಯ್ತನ, ದಯಾರ್ದ್ರ ಗುಣ ಅವರ ಎಲ್ಲ ಕವನಗಳ ಹಿಂದೆ ಸ್ಥಾಯಿಯಾಗಿ ಕೆಲಸ ಮಾಡುತ್ತಿದೆ. 'ಹೆಣಮನೆಯ ಕಾವಲಿಗ' ಎಂಬ ಹೆಸರೇ ವಿನೂತನವಾಗಿದೆ. ಅತ್ಯಂತ ನಿರ್ಲಕ್ಷ್ಯಕ್ಕೆ, ತಿರಸ್ಕಾರಕ್ಕೆ ಒಳಗಾದ ಈ ಕಾವಲಿಗ ಕವಿಯ ಕಣ್ಣಿಗೆ ಕಾಣುವ ಪರಿ ಹೀಗಿದೆ: "ಬೆತ್ತಲಾದರು ನಿನ್ನ ಕೋಣೆಯಲಿ ಮಡಿಮಂದಿ/ಬಗಿದುಕೊಂಡೆವೂ ಗುಳ್ಳೆ ನರಿ, ತೋಳ, ಚಿರತೆಗಳು/ಎಲ್ಲರಿಗೂ ತಾಯಾದೆ ಬಾಚೆತ್ತಿ ಹೊಲಸುಗಳ/ಹೇಸವಿಲ್ಲವೂ ತುಸುವೂ ಧನ್ಯಬಾಳು." ಇಂಥ ತಾಯ್ತನದ ಜೊತೆಗೇ 'ಅವ್ವ ನನ್ನೊಡವೆ' 'ಕವಿತಾ ನನ್ನವ್ವ' ಮುಂತಾದ ಕವಿತೆಗಳಲ್ಲಿ ಹೆಣ್ಣಿನ ಅವಶ್ಯಕತೆ ಮನುಜನ ಬಾಳಿನಲ್ಲಿ ಎಷ್ಟು ಅನಿವಾರ್ಯವಾಗಿದೆ ಎಂಬುದನ್ನು ಕಲಾತ್ಮಕವಾಗಿ ಕಟ್ಟಿಕೊಡುತ್ತಾರೆ. "ಜಗದಗಲ ತುಂಬಿರುವ / ನೋವಿನಲಿ ಪೆನ್ನದ್ದು / ಅರಳುವುದು ಅಕ್ಷರವು ಕವನವಾಗಿ / ನೋವು ಸಾಯುವವರೆಗೆ / ಕವನ ಸಾಯುವುದಿಲ್ಲ / ನಿಲ್ಲುವುದು ಸಾಂತ್ವನದ ಸಿಲುಬೆಯಾಗಿ / ಎಂಬ 'ಕವಿಗೆ ಕಿವಿ ಮಾತು' ಕವಿತೆಯ ಸಾಲುಗಳು ಈ ಕವಿಯ ಸಮಾಜಮುಖಿ ಚಿಂತನೆಗೆ ಸಾಕ್ಷಿಯೊದಗಿಸುತ್ತವೆ. ನೋವು–ಸಾವು, ದುಃಖ–ದೌರ್ಜನ್ಯ, ಅನ್ಯಾಯ – ಅಸಮಾನತೆಗಳ ಬಗೆಗೆ ಆಕ್ರೋಶ ರಹಿತವಾಗಿ ತಣ್ಣಗೆ ಪ್ರತಿಭಟಿಸಿರುವುದು ಈ ಸಂಕಲನದ ವೈಶಿಷ್ಟ್ಯ.*

## ನಮ್ಮ ಭೂಮಿಯ ಹಾಡು ಪಾಡು

*ಡಾ॥ ಎಂ. ವೆಂಕಟಸ್ವಾಮಿ*

**ಪುಟ: ೨೦೦** **ಬೆಲೆ : ರೂ. ೨೦೦**

**ಸಾಹಿತ್ಯ ಸುಗ್ಗಿ ಪ್ರಕಾಶನ,** ಬೆಂಗಳೂರು – ೫೬೦ ೦೭೨




*ನಾವು ವಾಸಿಸುತ್ತಿರುವ ಈ ಭೂಮಿ ಕಳೆದ ೪೬೫ ಕೋಟಿ ವರ್ಷಗಳ ಚರಿತ್ರೆಯಲ್ಲಿ ಅನೇಕ ತೊಂದರೆಗಳನ್ನು ಅನುಭವಿಸುತ್ತ ಎಲ್ಲವನ್ನು ನುಂಗಿಕೊಂಡು ಇಲ್ಲಿಯವರೆಗೆ ಬಂದು ನಿಂತಿರುವ ಏಳುಬೀಳಿನ ಸಾಹಸಯಾನವನ್ನು ಈ ಪುಸ್ತಕ ಒಳಗೊಂಡಿದೆ. ಐದು ದೀರ್ಘ ಲೇಖನಗಳ ಮೂಲಕ ವಿಶ್ವದ ಉಗಮದಿಂದ ತೊಡಗಿ ಇಡೀ ಭೂಮಿಯನ್ನೇ ಮಾಲಿನ್ಯದ ಮಡುವಾಗಿ ಮಾಡಿರುವ ದುರಂತದವರೆಗೆ ತಾರ್ಕಿಕ ಚಿಂತನೆಗಳಿವೆ. ನೈಸರ್ಗಿಕ ವಿಕೋಪಗಳ ಜೊತೆಗೆ ಮಾನವ ನಿರ್ಮಿತ ದುರಂತಗಳ ಕಡೆ ಪ್ರತಿ ಅಧ್ಯಾಯದಲ್ಲೂ ಒಳನೋಟಗಳಿವೆ. ಭೂಮಿ ೨೬ ಸಾವಿರ ವರ್ಷಗಳಿಗೆ ಒಮ್ಮೆ ಮರುಹುಟ್ಟು ಪಡೆಯುತ್ತದೆ ಅಥವಾ ಭೂಮಿಯ ಮೇಲೆ ಹೊಸಯುಗವೊಂದು ಪ್ರಾರಂಭವಾಗುತ್ತದೆ ಎನ್ನುವ ವಿಜ್ಞಾನಿಗಳ ಲೆಕ್ಕಾಚಾರವೇ ರೋಮಾಂಚನಕಾರಿಯಾದ ಕಲ್ಪನೆ. ಭೂಮಿಯೂ ಕಾಲಚಕ್ರದ ಪಯಣದಲ್ಲಿ ಸೂರ್ಯನ ಗುರುತ್ವಾಕರ್ಷಣೆ ಸೆಳೆತಕ್ಕೆ ಸಿಲುಕಿ ಒಂದು ದಿನ ಬೂದಿಯಾಗಿ ಹೋಗುತ್ತದೆ ಎಂಬ ವಿಚಾರವೂ ಆತಂಕಕಾರಿಯಾದ ಕಲ್ಪನೆ. ವಿಶ್ವ ಸೃಷ್ಟಿಯ ಪ್ರತಿಯೊಂದು ಅಂಶವೂ ಎಲ್ಲಿಂದ ಬಂದವೋ ಅಲ್ಲಿಗೆ ತಲುಪುವುದು ಸೃಷ್ಟಿಯ ನಿಯಮ. ಇಂಥ ಸುಂದರ ಭೂಮಿಯನ್ನು ಉಳಿಸಿಕೊಳ್ಳಬೇಕಾದುದು ಪ್ರತಿಯೊಬ್ಬ ಮಾನವ ಜೀವಿಯ ಕರ್ತವ್ಯ ಎಂಬುದನ್ನು ಲೇಖಕರು ತುಂಬಾ ಸೊಗಸಾಗಿ ಈ ಪುಸ್ತಕದಲ್ಲಿ ಕಟ್ಟಿಕೊಟ್ಟಿದ್ದಾರೆ.*




## ಬಣ್ಣದ ಬದುಕಿನ ಚಿನ್ನದ ದಿನಗಳು

*ಗಣೇಶ ಅಮೀನಗಡ*

**ಪುಟ : ೧೬೦** **ಬೆಲೆ : ರೂ. ೧೨೦**

**ಕಲಾವೈಭವ ಪ್ರಕಾಶನ,** *ಬೆಂಗಳೂರು – ೫೬೦ ೦೧೦*

*ಮೊದಲ ಮುದ್ರಣ ಪ್ರಕಟವಾದ ೨೦೦೨ನೇ ವರ್ಷದಲ್ಲೇ ಮತ್ತೆರಡು ಮುದ್ರಣಗಳನ್ನು ಕಂಡ ಈ ಪುಸ್ತಕ ೨೦೧೫, ೨೦೧೬, ೨೦೧೮ರಲ್ಲಿ ಮತ್ತೆ ಮೂರು ಮುದ್ರಣಗಳ ಭಾಗ್ಯವನ್ನು ಕಂಡಿದೆ. ಶತಾಯುಷಿ ಏಣಗಿ ಬಾಳಪ್ಪನವರ ರಂಗಾನುಭವಗಳ ಕಥನ ನಿರೂಪಣೆ ಇರುವ ಈ ಪುಸ್ತಕದಲ್ಲಿ ಕಂಪನಿ ನಾಟಕಗಳ ಏಳುಬೀಳುಗಳು, ಜನಾದರಣೆಯ ಪ್ರಸಂಗಗಳು, ಪ್ರಭುತ್ವದ ಕಿರುಕುಳಗಳು, ಒಂದೇ ಕಡೆ ನೆಲೆನಿಲ್ಲದ ಬವಣೆಗಳು ದಾಖಲಾಗಿ ಅಂದಿನ ಕಾಲದ ಜನಜೀವನದ ಚಿತ್ರ ಕಣ್ಮುಂದೆ ಬರುತ್ತದೆ. ತಮ್ಮ ಹನ್ನೆರಡನೇ ವಯಸ್ಸಿನಲ್ಲಿ ತಂದೆಯನ್ನೂ, ಒಡಹುಟ್ಟಿದವರನ್ನೂ ಕಳೆದುಕೊಂಡ ಬಾಳಪ್ಪ ತಾಯಿಯ ಜೊತೆ ಸೇರಿ ಕೂಲಿ ಆಳಿನ ಕೆಲಸವನ್ನೂ ಮಾಡಿದ್ದಿದೆ. "ಜನ್ಮಕೊಟ್ಟ ತಾಯಿ ಮಡಿಲಲ್ಲಿ ಜೋಗುಳ ಕೇಳುತ್ತ ಬೆಳೆದಿದ್ದೇನೆ, ರಂಗಮಾತೆಯ ಮಡಿಲಲ್ಲಿ ಹಾಡುತ್ತ, ಅಭಿನಯಿಸುತ್ತ ಬೆಳೆದಿದ್ದೇನೆ. ಕಷ್ಟಗಳನ್ನೇ ಜೀವನ ಸಂಗಾತಿಗಳನ್ನಾಗಿ ಆರಿಸಿಕೊಂಡಿದ್ದೇನೆ" ಎಂದು ವಿನಯದಿಂದ ಹೇಳುವ ಬಾಳಪ್ಪನವರಿಗೆ ಮುಂದೆ ಐಶ್ವರ್ಯವೂ ಲಭಿಸಿತು; ಆದರೆ ಗರ್ವ ಬರಲಿಲ್ಲ. ಕಲಾರಂಗದಲ್ಲೇ ಇದ್ದರೂ ಯಾವ ವ್ಯಸನಕ್ಕೂ ತುತ್ತಾಗಲಿಲ್ಲ. ಇಂಥ ಒಂದು ಸನ್ಮಾರ್ಗದಲ್ಲಿ ನಡೆಯಲು ಸದಾಕಾಲ ಪ್ರೇರಣೆ ನೀಡಿದ್ದು ತಾಯಿ ಸ್ಮರಣೆ ಹಾಗೂ ರಂಗದಕಡೆ ದಾರಿ ತೋರಿದ ಗುರು ಚಿಕ್ಕೋಡಿ ಶಿವಲಿಂಗಸ್ವಾಮಿ ಅವರ ಪ್ರೋತ್ಸಾಹ. ಇಂಥ ಅನೇಕ ಸುಖ–ದುಃಖಗಳ ಸಂಕಥನದ ಈ ಪುಸ್ತಕ ಸಂಗ್ರಹಯೋಗ್ಯವಾದುದಾಗಿದೆ.*

## ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿ ಬರಗೂರು

*ಡಾ॥ ಎ. ವಿ. ಲಕ್ಷ್ಮೀನಾರಾಯಣ*

**ಪುಟ : ೨೦೦** **ಬೆಲೆ : ರೂ. ೨೦೦**

**ಗೀತಾಂಜಲಿ ಪಬ್ಲಿಕೇಷನ್ಸ್,** ನಂ.೬೦, ೨ನೇ 'ಡಿ' ಅಡ್ಡರಸ್ತೆ, ೨ನೇ ಹಂತ, ೩ನೇ ಬ್ಲಾಕ್, ನಾಗರಬಾವಿ, ಬೆಂಗಳೂರು – ೫೬೦ ೦೭೨




*ರಾಯಚೂರಿನಲ್ಲಿ ನಡೆದ ಎಂಬತ್ತೆರಡನೇ ಅಖಿಲಭಾರತ ಸಾಹಿತ್ಯ ಸಮ್ಮೇಳನಕ್ಕೆ ಸರ್ವಾಧ್ಯಕ್ಷರಾಗಿ ಪ್ರಗತಿಪರಚಿಂತಕ, ತತ್ವಬದ್ಧ ಹೋರಾಟಗಾರ, ಬರಗೂರು ರಾಮಚಂದ್ರಪ್ಪನವರು ಆಯ್ಕೆಯಾದ ಕೂಡಲೇ ನಾಡಿನ ಸಮಸ್ತ ಪತ್ರಿಕೆಗಳು, ಸುದ್ದಿ ಮಾಧ್ಯಮಗಳು ಅವರನ್ನು ಸಂದರ್ಶಿಸಲು, ಅಭಿಪ್ರಾಯ ಪಡೆಯಲು ಮುಂದಾದವು. ಸಮ್ಮೇಳನಾಧ್ಯಕ್ಷರ ಭಾಷಣ ಮುದ್ರಿತವಾದ ಪುಸ್ತಕರೂಪದಲ್ಲಿರುವುದರಿಂದ ಎಲ್ಲರಿಗೂ ಸಿಗುತ್ತದೆ. ಆದರೆ ಪತ್ರಿಕಾ ಸಂದರ್ಶನಗಳು ಹಾಗೂ ಅಲ್ಲಿನ ವಿಶೇಷ ಲೇಖನಗಳು ಎಲ್ಲರಿಗೂ ಸಿಗುವುದಿಲ್ಲ. ಅಲ್ಲದೆ ಎಲ್ಲಾ ದಿನಪತ್ರಿಕೆ, ವಾರಪತ್ರಿಕೆಗಳನ್ನು ಎಲ್ಲರೂ ಓದುವುದಿಲ್ಲ. ಈ ಹಿನ್ನೆಲೆಯಲ್ಲಿ ಸಂಪಾದಕರಾದ ಡಾ॥ ಎ. ವಿ. ಲಕ್ಷ್ಮೀನಾರಾಯಣ ಅವರು ಎಲ್ಲಾ ಪತ್ರಿಕೆಗಳನ್ನು ಸಂಗ್ರಹಿಸಿ ಒಂದು ಕಡೆ ಸಂಕಲಿಸಿಕೊಟ್ಟಿದ್ದಾರೆ. ದೃಶ್ಯ ಮಾಧ್ಯಮಗಳಲ್ಲಿ ಬಂದ ಸಂದರ್ಶನಗಳನ್ನು ಸಹ ಸಂದರ್ಶಕರೇ ಅಕ್ಷರರೂಪಕ್ಕಿಳಿಸಿಕೊಟ್ಟಿದ್ದಾರೆ. ಇದು ಬಹಳ ಸ್ತುತ್ಯರ್ಹವಾದ ಕೆಲಸ. ಬರಗೂರರು ಈ ನಾಡು ಕಂಡ ಅಪರೂಪದ ವ್ಯಕ್ತಿ. ಕವಿಯಾಗಿ, ಕಥೆಗಾರರಾಗಿ, ಕಾದಂಬರಿಕಾರರಾಗಿ, ಸಂಸ್ಕೃತಿ – ಉಪಸಂಸ್ಕೃತಿ ಚಿಂತಕರಾಗಿ, ಸಿನಿಮಾ ನಿರ್ದೇಶಕರಾಗಿ, ಬಂಡಾಯ ಸಾಹಿತ್ಯ ಚಳುವಳಿಯ ನೇತಾರರಾಗಿ, ಒಂದು ಪೀಳಿಗೆಯ ಬರಹಗಾರರನ್ನು ಪ್ರಭಾವಿಸಿದವರು. ಬಹುಮುಖ್ಯವಾಗಿ ಗ್ರಾಮಾಂತರ ಪ್ರದೇಶದ ಅಲಕ್ಷಿತ ಸಮುದಾಯಗಳ ಲೇಖಕರಲ್ಲಿ ಆತ್ಮವಿಶ್ವಾಸ ತುಂಬಿದವರು. ತರ್ಕಬದ್ಧವಾದ ತಮ್ಮ ವಿಚಾರ ಸರಣಿಯಿಂದ, ತಮ್ಮ ಅಸ್ಖಲಿತ ಮಾತುಗಾರಿಕೆಯಿಂದ, ಸ್ಪಷ್ಟವಾದ ಬರವಣಿಗೆಯಿಂದ ಪ್ರತಿಯೊಂದು ಪಂಥ ಹಾಗೂ ಗುಂಪಿನವರಿಗೆ ಬೇಕಾದವರು. ಇಂಥ ಹೋರಾಟದ ಹಿನ್ನೆಲೆಯ ಬರಗೂರರ ಬಗೆಗಿನ ಅಕ್ಷರ ದಾಖಲೆಗಳನ್ನು ಮೂರುಭಾಗವಾಗಿ ಸಂಪಾದಕರು ಈ ಪುಸ್ತಕದಲ್ಲಿ ಸಂಕಲಿಸಿಕೊಟ್ಟಿದ್ದಾರೆ. ಹೀಗಾಗಿ ಈ ಪುಸ್ತಕ ಅವಲೋಕನ ಗ್ರಂಥವಾಗಿ ಸಂಗ್ರಹಯೋಗ್ಯವಾಗಿದೆ.*

– ***ಡಾ॥ ರಂಗಾರೆಡ್ಡಿ ಕೋಡಿರಾಂಪುರ,*** *ಬೆಂಗಳೂರು–೫೬೦ ೦೫೮*



# ಮಹಾಶ್ವೇತಾದೇವಿ ಅವರ ಕಥೆಗಳಲ್ಲಿ ಜೈವಿಕ ಅನನ್ಯತೆಯ ನೆಲೆಗಳು

ಡಾ॥ ಸುಧಾ ಬಿ. ಎಸ್.

ತಾಯ್ತನ ಹೆಣ್ಣಿನ ಶಕ್ತಿ ಹಾಗೂ ಸಾಮರ್ಥ್ಯದ ಮೂಲ ಸೆಲೆ ಎನ್ನುವುದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಪುರುಷ ಪ್ರಧಾನ ವ್ಯವಸ್ಥೆ ಈ ತಾಯ್ತನವನ್ನೇ ಅವಳ ಮಿತಿಯನ್ನಾಗಿರಿಸಿ, ಅದರಿಂದಾಗಿಯೇ ಅವಳನ್ನು ಕುಟುಂಬಕ್ಕೆ ಕೇಂದ್ರೀಕರಿಸಿ, ಆ ಮೂಲಕವೇ ಅವಳನ್ನು ನಿಯಂತ್ರಿಸುವ, ಬಂಧನದಲ್ಲಿಡುವ, ಅವಳ ಮೇಲೆ ಅಧಿಕಾರ ಚಲಾಯಿಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತವಾಗಿದೆ. ಗಂಡಿನ ಈ ಬಗೆಯ ಪ್ರವೃತ್ತಿಗೆ ಹೆಣ್ಣಿನ ಜೈವಿಕತೆಯನ್ನು ಕುರಿತಂತೆ ಪುರುಷ ಪ್ರಧಾನ ವ್ಯವಸ್ಥೆಗೆ ಇದ್ದ ಭಯ, ಆತಂಕಗಳೇ ಕಾರಣ ಎನ್ನುವುದನ್ನು ಈಗಾಗಲೇ ಹಲವಾರು ಸ್ತ್ರೀವಾದಿ ಚಿಂತಕಿಯರು ತಮ್ಮ ಬರಹಗಳಲ್ಲಿ ಸಮರ್ಥವಾಗಿ ಅಭಿವ್ಯಕ್ತಪಡಿಸಿದ್ದಾರೆ. ಈ ಭಯ, ಆತಂಕ, ಅಜ್ಞಾನಗಳು ಬಹಳ ಕಾಲದವರೆಗೂ ಮಹಿಳಾ ಅಭಿವ್ಯಕ್ತಿಯನ್ನು, ಅವಳ ಸೃಜನಶೀಲ ಚಟುವಟಿಕೆಗಳನ್ನು ನಿಯಂತ್ರಿಸುವಲ್ಲಿ ಯಶಸ್ವಿಯಾಗಿದ್ದವು. ಆದರೆ ಸದಾ ಶಕ್ತಿ ಸಂಚಲನದ ಮೂಲ ಸೆಲೆಯಾದ ಹೆಣ್ಣು ತನ್ನ ಬರವಣಿಗೆಯ ಮೂಲಕ ಜೈವಿಕತೆಯನ್ನು ಕುರಿತಂತೆ ಹತ್ತು ಹಲವು ರೀತಿಯಲ್ಲಿ ಆಲೋಚಿಸಲು, ಅವುಗಳ ಸಾಧ್ಯತೆಗಳನ್ನು, ಮಹತ್ವವನ್ನು ಕುರಿತಂತೆ ಬೆಳಕನ್ನು ಚೆಲ್ಲಲು ಪ್ರಯತ್ನಿಸಿದ್ದಾಳೆ. ಪುರುಷ ಪ್ರಧಾನ ವ್ಯವಸ್ಥೆ ಯಾವ ಜೈವಿಕ ಅಂಶಗಳನ್ನು ಹೆಣ್ಣಿನ ಮಿತಿಗಳಾಗಿ, ಅವಳನ್ನು ಅಧೀನ ದರ್ಜೆಯವಳನ್ನಾಗಿಸುವ ಅಂಶಗಳಾಗಿ ಬಳಸಿಕೊಂಡಿತ್ತೋ ಮಹಿಳಾ ಸಾಹಿತ್ಯ ಆ ಅಂಶಗಳ ಮೂಲಕವೇ ಹೆಣ್ಣಿನ ಶಕ್ತಿಯನ್ನು, ಅವಳ ಸಾಮರ್ಥ್ಯವನ್ನು ಗುರುತಿಸುವ, ಅವೇ ಅವಳ ಶಕ್ತಿಕೇಂದ್ರಗಳು ಎಂದು ಬಿಂಬಿಸುವ ಕಡೆಗೆ ಗಮನಹರಿಸಿತು. ಇದು ಕೇವಲ ಹೆಣ್ಣಿನ ಜೈವಿಕತೆಯನ್ನು ಮುನ್ನೆಲೆಗೆ ತರುವ ಪ್ರಯತ್ನ ಮಾತ್ರವಾಗಿರದೆ ಆ ಮೂಲಕವೇ ಅವಳ ಅಸ್ಮಿತೆಯನ್ನು ಗುರುತಿಸುವ, ಅವಳ ವ್ಯಕ್ತಿತ್ವಕ್ಕೆ ಅಧಿಕೃತತೆಯನ್ನು ದೊರಕಿಸಿಕೊಡುವ, ಸಾಮಾಜಿಕ ವ್ಯವಸ್ಥೆಯ ಸಮತೋಲನಕ್ಕೆ ಹೆಣ್ಣನ್ನೇ ಕಾರಣವಾಗಿಸುವ, ಗಂಡು ಈ ಅನುಭವಲೋಕದಿಂದ ಶಾಶ್ವತವಾಗಿ ಹೊರಗುಳಿದವನು ಎನ್ನುವುದನ್ನು ತಿಳಿಸುವುದರ ಮೂಲಕ ಈ ಜೈವಿಕಾನುಭವಗಳು ಹೆಣ್ಣಿನ ಶಕ್ತಿ ಕೇಂದ್ರಗಳಂತೆಯೇ ಅವಳ ವ್ಯಕ್ತಿತ್ವದ ಪ್ರಧಾನ ಧಾರೆಗಳೂ ಹೌದು ಎನ್ನುವುದರ ಕಡೆಗೆ ಗಮನ ಸೆಳೆಯುತ್ತವೆ.

ಮಹಿಳಾ ಸಾಹಿತ್ಯ ಹೆಣ್ಣನ್ನು ಕುರಿತಂತೆ ರಚನೆಯಾಗಿರುವ ಪ್ರಧಾನ ಸಾಹಿತ್ಯದ ಧೋರಣೆಯನ್ನು ಕಟುವಾಗಿ ಟೀಕಿಸುವುದರೊಂದಿಗೆ ಹೆಣ್ಣಿನ ಜೈವಿಕ ಅಂಶಗಳು ಮತ್ತು ಹೆರುವ ಕ್ರಿಯೆ, ಅಂದರೆ ತಾಯ್ತನ ಅವಳ ವಿಶಿಷ್ಟ ಶಕ್ತಿಕೇಂದ್ರ ಎಂಬುದನ್ನು ಗುರುತಿಸುತ್ತವೆ. ಅಲ್ಲದೆ, ಜೈವಿಕತೆಯ ಕಾರಣದಿಂದಾಗಿ ಅವಳು ವೈಯಕ್ತಿಕವಾಗಿ ಹಾಗೂ ಸಾಮಾಜಿಕವಾಗಿ

ಮಹಾಶ್ವೇತಾದೇವಿ ಬಂಗಾಳಿ ಲೇಖಕಿ ಹಾಗೂ ಹುಟ್ಟು ಹೋರಾಟಗಾರ್ತಿ. ಇವರು ತಮ್ಮ ಇಡೀ ಜೀವನವನ್ನು ಬಿಹಾರ, ಮಧ್ಯಪ್ರದೇಶ, ಪಶ್ಚಿಮ ಬಂಗಾಳ ಮತ್ತು ಛತ್ತೀಸ್‌ಗಢ ಪ್ರಾಂತ್ಯದ ಬುಡಕಟ್ಟು ಮತ್ತು ಆದಿವಾಸಿ ಜನಾಂಗಗಳ ಹೋರಾಟಗಳಿಗೆ ಮೀಸಲಿಟ್ಟವರು. ಬುಡಕಟ್ಟು ಸಮುದಾಯಗಳ ನಡುವೆ ನಿಂತು ಕ್ರಿಯಾಶೀಲವಾಗಿ ತೊಡಗಿಕೊಂಡು ಅಲ್ಲೊಂದು ಚಳುವಳಿಯನ್ನು ಅರ್ಥಪೂರ್ಣವಾಗಿ ಕಟ್ಟಿ ಬೆಳೆಸಿದವರು. ಸಿರಿವಂತರ, ಉಚ್ಚ ಕುಲದವರ, ಭೂಮಾಲೀಕರ, ಬಡ್ಡಿ ವ್ಯಾಪಾರಿಗಳ ಮತ್ತು ಪ್ರಾಂತೀಯ ಸರಕಾರಿ ಅಧಿಕಾರಿಗಳ ಅಮಾನವೀಯ ವರ್ತನೆ ಮತ್ತು ದಬ್ಬಾಳಿಕೆಗೆ ಪದೇ ಪದೇ ದಲಿತ ಹಾಗೂ ಬುಡಕಟ್ಟು ಸಮುದಾಯಗಳು ತುತ್ತಾಗುತ್ತಿರುವುದನ್ನು ನಿಲ್ಲಿಸುವ ಸಲುವಾಗಿ ಅವಿರತವಾಗಿ ದುಡಿದವರು. ಇವರ ಬದುಕಿನಂತೆ ಬರಹವೂ ಕೂಡ ಸಹಜವಾಗಿಯೇ ಶೋಷಿತರ ಪರವಾಗಿ ಧ್ವನಿ ಎತ್ತುತ್ತದೆ. ಇವರು ತಮ್ಮ ಬರಹಗಳಲ್ಲಿ ಜಮೀನ್ದಾರಿ ಪದ್ಧತಿಯ ಕ್ರೌರ್ಯ, ಬುಡಕಟ್ಟು ಜನರ ಸಮಸ್ಯೆಗಳು, ಆಧುನಿಕತೆ ತೊಂದೊಡ್ಡಿರುವ ಸವಾಲುಗಳು, ಮಹಿಳೆಯರ ಶೋಷಣೆಯ ನೆಲೆಗಳನ್ನು ಹಿಡಿದಿಟ್ಟಿದ್ದಾರೆ. ಮಹಾಶ್ವೇತಾದೇವಿಯವರ ಎಲ್ಲಾ ಬರಹಗಳೂ ಒಂದಲ್ಲಾ ಒಂದು ಬಗೆಯಲ್ಲಿ ಸಮಾಜದ ಅವಗಣನೆಗೆ ಒಳಗಾದ ದಮನಿತರನ್ನು ಕುರಿತದ್ದೇ ಆಗಿದೆ.

ಎದುರಿಸಬೇಕಾಗಿರುವ ಹಲವು ಬಗೆಯ ಸವಾಲುಗಳನ್ನು ಬಹುತೇಕ ಲೇಖಕಿಯರು ತಮ್ಮ ಬರಹಗಳ ಮೂಲಕ ಮುನ್ನೆಲೆಗೆ ತಂದಿದ್ದಾರೆ. ಅದರಲ್ಲೂ ಭಾರತದ ಬಹುಮುಖ್ಯ ಲೇಖಕಿಯರಲ್ಲಿ ಒಬ್ಬರಾದ ಮಹಾಶ್ವೇತಾದೇವಿಯವರ ಬರವಣಿಗೆಗಳಲ್ಲಿ ಇದನ್ನು ಪ್ರಧಾನವಾಗಿ ಗುರುತಿಸಬಹುದು.

ಮಹಾಶ್ವೇತಾದೇವಿ ತಮ್ಮ ಬದುಕು ಮತ್ತು ಬರಹ ಎರಡರಲ್ಲೂ ತಾಯ್ತನದ ಜೀವಂತಿಕೆಯನ್ನು ಉಳಿಸಿ ಕೊಂಡವರು. ತಾಯ್ತನದ ತೀವ್ರ ಮಿಡಿತದಿಂದಾಗಿಯೇ ಬದುಕನ್ನು ರೂಪಿಸಿಕೊಂಡವರು ಹಾಗೂ ಆ ಮಿಡಿತದ ಧ್ವನಿಯಾಗಿ ಲೇಖನಿಯನ್ನು ಹಿಡಿದವರು. ಇವರ ಬರಹಗಳಲ್ಲಿ ಹೆಣ್ಣಿನ ಜೈವಿಕತೆ ಹಾಗೂ ತಾಯ್ತನವನ್ನು ಕುರಿತಾದ ಚಿಂತನೆಗಳನ್ನು, ಅದು ಕಟ್ಟಿಕೊಡುವ ಲೋಕ ಮೀಮಾಂಸೆಯ ಮಾದರಿಗಳನ್ನು ಪ್ರಸ್ತುತ ಲೇಖನದಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ.

ಮಹಾಶ್ವೇತಾದೇವಿ ಬಂಗಾಳಿ ಲೇಖಕಿ ಹಾಗೂ ಹುಟ್ಟು ಹೋರಾಟಗಾರ್ತಿ. ಇವರು ತಮ್ಮ ಇಡೀ ಜೀವನವನ್ನು ಬಿಹಾರ, ಮಧ್ಯಪ್ರದೇಶ, ಪಶ್ಚಿಮ ಬಂಗಾಳ ಮತ್ತು ಛತ್ತೀಸ್‌ಗಢ ಪ್ರಾಂತ್ಯದ ಬುಡಕಟ್ಟು ಮತ್ತು ಆದಿವಾಸಿ ಜನಾಂಗಗಳ ಹೋರಾಟಗಳಿಗೆ ಮೀಸಲಿಟ್ಟವರು. ಬುಡಕಟ್ಟು ಸಮುದಾಯಗಳ ನಡುವೆ ನಿಂತು ಕ್ರಿಯಾಶೀಲವಾಗಿ ತೊಡಗಿಕೊಂಡು ಅಲ್ಲೊಂದು ಚಳುವಳಿಯನ್ನು ಅರ್ಥಪೂರ್ಣವಾಗಿ ಕಟ್ಟಿ ಬೆಳೆಸಿದವರು. ಸಿರಿವಂತರ, ಉಚ್ಚ ಕುಲದವರ, ಭೂಮಾಲೀಕರ, ಬಡ್ಡಿ ವ್ಯಾಪಾರಿಗಳ ಮತ್ತು ಪ್ರಾಂತೀಯ ಸರಕಾರಿ ಅಧಿಕಾರಿಗಳ ಅಮಾನವೀಯ ವರ್ತನೆ ಮತ್ತು ದಬ್ಬಾಳಿಕೆಗೆ ಪದೇ ಪದೇ ದಲಿತ ಹಾಗೂ ಬುಡಕಟ್ಟು ಸಮುದಾಯಗಳು ತುತ್ತಾಗುತ್ತಿರು ವುದನ್ನು ನಿಲ್ಲಿಸುವ ಸಲುವಾಗಿ ಅವಿರತವಾಗಿ ದುಡಿದವರು. ಇವರ ಬದುಕಿನಂತೆ ಬರಹವೂ ಕೂಡ ಸಹಜವಾಗಿಯೇ ಶೋಷಿತರ ಪರವಾಗಿ ಧ್ವನಿ ಎತ್ತುತ್ತದೆ. ಇವರು ತಮ್ಮ ಬರಹಗಳಲ್ಲಿ ಜಮೀನ್ದಾರಿ ಪದ್ಧತಿಯ ಕ್ರೌರ್ಯ, ಬುಡಕಟ್ಟು ಜನರ ಸಮಸ್ಯೆಗಳು,

> **ಕೃತಜ್ಞತೆ**
>
> ನಿತ್ಯವೂ ಬುಡಕೆ ಸುರಿದ ನೀರು
> ಎತ್ತರಕ್ಕೆ ಬೆಳೆದರೂ ಮರೆಯದೆ
> ರುಚಿ ಬೆರೆಸಿ ಶುಚಿಯಿಂದ ಕೊಟ್ಟು
> ಋಣ ತೀರಿಸುತಿಹುದು ಎಳನೀರು!
>
> **ಶ್ರೀನಿವಾಸ ಕುಂಡಂತಾಯ**
> ಬೆಂಗಳೂರು–೫೬೦ ೦೧೧

ಆಧುನಿಕತೆ ತೊಂದೊಡ್ಡಿರುವ ಸವಾಲುಗಳು, ಮಹಿಳೆಯರ ಶೋಷಣೆಯ ನೆಲೆಗಳನ್ನು ಹಿಡಿದಿಟ್ಟಿದ್ದಾರೆ. ಮಹಾಶ್ವೇತಾದೇವಿಯವರ ಎಲ್ಲ ಬರಹಗಳೂ ಒಂದಲ್ಲಾ ಒಂದು ಬಗೆಯಲ್ಲಿ ಸಮಾಜದ ಅವಗಣನೆಗೆ ಒಳಗಾದ ದಮನಿತರನ್ನು ಕುರಿತದ್ದೇ ಆಗಿವೆ. ಹೆಚ್. ಎಸ್. ಶ್ರೀಮತಿ ಅವರು ಗುರುತಿಸುವಂತೆ "ಇಂಥ ಮಹತ್ವದ ಭಾರತೀಯ ಲೇಖಕಿ ಮಹಾಶ್ವೇತಾದೇವಿಯವರಲ್ಲಿ ವಸ್ತು ವೈವಿಧ್ಯವನ್ನು ನಿರೀಕ್ಷಿಸುವುದು ಸಾಮಾನ್ಯ ಓದುಗರಿಗೆ ಸಹಜವೇ ಸರಿ. ಆದರೆ ಅವರ ಬಹುತೇಕ ಎಲ್ಲ ಕೃತಿಗಳನ್ನು ಆವರಿಸಿರುವುದು ಒಂದೇ ಮುಖ್ಯ ವಸ್ತು; ಶೋಷಣೆಯ ವಿರುದ್ಧದ ಹೋರಾಟ. ಇದೇ ಪ್ರಧಾನ ಧಾರೆ. ಬುಡಕಟ್ಟುಗಳ ಶೋಷಣೆ, ಮಹಿಳೆಯರ ಶೋಷಣೆ, ಕೆಳಜಾತಿ, ವರ್ಗಗಳವರ ಶೋಷಣೆ ಎಂಬ ವಿವಿಧ ಪದರಗಳನ್ನು ಬೇಕಾದರೆ ಬಿಡಿಸಿ ನೋಡಬಹುದಷ್ಟೆ. ಆಕೆಯ ಸಾಹಿತ್ಯಕ್ಕೆ ಇರುವುದೂ ಒಂದೇ ಒಂದು ನಿಶ್ಚಿತಗುರಿ. ಶೋಷಣೆ ದಮನ, ಅನ್ಯಾಯ, ಅಸಮಾನತೆಗಳು ಕೊನೆಗಾಣ ಬೇಕು ಎಂಬುದು. ಇದಕ್ಕಾಗಿಯೇ ಒತ್ತಾಯ; ಹೋರಾಟಗಳು; ಇದೊಂದೇ ಆಕೆಗಿರುವ ಮಹತ್ವಾಕಾಂಕ್ಷೆ. ಜೀವಮಾನವಿಡೀ ಇದೊಂದನ್ನೇ ಧ್ಯಾನಿಸುತ್ತಾ ಕರ್ತವ್ಯದಲ್ಲಿ ಲೀನವಾಗಿದ್ದುಬಿಟ್ಟಿದ್ದಾರೆ". (ಮಹಾಶ್ವೇತಾದೇವಿಯವರ ಕಥಾ ಸಾಹಿತ್ಯ ಭಾಗ–೧, ಕನ್ನಡಕ್ಕೆ–ಹೆಚ್. ಎಸ್. ಶ್ರೀಮತಿ, ಮುನ್ನುಡಿಯಿಂದ) ಎನ್ನುವ ಮಾತು ಹೆಚ್ಚು ಸಮಂಜಸವಾದದ್ದು.

"ಸಾಹಿತ್ಯವು ಸಮಾಜವನ್ನು ಮುನ್ನಡೆಸುವ ಹೊಣೆಯನ್ನು ಹೊರಲೇಬೇಕು, ಜನಮೂಲದಿಂದಲೇ ಅದಕ್ಕೆ ವಸ್ತು ಸಾಮಗ್ರಿಯು ಒದಗಿಬರಬೇಕು" ಎನ್ನುವುದನ್ನು ಗಾಢವಾಗಿ ದೃಢವಾಗಿ ನಂಬಿದ್ದ ಮಹಾಶ್ವೇತಾದೇವಿಯವರು ಹೆಣ್ಣಿನ ಶೋಷಣೆಯನ್ನು ತೀವ್ರವಾಗಿ ವಿರೋಧಿಸುವುದರೊಂದಿಗೆ ಅದರ ವಿರುದ್ಧ ಸಿಡಿದೇಳುವ ಮನೋಭಾವನೆಯನ್ನು ಹೊಂದಿದ್ದಾರೆ. ಇವರು ತಮ್ಮ ಕಥೆಗಳಲ್ಲಿ ಬುಡಕಟ್ಟು ಮಹಿಳೆಯರ ಶೋಷಣೆ, ಸಮಸ್ಯೆಗಳನ್ನು, ಅವರ ಬಂಧನದ ಬದುಕನ್ನು ಹಾಗೂ ಅವರ ಅಸಹಾಯಕತೆ, ಕೊನೆಗೆ ಅದನ್ನು ಪ್ರತಿಭಟಿಸುವ ಮನೋಭಾವ ತೀವ್ರಗೊಳ್ಳುವುದನ್ನು ವಿಮರ್ಶಾತ್ಮಕವಾಗಿ ಕಟ್ಟಿ ಕೊಟ್ಟಿದ್ದಾರೆ. ಇವರ ಕಥೆಗಳ ವಿಶೇಷತೆ ಎಂದರೆ ಇವು ಕೇವಲ ಹೆಣ್ಣಿನ ಶೋಷಣೆ, ಹಿಂಸೆ, ಅವಮಾನಗಳಿಗಷ್ಟೇ ಸೀಮಿತವಾಗಿರದೆ ತನ್ನನ್ನು ಹಿಂಸಿಸುವುದರ ವಿರುದ್ಧ ತಿರುಗಿಬೀಳುವ, ಅವರ ತಂತ್ರಗಳಿಗೆ ಪ್ರತಿ ತಂತ್ರಗಳನ್ನು ಹೂಡುವ, ಕ್ರೂರ ವ್ಯವಸ್ಥೆಯ ಹಿಡಿತದಿಂದ ಹೊರಬರಲು ನಿರಂತರವಾಗಿ ಪ್ರಯತ್ನಿಸುವ ಹೆಣ್ಣಿನ ಅಗಾಧ ಶಕ್ತಿಯ ಅನಾವರಣ ಕೂಡ ಆಗಿದೆ. ಹೀಗಾಗಿ ಇದು ಹೆಣ್ಣಿನ ಬಿಡುಗಡೆಯ ನೆಲೆಯನ್ನು ಸೂಚಿಸುವಲ್ಲಿ, ಬದುಕನ್ನು ಕಟ್ಟಿಕೊಳ್ಳುವ ಬಹುಮುಖ ಸಾಧ್ಯತೆಗಳನ್ನು ಗುರುತಿಸುವಲ್ಲಿ, ಅವಳ ಮಾನಸಿಕ ಹಾಗೂ ದೈಹಿಕ ಶಕ್ತಿಯ ವಿಸ್ತಾರತೆಯನ್ನು ಜಗತ್ತಿನ ಮುಂದಿಡುವಲ್ಲಿ ಯಶಸ್ವಿಯಾಗಿದೆ. ಆದ್ದರಿಂದ ಮಹಾಶ್ವೇತಾದೇವಿಯವರ ಕಥೆಗಳು ಸಮಕಾಲೀನ ಹೆಣ್ಣಿನ ಸ್ಥಿತಿಗತಿಗಳನ್ನು ಕುರಿತಂತೆ ಚರ್ಚಿಸುವ ಸಂದರ್ಭದಲ್ಲಿ ಹೆಚ್ಚು ಮಹತ್ವಪೂರ್ಣ ಕಥೆಗಳಾಗಿ ಕಂಡುಬರುತ್ತವೆ. ಅದರಲ್ಲೂ ಹೆಣ್ಣಿನ ಜೈವಿಕ ಶಕ್ತಿಯನ್ನು ಮುನ್ನೆಲೆಗೆ ತರುವಲ್ಲಿ, ಅದರ ಅಗಾಧತೆಯನ್ನು ಪರಿಚಯಿಸುವಲ್ಲಿ, ಹೆಣ್ಣಿನ ಈ ಶಕ್ತಿ, ಸಾಧ್ಯತೆಗಳ ಎದುರು ಎಂತಹವರೇ ಆದರೂ ಶರಣಾಗಿ ಬಿಡಬೇಕಾದ ಸನ್ನಿವೇಶಗಳನ್ನು ಗುರುತಿಸುವಲ್ಲಿ ಇವರ ಕಥೆಗಳು ಮಹತ್ವದ ಕಾರ್ಯ ನಿರ್ವಹಿಸುತ್ತವೆ. ಬೇರೆ ಬೇರೆ ಸಮುದಾಯಗಳಲ್ಲಿ ಹೆಣ್ಣಿನ ಶೋಷಣೆ ಸ್ವರೂಪ ಭಿನ್ನವಾದರೂ ಎಲ್ಲ ಸಂದರ್ಭದಲ್ಲಿ ದೈಹಿಕವಾಗಿ ವ್ಯವಸ್ಥೆಯ ಆಕ್ರಮಣಕ್ಕೆ ಒಳಗಾಗುತ್ತಿರುವವಳು ಹೆಣ್ಣೇ. ಆದರೆ ಅವುಗಳನ್ನು ಮೀರಿ ನಿಲ್ಲುವ ಸಾಮರ್ಥ್ಯ ಹೆಣ್ಣಿನಲ್ಲಿಯೇ ಅಂತರ್ಗತವಾಗಿದೆ ಎಂಬುದನ್ನು ಮಹಾಶ್ವೇತಾದೇವಿಯವರ ಕತೆಗಳು ಸಮರ್ಥವಾಗಿ ಹಿಡಿದಿಡುತ್ತವೆ.

ಹೆಣ್ಣಿನ ಜೈವಿಕ ಅಂಶಗಳನ್ನು ಕುರಿತಂತೆ ರಚನೆಯಾಗಿರುವ ಮಹಾಶ್ವೇತಾದೇವಿ ಅವರ ಕಥೆಗಳಲ್ಲಿ ಎರಡು ಪ್ರಧಾನ ಆಶಯಗಳನ್ನು ಗುರುತಿಸಬಹುದು. ಮೊದಲನೆಯದು, ಹೆಣ್ಣಿನ ಶೋಷಣೆಯ ಭಿನ್ನ ಭಿನ್ನ ನೆಲೆಗಳನ್ನು ವಾಸ್ತವವಾದ ಚಿತ್ರಣದೊಂದಿಗೆ ಕಟ್ಟಿಕೊಡುವುದು. ಇವು ವ್ಯವಸ್ಥೆಯ



ಕ್ರೌರ್ಯ, ಜಮೀನ್ದಾರಿ ಪದ್ಧತಿ, ಅಧಿಕಾರಶಾಹಿ, ಲಾಭಕೋರತನಗಳು ಹೇಗೆ ಹೆಣ್ಣು ಹಾಗೂ ಅವಳ ದೇಹವನ್ನು ಸರಕಾಗಿಸಿಕೊಂಡು ತಮ್ಮ ಮನಸೋ ಇಚ್ಛೆ ಬಳಸಿಕೊಳ್ಳುತ್ತಿವೆ ಎನ್ನುವುದನ್ನು ಕುರಿತಾದವುಗಳು. ದೌಲೊತಿ, ಸ್ತನದಾಯಿನಿ, ಮಕರ್ ಸವರ್ ಮುಂತಾದ ಕತೆಗಳು ಈ ಗುಂಪಿಗೆ ಸೇರುತ್ತವೆ. ಎರಡನೆಯದು, ಎಲ್ಲಾ ಬಗೆಯ ಶೋಷಣೆಯ ನಡುವೆಯೂ ತನ್ನ ಅಂತಃಶಕ್ತಿಯಿಂದ ಮೇಲೇಳುವ ಹೆಣ್ಣಿನ ಚೈತನ್ಯವನ್ನು ಕುರಿತಾದದ್ದು. ಇಲ್ಲಿ ಹೆಣ್ಣಿನ ಅಂತಃಶಕ್ತಿ ಎನ್ನುವುದು ಹೆಣ್ಣು ಸ್ವತಂತ್ರವಾಗಿ, ತನ್ನ ಸ್ವಸಾಮರ್ಥ್ಯದಿಂದಲೇ, ಯಾರ ಸಹಾಯ ಸಹಕಾರಗಳ ಹಂಗೂ ಇಲ್ಲದೆ ವ್ಯವಸ್ಥೆಯನ್ನು ಎದುರುಗೊಳ್ಳುವ ಬಗೆಯನ್ನು ಕುರಿತಾದದ್ದು. ದೋಪ್ದಿ, ಬೇಟೆ, ರುಡಾಲಿ ಕಥೆಗಳು ಇದಕ್ಕೆ ಸಮರ್ಥ ಉದಾಹರಣೆಗಳಾಗಿವೆ. ಆದರೆ ಇಲ್ಲಿ ಗಮನಿಸಬೇಕಾದ ಅಂಶ ಈ ವಿಂಗಡಣೆ ಅಧ್ಯಯನದ ಅನುಕೂಲಕ್ಕೇ ಹೊರತು ಅದೇ ಅಂತಿಮವಲ್ಲ. ಈ ಎಲ್ಲ ಕಥೆಗಳೂ ಮೇಲಿನ ಎರಡು ಆಶಯಗಳನ್ನೂ ಒಳಗೊಂಡಂತೆ ಅದರಾಚೆಗಿನ ಹತ್ತು ಹಲವು ಅಂಶಗಳ ಕಡೆಗೆ ಬೆಳಕು ಚೆಲ್ಲುತ್ತವೆ ಎನ್ನುವುದನ್ನು ಯಾವುದೇ ಕಾರಣಕ್ಕೂ ಅಲ್ಲಗಳೆಯುವಂತಿಲ್ಲ ಎಂಬ ಅರಿವೂ ಕೂಡ ಇದೆ.

ಮಹಾಶ್ವೇತಾದೇವಿಯವರ ದೋಪ್ದಿ ಮತ್ತು ಸ್ತನದಾಯಿನಿ ಒಂದೇ ಆಶಯವನ್ನು ಒಳಗೊಂಡಿರುವ ಎರಡು ಭಿನ್ನ ಮಾರ್ಗಗಳಿಂದ ಗುರಿಯ ಕಡೆಗೆ ಸಾಗುವ ಕತೆಗಳಾಗಿವೆ. ಈ ಎರಡೂ ಕತೆಗಳು ಹೆಣ್ಣಿನ ಜೈವಿಕತೆಯ ಪ್ರಾಧಾನ್ಯತೆಯನ್ನು ಅವಳ 'ದೇಹ ಸರ್ವಸ್ವದ' ನೆಲೆಗಟ್ಟಿನಲ್ಲಿ ಹಿಡಿದಿಡಲು ಪ್ರಯತ್ನಿಸುತ್ತವೆ. ಇವರ ಪ್ರಸಿದ್ಧ ಕತೆಯಾದ 'ದೋಪ್ದಿ' ಶೋಷಣೆಯ ಅಂತಿಮ ಅಸ್ತ್ರವಾದ ಅತ್ಯಾಚಾರಕ್ಕೆ ಒಳಗಾದ ನಂತರವೂ ತನ್ನ ದೇಹದ ಬಗೆಗೆ ಬೇಸರಗೊಳ್ಳದೆ ಅದರ ಮೂಲಕವೇ ಶೋಷಿತರನ್ನು ಎದುರಿಸಲು ಮುಂದಾಗುವ ಹೆಣ್ಣಿನ ದಿಟ್ಟತನವನ್ನು ಕುರಿತದ್ದಾಗಿದೆ. ತನ್ನ ಸಮುದಾಯದ ಮೇಲೆ ನಡೆಯುತ್ತಿರುವ ನಿರಂತರ ಶೋಷಣೆಯ ವಿರುದ್ಧ ಹೋರಾಟಕ್ಕಿಳಿದ ದೋಪ್ದಿ ಕಡೆಗೊಮ್ಮೆ ಪೊಲೀಸರ ಕೈವಶವಾಗುತ್ತಾಳೆ. ಈ ಸಂದರ್ಭದಲ್ಲಿ ಅವಳನ್ನು ಅತ್ಯಂತ ಅಮಾನವೀಯವಾಗಿ ನಡೆಸಿಕೊಳ್ಳಲಾಗುತ್ತದೆ. ಇದಕ್ಕೆ ಹೆದರದೆ ದಿಟ್ಟತನದಿಂದ ಪ್ರಭುತ್ವಕ್ಕೆ ಎದುರಾಗುವ ದೋಪ್ದಿ ಹೆಣ್ಣಿನ ಧೀಮಂತ ಅಂತಃಶಕ್ತಿಯ ದ್ಯೋತಕ ವಾಗಿದ್ದಾಳೆ. ಇದು ದೋಪ್ದಿ ಮತ್ತು ಸೇನಾಧಿಕಾರಿಯ ನಡುವೆ ನಡೆಯುವ ಸಂಭಾಷಣೆಯ ಭಾಗದಲ್ಲಿ ವ್ಯಕ್ತವಾಗುತ್ತದೆ. ದೋಪ್ದಿ ಮತ್ತು ಸೇನಾಧಿಕಾರಿಯ ನಡುವೆ ನಡೆಯುವ ಸಂಭಾಷಣೆಯ ಭಾಗವನ್ನು ಮಹಾಶ್ವೇತಾದೇವಿಯವರು ಹಿಡಿದಿಟ್ಟಿರುವ ಬಗೆ ವಿಶಿಷ್ಟವಾದದ್ದು. "ದ್ರೌಪದಿ ಅವನೆದುರೇ ಬಂದು ನಿಂತಳು ಬಟ್ಟ ಬೆತ್ತಲೆಯಾಗಿ. ಅವಳ ತೊಡೆ, ಗುಪ್ತಾಂಗದ ಕೂದಲುಗಳು ಒಣಗಿದ ರಕ್ತದಿಂದ



ರಟ್ಟುಗಟ್ಟಿದ್ದವು. ಆ ಎರಡು ಮೊಲೆಗಳು ಎರಡು ವ್ರಣಗಳು." ಇದು ಅವಳ ದೇಹದ ಮೇಲೆ ನಡೆದ ಅತ್ಯಂತ ಅಮಾನವೀಯ, ಅಸಹನೀಯ ಹಲ್ಲೆಯನ್ನು ಧ್ವನಿಸುತ್ತದೆ. ಆದರೆ ಕಥಾನಾಯಕಿ ಇದರಿಂದ ವಿಚಲಿತಳಾಗುವುದಿಲ್ಲ. ಆ ದೇಹದ ಮೂಲಕವೇ ತಕ್ಕ ಉತ್ತರ ಕೊಡುತ್ತಾಳೆ. "ದ್ರೌಪದಿ ಮತ್ತಷ್ಟು ಸೇನಾಧಿಕಾರಿಯ ಹತ್ತಿರ ಬಂದಳು. ಎರಡು ಕೈಗಳನ್ನೂ ಪಿರ್ರೆಗಳ ಮೇಲೆ ಊರಿ ನಿಂತಳು. ದೊಡ್ಡದಾಗಿ ನಗುತ್ತಾ, "ದೋಪ್ದಿ ಮೆಝುನ್‌ಳನ್ನು ಇದಕ್ಕಲ್ಲವೇ ಹುಡುಕಿದ್ದು? ಸರಿಯಾಗಿ ಮಾಡ್ರೋ ಅಂತ ಅವರಿಗೆಲ್ಲಾ ಹೇಳಿದೆಯಲ್ಲಾ, ಹೇಗೆ ಮಾಡಿದ್ದಾರೆ ಅಂತ ನೋಡಲ್ಲವೇನು?" ಎಂದು ಸವಾಲೆಸೆದಳು. ಇದು ಯಾವ ಶೋಷಕನೂ ಕೂಡ ನಿರೀಕ್ಷಿಸದ, ಕಲ್ಪಿಸಿಕೊಳ್ಳಲೂ ಕೂಡ ಸಾಧ್ಯವಾಗದ ಸನ್ನಿವೇಶ. ಎಷ್ಟೆಲ್ಲಾ ಪೌರುಷದಿಂದ ಮೆರೆಯುವ ಸೇನಾಧಿಕಾರಿ ಈ ಸನ್ನಿವೇಶದಿಂದ ವಿಚಲಿತನಾಗುತ್ತಾನೆ. ಅವಳಿಗೆ ಬಟ್ಟೆ ತೊಡಿಸಲು ಆದೇಶಿಸುವ ಇವನಿಗೆ ದೋಪ್ದಿ ಎಸೆಯುವ ಸವಾಲು "ಏನು ಮಾಡ್ತಿಯೋ ಬಟ್ಟೆ ತೊಗೊಂಡು? ನನ್ನನ್ನು ಬೆತ್ತಲೆ ಮಾಡಬಹುದು. ಮತ್ತೆ ಬಟ್ಟೆ ತೊಡಿಸು ನೋಡೋಣ. ನೀನೂ ಒಬ್ಬ ಗಂಡಸೇನೋ" ಎಂದು ಸವಾಲು ಹಾಕುತ್ತಾಳೆ. ಇದು ಇದುವರೆವಿಗೂ ಯಾವ ವ್ಯವಸ್ಥೆ ಹೆಣ್ಣನ್ನು ದೇಹಮೂಲವಾಗಿ ನೋಡುತ್ತಿದೆಯೋ, ಅತ್ಯಾಚಾರದ ಮೂಲಕ ಹೆಣ್ಣಿನ ವ್ಯಕ್ತಿತ್ವವನ್ನು ಅಳಿಸಿಹಾಕಿ ಬಿಡಬಹುದೆಂದು ಅಟ್ಟಹಾಸದಿಂದ ಮೆರೆಯುತ್ತಿದೆಯೋ ಅದಕ್ಕೆ ನೀಡಿದ ಸವಾಲಾಗಿದೆ. ಮುಂದುವರಿದು "ನಾನು ನಾಚಿಕೆಪಟ್ಟುಕೊಳ್ಳಬೇಕಾದ ಯೋಗ್ಯತೆಯುಳ್ಳ ಒಬ್ಬ ಗಂಡಸೂ ಇಲ್ಲಿಲ್ಲ. ನನಗೆ ಹೇಗೆ ಬಟ್ಟೆ ತೊಡಿಸುವಿರೋ ನೋಡೇ ಬಿಡ್ತೀನಿ. ನೀವಿನ್ನೇನು ತಾನೇ ಮಾಡಲು ಸಾಧ್ಯ? ಬನ್ರೋ, ಹಿಡೀರೋ ನನ್ನ" ಎನ್ನುವ ಸವಾಲು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಯಾವುದನ್ನು ಗಂಡಿನ ಶಕ್ತಿ, ಸಾಮರ್ಥ್ಯವೆಂದು ಬಿಂಬಿಸಿ ಮೆರೆಸಲಾಗುತ್ತಿದೆಯೋ ಅವುಗಳ ಮಿತಿ ಮತ್ತು ಗಂಡಿನ ಅಸಹಾಯಕತೆಯನ್ನು ಈ ಮಾತುಗಳು ಧ್ವನಿಸುತ್ತವೆ. ನೀವಿನ್ನೇನು ಮಾಡಲು ಸಾಧ್ಯ? ಎನ್ನುವ ಪ್ರಶ್ನೆ ಗಂಡಿನ ಅಸಹಾಯಕತೆಯ ಸಂಕೇತ. ಹೆಣ್ಣಿನ ಮೇಲೆ ನಡೆಯುತ್ತಿರುವ ಅತ್ಯಾಚಾರ ಎನ್ನುವುದನ್ನು ಧ್ವನಿಸುತ್ತದೆ. ಇದು ಇಡೀ ಪುರುಷ ಪ್ರಧಾನ ವ್ಯವಸ್ಥೆಗೆ ಎಸೆಯುತ್ತಿರುವ ಸವಾಲು ಕೂಡ ಆಗಿದೆ. ಹಾಗಾಗಿ ಈ ಪ್ರಶ್ನೆಗೆ ಉತ್ತರಿಸುವ ಸಾಮರ್ಥ್ಯ ಪ್ರಭುತ್ವಕ್ಕಿಲ್ಲ. ಅಲ್ಲೆಲ್ಲಾ ಮೌನವೇ ಉತ್ತರವಾಗುತ್ತದೆ. ಅಂತಿಮವಾಗಿ "ನಿಶ್ಶಸ್ತ್ರ ಎದುರಾಳಿಯ ಮುಂದೆ ನಿಲ್ಲಲು ಸಾಧ್ಯವಾಗದೆ ಸೇನಾನಾಯಕ ತತ್ತರಿಸಿ ನಡುಗಿದ" ಎನ್ನುವ ಲೇಖಕಿಯ ಮಾತುಗಳು ಹೆಣ್ಣಿನ ಶಕ್ತಿಯನ್ನು ಸಮರ್ಥವಾಗಿ ಹಿಡಿದಿಡುತ್ತವೆ. ಈ ಕತೆಯಲ್ಲಿ ಬರುವ ಪ್ರತಿ ಸಾಲುಗಳೂ ಕೂಡ ಹೆಣ್ಣು ಮತ್ತು ವ್ಯವಸ್ಥೆಯ ನಡುವೆ ನಿರಂತರವಾಗಿ ನಡೆಯುತ್ತಿರುವ ಸಂವಾದದ ಪ್ರತಿಧ್ವನಿಗಳೇ ಆಗಿವೆ. ಇಲ್ಲಿ ದೋಪ್ದಿ, ಸೇನಾಧಿಕಾರಿ ಮತ್ತು ಇತರೆ ಪೊಲೀಸ್ ಅಧಿಕಾರಿಗಳು ಕೇವಲ ಪಾತ್ರಗಳಷ್ಟೇ ಆಗಿರದೆ ಇಡೀ ವ್ಯವಸ್ಥೆಯ ಸಾಂಕೇತಿಕ ಪ್ರತಿಮೆಗಳಾಗಿ ನಿಲ್ಲುತ್ತಾರೆ.

ಇವರ ಮತ್ತೊಂದು ಕತೆ 'ಸ್ತನದಾಯಿನಿ' ತನ್ನ ಕುಟುಂಬ ನಿರ್ವಹಣೆಗಾಗಿ ತನ್ನ ದೇಹವನ್ನೇ ಸಾಧನವನ್ನಾಗಿಸಿಕೊಳ್ಳುವ ಯಶೋಧೆಯ ಬದುಕನ್ನು ಕುರಿತಾದದ್ದು. ತನ್ನ ಕುಟುಂಬ ನಿರ್ವಹಣೆಯ ಆಧಾರ ಸ್ತಂಭವಾಗಿದ್ದ ಕಂಗಾಲಿ ಚರಣ ಕಾಲು ಕಳೆದುಕೊಂಡ ನಂತರ ಅದರ ಜವಾಬ್ದಾರಿಯನ್ನು ಹೊತ್ತ ಯಶೋಧ ಮಾಲೀಕನ ಮನೆಯ ಮಕ್ಕಳಿಗೆ ಹಾಲುಣಿಸುವ ಕೆಲಸವನ್ನು ವಹಿಸಿಕೊಳ್ಳುತ್ತಾಳೆ. ಅದಕ್ಕಾಗಿ ನಿರಂತರವಾಗಿ ಬಸಿರು, ಬಾಣಂತನದ ಹೊರೆ ಅವಳ ಮೇಲೆ ಬೀಳುತ್ತದೆ. ಆದರೆ ದೊಡ್ಡ ಮೊಲೆಗಳೆರಡರ ನಡುವೆ ನಿರಂತರ ಸುಖ ಉಂಡ ಕಂಗಾಲಿಯಾಗಲೀ, ಅದೇ ದೊಡ್ಡ ಮೊಲೆಗಳ ಹಾಲು ಕುಡಿದು ದಷ್ಟಪುಷ್ಟವಾಗಿ ಬೆಳೆದ ಹಲ್ದರ್ ಬಾಬುವಿನ ಮನೆಯ ಮಕ್ಕಳಾಗಲೀ ಆ ಎದೆಗಳಿಗೆ ರೋಗ ಬಂದಾಗ ಬಂದು ನೋಡುವುದಿಲ್ಲ. ಎಷ್ಟೋ ಮಕ್ಕಳಿಗೆ ಹಾಲುಣಿಸಿದ ಯಶೋಧ ಅನಾಥೆಯಾಗಿ ಸಾವನ್ನಪ್ಪುತ್ತಾಳೆ. ಈ ಕತೆ ಹೆಣ್ಣಿನ ಜೈವಿಕತೆಯ ಬಹುಮುಖ ಸಾಧ್ಯತೆಗಳ ಜೊತೆಗೆ ವ್ಯವಸ್ಥೆ ಅದನ್ನು ಹೇಗೆ ತನ್ನ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳುತ್ತಿದೆ ಎನ್ನುವುದರ ಕಡೆಗೆ ಗಮನಸೆಳೆಯುತ್ತದೆ. ಅವಳ ಶಕ್ತಿ, ಸಾಮರ್ಥ್ಯ, ತಾಯ್ತನದ ಮಹತ್ವವನ್ನು ಹೊಗಳುವುದರ ಮೂಲಕ ಹೇಗೆ ಅವಳನ್ನು ಒಲಿಸಿಕೊಳ್ಳುವ ಪ್ರಯತ್ನ ನಡೆಯುತ್ತಿದೆ ಎನ್ನುವುದನ್ನು ಕತೆ ವ್ಯಂಗ್ಯವಾಗಿ ಹಿಡಿದಿಡುತ್ತದೆ. ಒಟ್ಟಾರೆ, ಮಹಾಶ್ವೇತಾದೇವಿಯವರು ತಮ್ಮ ಕತೆಗಳ ಮೂಲಕ ಹೆಣ್ಣಿನ ಜೈವಿಕತೆ ಮತ್ತು ತಾಯ್ತನದ ಮೂಲಕ ಅವಳ ವ್ಯಕ್ತಿತ್ವದ ಮತ್ತೊಂದು ಮುಖವನ್ನು ಅನಾವರಣಗೊಳಿಸಿದ್ದಾರೆ.

**ಡಾ॥ ಸುಧಾ ಬಿ. ಎಸ್.**
ಕನ್ನಡ ಸಹಾಯಕ ಪ್ರಾಧ್ಯಾಪಕರು
ಸರ್. ಎಂ. ವಿ. ಸರ್ಕಾರಿ ಕಲಾ ಮತ್ತು ವಾಣಿಜ್ಯ ಕಾಲೇಜು
ಭದ್ರಾವತಿ – ೫೭೭ ೩೦೧, ಶಿವಮೊಗ್ಗ ಜಿಲ್ಲೆ

ಕಾವ್ಯಲೋಕ



# ನೇಸರ ಮೂಡಲಿದ್ದಾನೆ

ಹಳ್ಳಿಯ ಸಂದುಗೊಂದುಗಳಲ್ಲಿ
ಊರಾಚೆಯ ಪಂಚಮರ ಕೇರಿಗಳಲ್ಲಿ
ಬೆವರಲ್ಲಿ ಮೈ ಮೂಳೆಗಳ ಹಿಟ್ಟು ನಾದಿ
ತಿರಿದುಂಬ ಅಲೆಮಾರಿಗಳ ಗುಡಾರುಗಳಲ್ಲಿ
ಬರಸಿಡಿಲಿನಂತೆ ಹಬ್ಬಿತ್ತು ಸುದ್ದಿಯೊಂದು
ಇನ್ನೇನು ನೇಸರು ಮೂಡಲಿದ್ದಾನೆ ಎಂದು

ಹೊಗೆ ತುಂಬಿದ ಅಡುಗೆ ಮನೆಯಿಂದ
ಕಣ್ಣೊರೆಸಿಕೊಳ್ಳುತ್ತ ಮನೆಯವಳು ಧಾವಿಸಿದಳು
ಮೊಲೆ ಚೀಪುತ್ತಿದ್ದ ಕಂದನ ತಳ್ಳಿ ತಾಯಿ
ಧಾವಿಸಿದಳು
ಬಿಟ್ಟಿ ಕೆಲಸದ ಹೊರೆ ಚೆಲ್ಲಿ ಜೀತಣ್ಣ ಧಾವಿಸಿದ
ತಟ್ಟೆ ಹಿಡಿದು ಜೊಲ್ಲು ಸುರಿಸುತ್ತ
ಗುಡಿಗುಂಡಾರಗಳ ಹೊರಗೆ ಆಸ್ತಿಕರ
ಕಾಲು ಧೂಳಿಯ ಕುಡಿಯುತ್ತ ಕುಳಿತ
ತಿರುಕ ಧಾವಿಸಿದ
ವಂಚನೆಗೆ ಬಲಿಯಾಗಿ ಬೀದಿ ಪಾಲಾದ
ಮಾನ ಕಳೆದುಕೊಂಡ ಮಾನಿನೀ ಧಾವಿಸಿದಳು
ಯಾರೋ ತಂದ ಸುದ್ದಿಗೆ ನವಿರೇರಿ ಧಾವಿಸಿದರು
ನೇಸರ ಮೂಡಲಿದ್ದಾನೆ ಎಂದು ತಿಳಿದು
ಧಾವಿಸಿದರು

ಮೂಡಲಿರುವ ನೇಸರ ನನಗೆ ತನಗೆಂದು ಕೂಗಾಡ
ಹತ್ತಿದರು
ಇಷ್ಟು ದಿನಗಳ ಕತ್ತಲೆ ಸಾಕು
ಮೂಡಲಿರುವ ನೇಸರನ ನಾವೆಲ್ಲ
ಹಂಚಿಕೊಳ್ಳೋಣ
ಎಂದು ಹಿರಿಯರಲ್ಲಿ ಕೆಲವರು ನುಡಿದರು
ಅದೇ ಸರಿ ಎಂದು ಎಲ್ಲರೂ ಸಾಲಾಗಿ ಕುಳಿತರು

ಹೊತ್ತು ಕಳೆಯಿತು, ದಿನಗಳು ಉರುಳಿದವು
ನೇಸರನ ಕಾಣುವ, ನೇಸರನ ಮೊಗೆದುಕೊಳ್ಳುವ
ಕಣ್ಣಲ್ಲಿ, ತಲೆಯಲ್ಲಿ, ಎದೆಯಲ್ಲಿ ಆಸೆ ಹೊತ್ತ
ಸಾಲಾಗಿ ಕುಳಿತ ಜನ ಕಾಯುತ್ತಲೇ ಇದ್ದರು

ಕಾಯುತ್ತ ಕಾಯುತ್ತ ಕಣ್ಣೆದುರು ಕವಿದ
ಮಂಜಿನಲ್ಲಿ
ಮಿಂಚಿದ ಕಿಡಿಗಳೇ ನೇಸರನೆಂದು ಬಗೆದು
ಹಿಗ್ಗಿದರು
ಮರುಕ್ಷಣ ಅದು ಭ್ರಮೆ ಎಂದು ಅರಿತುಕೊಂಡರು

ಎಷ್ಟೇ ಹೊತ್ತಾದರೂ, ದಿನ ಕಳೆದರೂ
ನೇಸರು ಮೂಡಲೇ ಇಲ್ಲ...
ಪಂಚಮರ, ಅಲೆಮಾರಿಗಳ
ಹಸಿದವರ, ಬದುಕು ಬಯಸಿದವರ
ನೇಸರು ಮೂಡಲೇ ಇಲ್ಲ...



ಮುಂದೊಂದು ದಿನ
ಸುದ್ದಿ ತಂದರು ಯಾರೋ
ನೇಸರು ಮೂಡಿದ್ದಾನೆ ಕಾಲಕ್ಕೆ ಸರಿಯಾಗಿ
ನಡುವೆ ಯಾರೋ ಅಪಹರಿಸಿದ್ದಾರೆ ಅವನನ್ನು
ಮಹಲುಗಳಲ್ಲಿ, ಪಂಚತಾರಾ ಹೋಟೆಲುಗಳಲ್ಲಿ
ಕುರ್ಚಿಯ ಕೆಳಗೆ, ಲಂಚ ಮಂಚಗಳಲ್ಲಿ
ವೋಟು ನೋಟುಗಳ ಕಂತೆಗಳಲ್ಲಿ
ಬಚ್ಚಿಟ್ಟುಕೊಂಡಿದ್ದಾರೆ ನೇಸರನ
ಜೊಲ್ಲು ಸುರಿಸುತ್ತ ಸಾಲಾಗಿ ಕುಳಿತ ಜನ
ಕಾಯುತ್ತಲೇ ಇದ್ದಾರೆ ನೇಸರನ

ಜನನಾಯಕರು ಬಿಗಿಯುತಿದ್ದಾರೆ ವ್ಯಾಖ್ಯಾನ
ನೇಸರ ಮೂಡಲಿದ್ದಾನೆ ತಾಳಿ ನೀವೆಲ್ಲ ಜನ
ಮೂಡದಿದ್ದರೆ ಹಿಡಿದು ತರುವೆವು ನಾವು
ಆ ಚಿಂತೆ ನಮಗಿರಲಿ, ನಿಶ್ಚಿಂತರಾಗಿ ನೀವು.

*(ಪ್ರೇರಣೆ : ಒಂದು ಮರಾಠಿ ಕವಿತೆ)*

**ಬಾಲಚಂದ್ರ ಜಯಶೆಟ್ಟಿ**
ನವ್ಯ ಮನೆ, ಜಯನಗರ, ಸೇಡಂ ರಸ್ತೆ, ಕಲಬುರಗಿ – ೫೮೫ ೧೦೫

# ಸವಾಲೆಂದರೆ ಯಾವುದು?

**ನಾ**ನೊಬ್ಬ ನಿವೃತ್ತ ಕಾಲೇಜು ಅಧ್ಯಾಪಕ. ಆ ವೃತ್ತಿಯಲ್ಲಿ ಬಿಕ್ಕಟ್ಟುಗಳು ಮತ್ತು ಸವಾಲುಗಳು ವಿಪುಲವಾಗಿ ತುಂಬಿಬರುವಂತಹ ಸಂಭವ ಕಡಿಮೆ. ನನ್ನ ಪಾಠ ಹಿಡಿಸದಿದ್ದರೆ ತರಗತಿಯಿಂದ ಹೊರನಡೆದು ಸ್ವಸ್ಥವಾಗಿರುವ ಸ್ವಾತಂತ್ರ್ಯವು ವಿದ್ಯಾರ್ಥಿಗಳಿಗೆ ಸದಾ ಇರುತ್ತಿದ್ದುದರಿಂದ ಅವರು ತರಗತಿಯಲ್ಲೇ ಉಳಿದು ನನಗೆ ಸವಾಲೆಸೆದು ಮುಜುಗರಕ್ಕೆ ಸಿಲುಕಿಸುವ ಸಾಧ್ಯತೆ ಬಹಳ ಕಡಿಮೆ ಇರುತ್ತಿತ್ತು. ತರಗತಿಗಳಲ್ಲಿ ಆಗಾಗ್ಗೆ ಏನಾದರೂ ದೊಡ್ಡದೋ ಅಥವಾ ಚಿಕ್ಕದೋ ಆದ ಪ್ರಮಾಣದಲ್ಲಿ ಗುಸುಗುಸು ಆರಂಭವಾದರೆ ಅದನ್ನು ಅಡಗಿಸಲು ಸಿದ್ಧಸೂತ್ರವೊಂದು ಇರುತ್ತಿತ್ತು. "ನನ್ನ ಉಪನ್ಯಾಸವನ್ನು ಕೇಳದೆ ಸಂತೋಷಿಸುವ ಅವಕಾಶ ನಿಮಗೆ ತೆರೆದಿಟ್ಟಿದೆ, ಆ ಸ್ವಾತಂತ್ರ್ಯವನ್ನು ಚಲಾಯಿಸಬಹುದಲ್ಲಾ" ಎಂದರಾಯಿತು. ಬೇಕಾದವರು ಹೊರಗೆ ಹೋಗಿ ಕಿಲಕಿಲನೆ ಸುತ್ತಣ ಆಗುಹೋಗುಗಳನ್ನು ಸವಿಯುತ್ತಾ ತಮ್ಮ ಅನುಭವ ಪ್ರಪಂಚವನ್ನು ವಿಕಸಿಸಿಕೊಳ್ಳಲು ಮುಕ್ತವಾದ ಅವಕಾಶವಿರುತ್ತಿತ್ತು. ಅಥವಾ, "ನಿಮ್ಮ ಗಲಾಟೆಗೆ ಅಂಜದೆ ನನ್ನ ಶಂಖ ನಾನು ಊದುತ್ತೇನೆ, ನೀವೂ ಆತಂಕವಿಲ್ಲದೆ ಪರಸ್ಪರ ಮಾತನಾಡಿಕೊಳ್ಳುತ್ತಿರಿ" ಎಂದು ಹೇಳಿ ವಿದ್ಯಾರ್ಥಿಗಳಿಂದ ಬರಬಹುದಾದ ಸವಾಲನ್ನು ಇಲ್ಲವಾಗಿಸಿಕೊಳ್ಳಬಹುದಿತ್ತು.

ಅಂದರೆ, ಅಧ್ಯಾಪಕನಾಗುವ ಅವಕಾಶ ದೊರೆತಾಗಲೇ ಒಂದು ರೀತಿ ಸವಾಲುರಹಿತವಾದ ಸುಗಮ ಮತ್ತು ಹರ್ಷದಾಯಕ ಜೀವನ ನನ್ನದಾಯಿತು. ಹೆಚ್ಚೆಂದರೆ, ಸ್ವಲ್ಪ ಪೂರ್ವತಯಾರಿ ನಡೆಸಿಕೊಂಡು ಹೋಗಬೇಕೆಂಬ ಜವಾಬ್ದಾರಿ ಅಥವಾ ಪ್ರಜ್ಞೆಯನ್ನು ನನ್ನ ವೃತ್ತಿ ನನಗೆ ನೀಡಿತು. ಆ ಪೂರ್ವ ತಯಾರಿ ಸಹ ಮುದ ನೀಡುವಂಥದೇ ಆಗಿರುತ್ತಿತ್ತೇ ವಿನಾ ಹೊರೆ ಎನಿಸುತ್ತಿರಲಿಲ್ಲ. ಇಷ್ಟಾಗಿಯೂ ಏನಾದರೂ ಕಠಿಣ ಪರಿಸ್ಥಿತಿ ಉಂಟಾದರೆ ನೇರವಾಗಿ ವಿದ್ಯಾರ್ಥಿಗಳಿಗೆ ಅರಿಕೆ ಮಾಡಿಕೊಳ್ಳಬಹುದಿತ್ತು: "ಇದೇನೋ ನನಗೆ ತಿಳಿಯುತ್ತಿಲ್ಲ, ಮುಂದಿನ ತರಗತಿಯಲ್ಲಿ ಅದನ್ನು ವಿವರಿಸಿ ಹೇಳುತ್ತೇನೆ" ಎಂದು. ಆತ್ಮೀಯತೆಯನ್ನು ಸುಲಭವಾಗಿ ಬೆಳೆಸಿಕೊಳ್ಳಬಹುದಾದ ವೃತ್ತಿಗೆ ಸೇರಿದ್ದರಿಂದ ಸವಾಲುಗಳ ಬಾಧೆಯು ನನ್ನನ್ನು ಅಷ್ಟಾಗಿ ತಟ್ಟಿಲ್ಲ.

ನಾನು ಪ್ರೌಢಶಾಲೆಯ ವಿದ್ಯಾರ್ಥಿಯಾಗಿದ್ದಾಗಿನ ಒಂದು ಘಟನೆ ನನ್ನ ನೆನಪಿನಲ್ಲಿ ಉಳಿದಿದೆ. ೧೯೫೦ರ ದಶಕ ಅದು. ಹಳ್ಳಿಯಿಂದ ಶಾಲೆಗೆ ಹೋಗುತ್ತಿದ್ದ ನಮಗೆ ಕುಡಿಯಲು ನೀರಿನ ಸೌಲಭ್ಯ ಇರುತ್ತಿರಲಿಲ್ಲ. ನೀರನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗುವ ಪದ್ಧತಿಯೂ ಇರಲಿಲ್ಲ. ಶಾಲೆಯ ಹತ್ತಿರ ಒಂದು ಹೋಟೆಲು. ಹೋಟೇಲಿನವರು ಕೆರೆಯಿಂದ ಪೀಪಾಯಿಗಳಲ್ಲಿ ನೀರು ತುಂಬಿಕೊಂಡು ಬರುತ್ತಿದ್ದರು, ಆದರೆ ನಾವು ಹೋಗಿ ಕೇಳಿದರೆ ಒಂದು ಲೋಟ ನೀರು ಕೊಡುತ್ತಿರಲಿಲ್ಲ. ನಾವು ನಾಲ್ಕೈದು ಮಂದಿ ಹೋಗಿ ತಕರಾರು ಎತ್ತಿದೆವು. "ಸಪ್ಲೈಯರ್‌ಗೆ ಬಿಡುವಿರುವುದಿಲ್ಲ, ಕ್ಲೀನರ್ ಕೊಡುವ ನೀರು ಕುಡಿಯುವಂತಿದ್ದರೆ ಬಂದು ಧಾರಾಳವಾಗಿ ಕುಡಿದುಕೊಂಡು ಹೋಗಿ" ಎಂದರು ಮಾಲೀಕರು. ನಾವೇನೋ ವಿಜಯ ಸಾಧಿಸಿದವರಂತೆ ಹಿಗ್ಗುತ್ತಾ ಹೊರನಡೆದೆವು. "ಕ್ಲೀನರ್ ಕೊಟ್ಟ ನೀರು ಕುಡಿದಿರಾ?" ಎಂದು ಕೆಲವು ಸಹಪಾಠಿಗಳು ಹಂಗಿಸಿದರು. ನಮ್ಮ ದೇಶದ ಒಂದು ನಿರಂತರ ಸವಾಲು ನಮಗೆ ಪರಿಚಯವಾದ್ದು ಹೀಗೆ. ಕೆಲವೇ ದಿನಗಳ ನಂತರ ಅದೇ ಹೋಟೇಲಿನಲ್ಲಿ ನಮ್ಮ ಉಪಾಧ್ಯಾಯರೊಬ್ಬರನ್ನು, ಇತರ ಉಪಾಧ್ಯಾಯರೊಡನೆ ಕೂತು ತಿಂಡಿ ತಿನ್ನಲು ಬಿಡಲಿಲ್ಲ. ಅವಮಾನಿತರಾಗಿ ಅವರು ಹೊರಬಂದಿದ್ದರು. ಆಗ ಮತ್ತೆ ನಾವು ನಾಲ್ಕೈದು ಮಂದಿ ಅವರ ಪರವಾಗಿ ಹೋಟೇಲಿನ ಮಾಲೀಕರೊಡನೆ ಜಗಳ ಮಾಡಿದ್ದೆವು. "ಬೇರೆ ಉಪಾಧ್ಯಾಯರು ಒಪ್ಪಿದರೆ ಇವರು ಅವರೊಡನೆ ಕೂತು ತಿನ್ನಲಿ, ನಮ್ಮದೇನೂ ಅಡ್ಡಿಯಿಲ್ಲ" ಎಂದು ಹೇಳಿ ನಮ್ಮನ್ನು ಸಾಗಹಾಕಿದರು. ಆ ಬೇರೆ ಉಪಾಧ್ಯಾಯರೆಲ್ಲಾ ಇಷ್ಟು ಕುಹಕಿಗಳೇ ಎಂಬ ಆಶ್ಚರ್ಯ ನಮಗೆ. ಹಾಗೆ ದೂರೀಕರಿಸಲ್ಪಟ್ಟಿದ್ದ ನಮ್ಮ ಉಪಾಧ್ಯಾಯ ಶ್ರೀ. ದೊಡ್ಡತಿಮ್ಮಯ್ಯನವರು ನಂತರ ಕೋಲಾರ ಮೀಸಲು ಕ್ಷೇತ್ರದಿಂದ ಲೋಕಸಭೆಗೆ ಚುನಾಯಿತರಾದರು, ನೆಹರು ಪ್ರಧಾನಿಯಾಗಿದ್ದಾಗ ಅವರು ಪಾರ್ಲಿಮೆಂಟರಿ ಕಾರ್ಯದರ್ಶಿಯಾಗಿದ್ದರು. ಆದರೆ ಅಂಥವರ ಬವಣೆ ಇನ್ನೂ ಸವಾಲಾಗಿಯೇ ಉಳಿದಿದೆ.

ಕೇವಲ ವೈಯ್ಯಕ್ತಿಕ ನೆಲೆಯಲ್ಲಿ ಎದುರಾಗುವ ಸವಾಲುಗಳಿಗಿಂತಲೂ ಸಾಮುದಾಯಿಕ ಸವಾಲುಗಳು ಮುಖ್ಯ. ಅಂಥವನ್ನು ಸಾಮುದಾಯಿಕವಾಗಿಯೇ ಎದುರಿಸುತ್ತೇವೆ. ೧೯೭೦ರ ದಶಕದಲ್ಲಿ ನಮ್ಮ ಕಾಲೇಜನ್ನು ಸ್ವಾಧೀನಪಡಿಸಿಕೊಳ್ಳುವ ಹುನ್ನಾರದಲ್ಲಿ ಒಂದು ಪ್ರತಿಗಾಮಿ ಪಂಥದವರು ಸ್ವಲ್ಪಮಟ್ಟಿಗೆ ಯಶಸ್ವಿಯಾಗಿಬಿಟ್ಟಿದ್ದರು. ಅವರನ್ನು ಮೆಟ್ಟಿ ನಿಲ್ಲುವುದು ಒಂದು ಸವಾಲಾಗಿತ್ತು. ಅದು ವೈಯ್ಯಕ್ತಿಕ ನೆಲೆಯ ಲಾಭ ಅಥವಾ ನಷ್ಟದ ಪ್ರಶ್ನೆಯಾಗಿರಲಿಲ್ಲ, ಆದರೆ ಸಂಸ್ಥೆಯ ದೃಷ್ಟಿಯಿಂದ ಬಹಳ ಮಹತ್ವದ ವಿಷಯವಾಗಿತ್ತು. ಅದನ್ನು ಹೇಗೆ ಎದುರಿಸಿದೆವೆಂಬುದು ಗೌಣ, ಆದರೆ ಸಂಘಟಿತವಾಗಿ ಎದುರಿಸಿ ಸಫಲವಾದುವೆಂಬುದು ಮುಖ್ಯ. ನನ್ನನ್ನು ಕಾಡಿರುವ ಮತ್ತು ಇಂದಿಗೂ ಕಾಡುವ ಸವಾಲುಗಳೆಂದರೆ ಸಮುದಾಯಕ್ಕೆ ಸಂಬಂಧಪಟ್ಟುವೇ ಆಗಿವೆ. ಸ್ವಂತದ ಜೀವನದಲ್ಲಿ ಅಷ್ಟೋ ಇಷ್ಟೋ ಸವಾಲುಗಳಿದ್ದು, ಅವನ್ನೆದುರಿಸಿದ್ದರೆ ಅದು ಹೊರಗಿನವರಿಗೆ ಅಪ್ರಸ್ತುತವೆಂಬುದು ನನ್ನ ನಂಬಿಕೆ. ಎಲ್ಲರ ಜೀವನದಲ್ಲೂ ಅಂತಹ ಸಂಗತಿಗಳಿರುತ್ತವೆ. ಅವಕ್ಕೆ ಪತಂಜಲಿಯು ಯೋಗಸೂತ್ರದಲ್ಲಿ ಪರಿಹಾರ ಸೂಚಿಸಿದ್ದಾನೆ: "ವಿತರ್ಕಬಾಧನೇ ಪ್ರತಿಪಕ್ಷಭಾವನಂ." "ಅಯ್ಯೋ, ಬಿಕ್ಕಟ್ಟಿಗೆ ಸಿಲುಕಿಬಿಟ್ಟೆನಲ್ಲಾ" ಎಂದು ಪರಿತಪಿಸುವ ಬದಲು, ಅದಕ್ಕೆ ಪರ್ಯಾಯವಾವುದೋ ಅದನ್ನು ಮೈಗೂಡಿಸಿಕೊಂಡರೆ, ಅಥವಾ ಅದರ ಬಗ್ಗೆ ಆಸ್ಥೆ ಹೆಚ್ಚಿಸಿಕೊಂಡರೆ, ಸ್ವಲ್ಪ ಸರಳವಾಗಿಯೇ ಸವಾಲನ್ನು ಎದುರಿಸಬಹುದೆಂಬುದು ಅದರ ತಾತ್ಪರ್ಯ. ಅದನ್ನೇ ಇಂದು "ಪಾಸಿಟಿವ್ ಥಿಂಕಿಂಗ್" ಎನ್ನುತ್ತಾರೆ. ಅದಕ್ಕೆ ಅಗತ್ಯವಾದ ಮಾನಸಿಕ ಪ್ರವೃತ್ತಿಯನ್ನು ನಮ್ಮದಾಗಿಸಿಕೊಳ್ಳಲು ನಿರ್ದಿಷ್ಟ ವಿಧಾನಗಳಿವೆ. ಬಾಹ್ಯ ಸನ್ನಿವೇಶವು ಹದಗೆಟ್ಟಿದ್ದರೆ ಕೇವಲ "ಪಾಸಿಟಿವ್ ಥಿಂಕಿಂಗ್"ನಿಂದ ಅದನ್ನು ಹಸನುಗೊಳಿಸಲು ಆಗದು. ಅದರಿಂದ ವಿಮುಖರಾಗಲು ಸಾಧ್ಯ. ಆದರೆ ಪರಿಸ್ಥಿತಿಯನ್ನು ಸರಿಪಡಿಸುವ ಕ್ರಿಯೆಗೆ ಅದು ಪೂರಕವಲ್ಲ. "ತನ್ನನ್ನು ತಾನು ನಿರ್ವಹಿಸಿಕೊಳ್ಳಲು ಜಗತ್ತಿಗೆ ಅನನ್ಯ ಸಾಮರ್ಥ್ಯವಿದೆ" ಎಂಬ ಪ್ರಮೇಯವೊಂದನ್ನು ಸ್ಟೀಫನ್ ಹಾಕಿಂಗ್ ನಿಚ್ಚಳವಾಗಿ ಪ್ರತಿಪಾದಿಸುತ್ತಿದ್ದರು. ಅದನ್ನು ವ್ಯಕ್ತಿಗಳ ಸನ್ನಿವೇಶಗಳಿಗೆ ಅನ್ವಯಿಸಿಕೊಳ್ಳಲು ಸಾಧ್ಯ. ಅಹಂಭಾವಕ್ಕೆ ಎಡೆಕೊಡದೆ ಹೇಳಬಹುದಾದರೆ ಎಷ್ಟೋ ಮಂದಿ ಸಿದ್ಧಿಸಿಕೊಂಡಿರುವ ಈ ಪರಿಣಾಮವನ್ನು ನಾನೂ ತಕ್ಕಮಟ್ಟಿಗೆ ಪಡೆದುಕೊಂಡಿದ್ದೇನೆ.

ನಾವಿಂದು ಸಾಮುದಾಯಿಕವಾಗಿ ಹಲವು ಕ್ಲಿಷ್ಟ ಸಾಂಸ್ಕೃತಿಕ ಸವಾಲುಗಳನ್ನು ಸ್ವೀಕರಿಸಲೇಬೇಕಾದ ಹಂತದಲ್ಲಿದ್ದೇವೆ. "ವಿತರ್ಕಬಾಧನೇ ಪ್ರತಿಪಕ್ಷಭಾವನಂ" ಎಂಬುದು ಅದಕ್ಕೆ ಸಾಲದೆನ್ನುವ ಹತಾಶೆ ನಮ್ಮಲ್ಲಿ ಮೂಡಿದರೂ ಆಶ್ಚರ್ಯವಿಲ್ಲ. ಅದಕ್ಕೂ ಪತಂಜಲಿಯ ಉತ್ತರವಿದೆ: "ವಿತರ್ಕಾ ಹಿಂಸಾದಯಃ ಕೃತಕಾರಿಕಾ – ಅನುಮೋದಿತ ಲೋಭ–ಕ್ರೋಧ–ಮೋಹ ಪೂರ್ವಕಾ ಮೃದು – ಮಧ್ಯಾದಿ ಮಾತ್ರ ದುಃಖ – ಅಜ್ಞಾನ – ಅನಂತಫಲಾ ಇತಿ ಪ್ರತಿಪಕ್ಷ ಭಾವನಂ." ಅಂದರೆ, ಇಂದಿನ ಸಾಂಸ್ಕೃತಿಕ ಸವಾಲುಗಳ ಮೂಲವನ್ನು ಶೋಧಿಸಿ ಮುಂದುವರಿಯಬೇಕೆಂಬ ಸೂಚನೆ ಇಲ್ಲಿದೆ. ವಿಶ್ವವನ್ನು ಅರ್ಥೈಸುವುದನ್ನು ಸಾವಿರಾರು ರೀತಿಗಳಲ್ಲಿ ಮಾಡಲಾಗಿದೆ, ಆದರೆ ಅದನ್ನು ಬದಲಿಸುವುದು ಹೇಗೆಂಬುದೇ ಸವಾಲು. ಯಾವ ಬಿಕ್ಕಟ್ಟೂ ಯಾದೃಚ್ಛಿಕವಾಗಿ ಥಟ್ಟನೆ ಸೃಷ್ಟಿಯಾಗುವುದಿಲ್ಲ. ಆದ್ದರಿಂದ ವೈಚಾರಿಕವಾಗಿ ಅದನ್ನು ವಿಶ್ಲೇಷಿಸಿಕೊಂಡು ಹೆಜ್ಜೆಯಿಡಬೇಕು. ಬುದ್ಧನ "ಪ್ರತೀತ್ಯ ಸಮುತ್ಪಾದ" ಎಂಬುದು ಇದಕ್ಕೆ ಮಾರ್ಗದರ್ಶಿ ಸೂತ್ರವಾಗುತ್ತದೆ. ಎಲ್ಲ ಸವಾಲುಗಳನ್ನೂ ಕಾರ್ಯ – ಕಾರಣ ಭಾವದ ವಿವೇಚನೆಯಿಂದ ಪರಾಮರ್ಶಿಸಬೇಕೆಂಬುದು ಅದರ ಆಶಯ. ಲೋಕಾನುಭವವು ಯಾವುದೇ ಪರಿಸ್ಥಿತಿಯ ಉದ್ಭವಕ್ಕೆ ಕಾರಣಗಳನ್ನು ಗುರುತಿಸಲು ಸಹಾಯ ಮಾಡುತ್ತದೆ. ಯಾವ ಕಾರಣ ಅಥವಾ ಕಾರಣಗಳಿಂದ ಅನಪೇಕ್ಷಿತ ಪರಿಸ್ಥಿತಿಯ ನಿರ್ಮಾಣವಾಗಿದೆಯೋ ಆ

ಕಾರಣವನ್ನು ಇಲ್ಲವಾಗಿಸುವುದು ನಮಗಿರುವ ಒಂದೇ ಹಾದಿ. ಪರಿಸ್ಥಿತಿಯು ಕೇವಲ ಒಬ್ಬ ವ್ಯಕ್ತಿಯಿಂದ ಉಂಟಾಗಿರುವುದಿಲ್ಲ ಮತ್ತು ಅದು ಒಂದು ದಿನದಲ್ಲಿ ಘಟಿಸಿರುವುದಿಲ್ಲ. ನಾವು ಸಾಮುದಾಯಿಕವಾಗಿ ಮತ್ತು ಪ್ರಜ್ಞಾಪೂರ್ವಕವಾಗಿ ಮಧ್ಯಪ್ರವೇಶ ಮಾಡುವುದರಿಂದ ಪರ್ಯಾಯದ ನಿರ್ಮಿತಿಗೆ ಸಾಧನೆಗಳಾಗಬಲ್ಲೆವು. ಸಮುದಾಯದ ಒಂದು ಅವಿಚ್ಛಿನ್ನ ಭಾಗವಾಗಿ ನಾನು ಸವಾಲುಗಳನ್ನೆದುರಿಸಲು ಮುಂದಾಗುವುದು ಈ ಹಾದಿಯಲ್ಲೇ.

ಕಾಲೇಜು ಮತ್ತು ವಿಶ್ವವಿದ್ಯಾನಿಲಯಗಳ ಅಧ್ಯಾಪಕರ ಸಂಘಗಳಲ್ಲಿ ಕಾರ್ಯಕರ್ತನಾಗಿ ರಾಜ್ಯ ಮತ್ತು ಅಖಿಲ ಭಾರತ ಮಟ್ಟದಲ್ಲಿ ಎರಡು ದಶಕಗಳಿಗೂ ಹೆಚ್ಚು ಕಾಲ ನಾನು ಕೆಲಸ ಮಾಡಿದ್ದೇನೆ. ಆ ಕೆಲಸದಲ್ಲಿ ಸಹಜವಾಗಿಯೇ ಸವಾಲುಗಳನ್ನೆದುರಿಸುವುದು ಅನಿವಾರ್ಯವಾಗಿರುತ್ತಿತ್ತು. ನಾನಾಗಲಿ, ಬೇರೆಯವರಾಗಲಿ, ಅಲ್ಲಿಯ ಅಂದಂದಿನ ಸನ್ನಿವೇಶಗಳನ್ನು ಏಕಾಂಗಿಗಳಾಗಿ ಅನುಭವಿಸಲಿಲ್ಲ, ಎದುರಿಸಲಿಲ್ಲ. ಸವಾಲುಗಳ ಮೌಲಿಕತೆ ಇರುವುದು ಅವು ಸಾರ್ವಜನಿಕ ವಲಯಗಳಿಗೆ ಸಂಬಂಧಿಸಿದಾಗ. ನಮ್ಮೆಲ್ಲ ಹಿರಿಯ ನಾಯಕರೂ ಅಂತಹ ಪ್ರಶ್ನೆಗಳನ್ನು ಎದುರಿಸಿದವರೇ ಆಗಿದ್ದಾರೆ. ಅವರ ವೈಯ್ಯಕ್ತಿಕ ಜೀವನದ ಸವಾಲುಗಳು ಸಾರ್ವಜನಿಕ ಜೀವನದ ಹಿನ್ನೆಲೆಯಲ್ಲಿ ಹುಟ್ಟಿದಂಥವು. ಚಿಕ್ಕ ಪ್ರಮಾಣದಲ್ಲೇ ಆದರೂ ಸಾಮಾನ್ಯವಾಗಿ ಎಲ್ಲರೂ ಅಂತಹ ಸವಾಲುಗಳ ಉತ್ಪನ್ನಗಳೇ ಎನ್ನಬಹುದು. ತೀರಾ ವೈಯ್ಯಕ್ತಿಕ ನೆಲೆಯಲ್ಲಾದರೆ ನಾವು ಶಿಕ್ಷಣ ಪಡೆಯಲು, ಹೊಟ್ಟೆ ಹೊರೆಯಲು, ಸೌಲಭ್ಯಗಳನ್ನು ಹೆಚ್ಚಿಸಿಕೊಳ್ಳಲು, ಏನೇನೋ ಪಡಿಪಾಟಲುಗಳನ್ನು ಅನುಭವಿಸಿರುತ್ತೇವೆ. ಅಂತಹ ಸವಾಲುಗಳಿಲ್ಲದೆಯೇ ಮೇಲೇರಿರುವ ಮಂದಿ ನಮ್ಮಲ್ಲಿದ್ದಾರೆ, ಆದರೆ ಅವರು ಅಲ್ಪಸಂಖ್ಯಾಕರು. ಸಮುದಾಯವು ಎಷ್ಟು ಏಳಿಗೆ ಹೊಂದಿದೆ ಅಥವಾ ಹೊಂದಿಲ್ಲ ಎಂಬುದಕ್ಕೆ ಈ ಸಂಖ್ಯೆಯು ಒಂದು ಮಾಪಕವೆನ್ನಬಹುದು. ನಾನು ವಿದ್ಯಾರ್ಥಿಯಾಗಿದ್ದಾಗ ಭಿಕ್ಷಾನ್ನ ಮತ್ತು ವಾರಾನ್ನಗಳಿಂದ ಪೋಷಣೆ ಪಡೆದಿದ್ದೇನೆ. ಅದಕ್ಕೆ ಸಂಕೋಚಪಡುವುದಾಗಲಿ ಅಥವಾ ಅದನ್ನು ವೈಭವೀಕರಿಸುವುದಾಗಲಿ ಅನಗತ್ಯ. ಆದರೆ ಇಂದು ಅಂಥವರ ಸಂಖ್ಯೆ ಕಡಿಮೆಯಾಗಿರುವುದು ಸ್ವಾಗತಾರ್ಹ ಬೆಳವಣಿಗೆ. ನನ್ನ ಔಪಚಾರಿಕ ಶಿಕ್ಷಣವೆಲ್ಲಾ ೧೯೫೦ರ ದಶಕಕ್ಕೆ ಸೇರಿದ್ದು. ಅಂದಿಗೆ ಎಸ್.ಎಸ್.ಎಲ್.ಸಿ.ಯಿಂದ ಎಂ.ಎ.ವರೆಗೆ ವ್ಯಾಸಂಗ ಮಾಡಲು ನಾನು ಬಹಳ ಜಾಸ್ತಿಯೆಂದರೆ ಐದುನೂರು ರೂಪಾಯಿ ಶಿಕ್ಷಣ ಶುಲ್ಕ ನೀಡಿರಬಹುದು, ಮುನ್ನೂರು ರೂಪಾಯಿ ಪರೀಕ್ಷಾ ಶುಲ್ಕ ನೀಡಿದ್ದಿರಬಹುದು; ಆದರೆ ಶಿಷ್ಯವೇತನವಾಗಿ ಸುಮಾರು ಸಾವಿರದೈನೂರು ರೂಪಾಯಿ ಪಡೆದಿದ್ದೆನೆಂಬುದು ವಾಸ್ತವ. ನಾನು ಅನುಕೂಲಸ್ಥ ಕುಟುಂಬಕ್ಕೆ ಸೇರಿರದಿದ್ದರೂ ಜೀವನ ಮತ್ತು ಶಿಕ್ಷಣಕ್ಕೆ ಮುಗ್ಗಟ್ಟು ಉಂಟಾಗಲಿಲ್ಲ. ಆದರೆ ಅಂದಿನ ಸಮುದಾಯದಲ್ಲಿ ನಾನು ಪಡೆದಷ್ಟು ಸಹ ಪಡೆಯಲಾಗದೆ ಹಿಂದುಳಿದುಹೋದವರ ಸಂಖ್ಯೆ ಅಪಾರ. ಅದೊಂದು ಚಾರಿತ್ರಿಕ ಘಟ್ಟದ ಪರಿಣಾಮ. ಹಾಗೆ ಹಿಂದುಳಿದವರನ್ನೆಲ್ಲಾ ಸವಾಲನ್ನು ಎದುರಿಸುವುದರಲ್ಲಿ ಸೋತವರು ಎಂದು ಹೇಳಲಾಗುವುದಿಲ್ಲ. ನನ್ನ ವರ್ಗ ಮತ್ತು ವರ್ಣದವರಿಗಿದ್ದ ಅವಕಾಶಗಳು ಎಲ್ಲರಿಗೂ ದಕ್ಕುವಂತಿರಲಿಲ್ಲವೆಂಬುದು ಅಂದಿನ ದುರಂತ. ಆ ದುರಂತವಿನ್ನೂ ಪೂರ್ತಿಯಾಗಿ ನಿವಾರಣೆಯಾಗುವ ವ್ಯವಸ್ಥೆ ನಮ್ಮಲ್ಲಿ ನಿರ್ಮಾಣವಾಗಿಲ್ಲ. ಅದರ ನಿರ್ಮಾಣಕ್ಕೆ ಕೈ ಜೋಡಿಸುವುದು ನನಗೆ ಮೂಲಭೂತ ಸವಾಲಾಗಬೇಕು. ನನ್ನ ಸೀಮಿತ ಸಾಮರ್ಥ್ಯಕ್ಕೆ ಅನುಗುಣವಾಗಿ ಆ ಸವಾಲನ್ನು ಸ್ವೀಕರಿಸಲು ನಾನು ಸಿದ್ಧನಿದ್ದೇನೆ.

**ಜಿ. ರಾಮಕೃಷ್ಣ**
ಸೌಜನ್ಯ : ಆಕಾಶವಾಣಿ, ಬೆಂಗಳೂರು

# ಸಂಸ್ಕೃತಿಯೆಂಬ ಕೃತಿ



ಕಾವ್ಯಲೋಕ

**ಸ**ಂಸ್ಕೃತಿ ಮಾನವ ಬದುಕಿನ ಕೃತಿ
ಆ ಕೃತಿಯೊಳಗಿದೆ ಮಾನವ ಸ್ಮೃತಿ
ಸ್ಮೃತಿಯೇ ಮಾನವ ಜಾಗೃತಿ
ಜಾಗೃತಿಯೇ ಮಾನವ ಬದುಕಿನ ನಿರ್ಮಿತಿ
ನಿರ್ಮಿತಿಗೆ ಎದುರಾಗಿದೆ ವಿಸ್ಮೃತಿ
ವಿಸ್ಮೃತಿಯ ಪೊರೆ ಕಳಚುತ್ತಿದೆ ಅಸ್ಮಿತಿ
ಅಸ್ಮಿತಿಗೆ ಬೇಕಾಗಿದೆ ಹೋರಾಟದ ಪ್ರವೃತ್ತಿ
ಆದರೆ ಹೋರಾಟಕ್ಕಾಗಿದೆ ನಿವೃತ್ತಿ

ಮುಖವಾಡ ಧರಿಸಿದೆ ಹೋರಾಟವೆಂಬ ಆಕೃತಿ
ಆಕೃತಿಯೊಳಗಿದೆ ವಿಕಾರ ವಿಕೃತಿ
ಹುಟ್ಟುಹಾಕಿದೆ ವಿಚಿತ್ರ ಭ್ರಾಂತಿ
ಬದುಕನ್ನು ಕಟ್ಟಿಹಾಕಿದೆ ಪರರ ಆಣತಿ
ದಿಕ್ಕು ತಪ್ಪುತ್ತಿದೆ ಹೋರಾಟದ ಗತಿ
ಸಮಾಜ ಕಳೆದುಕೊಳ್ಳುತ್ತಿದೆ ತನ್ನ ಮತಿ

ಜಡ್ಡುಗಟ್ಟಿದ ಸಮಾಜದಲ್ಲಿ ಸಂಸ್ಕೃತಿಯೆಂಬುದು ಪರರ ಕೃತಿ
ಅದರೊಳಗಿಲ್ಲ ಅಲಕ್ಷಿತರ ಅಭಿವ್ಯಕ್ತಿ
ಜಾಗ ಕೊಟ್ಟರೂ ಅಲ್ಲಿರಬೇಕು ಶರಣಾಗತಿ
ಹುಟ್ಟುಹಾಕಬೇಕಿದೆ ಪ್ರತಿ ಸಂಸ್ಕೃತಿ
ಅದುವೇ ಸ್ವಾಭಿಮಾನದ ಬದುಕಿನ ಕ್ರಾಂತಿ

ಸಂಸ್ಕೃತಿಯ ಮುರಿದು ಕಟ್ಟಲು ಬೇಕಿದೆ ಹೊಸ ಸಿದ್ಧಾಂತಿ
ಆದರೆ ಮುರಿದುಬೀಳುತ್ತಿದೆ ಸಿದ್ಧಾಂತಿಯ ಮೂರ್ತಿ
ಮೂರ್ತಿಭಂಜನೆಯೇ ಕೆಲವರ ವೃತ್ತಿ
ನಕಲಿ ಸಿದ್ಧಾಂತವಾಗುತ್ತಿದೆ ಜೀವನ ಪದ್ಧತಿ
ಕಾಣೆಯಾಗುತ್ತಿದೆ ಹೊಸತನದ ಮನಸ್ಥಿತಿ
ಯಾಂತ್ರಿಕ ಬದುಕಿನಲ್ಲಾಗಿದೆ ಮಾನವೀಯತೆಯ ಅವನತಿ
ಮನುಷ್ಯಸಂಬಂಧಕ್ಕೆ ಎದುರಾಗಿದೆ ವಿನಾಶದ ದುಸ್ಥಿತಿ
ವಿರೂಪಗೊಳ್ಳುತ್ತಿದೆ ಸಂಸ್ಕೃತಿಯೆಂಬ ಕೃತಿ

ಆದರೂ ಒಂದಷ್ಟು ಮನಸ್ಸುಗಳಿಗಿದೆ ಧೃತಿ
ಆ ಮನಸ್ಸುಗಳೇ ಭವಿಷ್ಯದ ಆಸ್ತಿ
ಏಕೆಂದರೆ ವಿಚಾರಗಳಿಗಿಲ್ಲ ಎಂದೆಂದಿಗೂ ನಿವೃತ್ತಿ
ಗತ–ವರ್ತಮಾನದ ಹಂಗಿಲ್ಲದೆ ಸಾಗಿದೆ ವಿಚಾರವೆಂಬ ಜೀವನೋಕ್ತಿ
ಪಕ್ಕಕ್ಕೆ ಸರಿಸಬೇಕಿದೆ ಮೋಕ್ಷದ ಶಾಸ್ತ್ರೋಕ್ತಿ
ವರ್ತಮಾನಕ್ಕೆ ಬೇಕಿದೆ ಕಾಯಕದ ಜನೋಕ್ತಿ
ಕಾಲಕ್ಕೆ ತಕ್ಕಂತೆ ಬದಲಾಗಬೇಕಿದೆ ಸಂಸ್ಕೃತಿಯೆಂಬ ಕೃತಿ

**ಡಾ॥ ಕೆ. ಮೋಹನ್‌ಕೃಷ್ಣ ರೈ,** ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬



ಮರೆಯಾದ ಗ್ರಾಮ್ಯ ಬದುಕು
(Oil)



ನಮ್ಮ ಗ್ರಾಮ್ಯ ಮಹಿಳೆ
(Poster Colour)



ಆಸೆ ಎಂಬ ಬಿಸಿಲ್ಗುದುರೆ
(Acrylic)

# ಮೈಸೂರು ಆರ್ಟ್ ಗ್ಯಾಲರಿಯ ಖ್ಯಾತ ಚಿತ್ರಕಲಾವಿದ ಎಲ್. ಶಿವಲಿಂಗಪ್ಪ



ಇವರು ಚಿತ್ರ ಕಲಾವಿದರಲ್ಲದೆ, ಶಿಲ್ಪಿ, ಲೇಖಕ ಹಾಗೂ ಛಾಯಾಚಿತ್ರಕಾರರು. ತಮ್ಮ ೭೦ನೇ ವರುಷದ ಸಂದರ್ಭಕ್ಕೆ 'ನಡೆದು ಬಂದ ಹೆಜ್ಜೆ ಗುರುತುಗಳೆಂದು' ೭೦ ಜನಪರ ಕಲಾಕೃತಿಗಳನ್ನು ಇತ್ತೀಚೆಗಷ್ಟೆ ಚಿತ್ರಕಲಾ ಪರಿಷತ್ತಿನಲ್ಲಿ ಪ್ರದರ್ಶಿಸಿದರು. ಅವರಿಗೆ 'ಹೊಸತು' ಬಳಗವು ಅಭಿನಂದನೆಗಳನ್ನು ಸಲ್ಲಿಸುತ್ತದೆ.

ತಮ್ಮ ನೈಜ ಕಲೆಯಿಂದ ನವ್ಯ ಕಲೆಯವರೆಗೆ ನೂರಾರು ಶಿಲ್ಪ ಮತ್ತು ಚಿತ್ರಗಳನ್ನು ದೇಶಾದ್ಯಂತ ಪ್ರದರ್ಶಿಸಿದ್ದಾರೆ. ಕಲಾಕ್ಷೇತ್ರಕ್ಕೆ ಸಂಬಂಧಿಸಿದ ವೈವಿಧ್ಯಮಯವಾದ ಸಾಹಿತ್ಯ ಕೃತಿಗಳನ್ನು, ಅಂಕಣ ಬರಹಗಳನ್ನು ಪ್ರಕಟಿಸಿದ್ದಾರೆ. ಅನೇಕ ಪ್ರಶಸ್ತಿಗಳು ಪುರಸ್ಕಾರ, ಸನ್ಮಾನಗಳಿಗೆ ಭಾಜನರಾಗಿದ್ದಾರೆ. 'ಮೈಸೂರು ಆರ್ಟ್ ಗ್ಯಾಲರಿ'ಯೆಂದು ಪ್ರಸಿದ್ಧವಾಗಿರುವ ಅವರ ಮನೆಯಲ್ಲಿ ಎಲೆ ಮರೆಯ ಕಾಯಿಯಂತಿರುವ ಚಿತ್ರಕಲೆ, ಸಂಗೀತ, ಶಿಲ್ಪ, ನಾಟಕ, ಸಾಹಿತ್ಯ, ನೃತ್ಯಕ್ಷೇತ್ರಗಳ ಕಲಾವಿದರನ್ನು ಗುರುತಿಸಿ, ಗೌರವಿಸಿ ಅವರೊಡನೆ ಸಂವಾದ ಕಾರ್ಯಕ್ರಮಗಳನ್ನು ನಡೆಸುತ್ತಾ ಬಂದಿದ್ದಾರೆ. ಹೀಗೆ ಅನೇಕ ಯುವಕಲಾವಿದರಿಗೆ ಮಾರ್ಗದರ್ಶಕರಾಗಿ ಕಲಾಸೇವೆ ಮಾಡುತ್ತಿದ್ದಾರೆ.



ಮನಸ್ಸೊಂದು–ಮಾತೊಂದು
(Oil)



ಶೋಷಿತ ಮಹಿಳೆ
(Sand casting)



ಕಂಬಿಯ ಹಿಂದಿನ ಬದುಕು
(Sand casting)



ತಾಯಿಮಗು
(Thermocole)

Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru. Editor : Dr. Siddanagouda Patil. © All rights reserved. Reproduction in whole or in part without permission is prohibited.

